ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ. ಹನುಮಂತಯ್ಯ



ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನ ಸೌಧ, ಬೆಂಗಳೂರು - 560 001

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಕೆ. ಹನುಮಂತಯ್ಯ

ಕರ್ನಾಟಕ ವಿಧಾನಸಭೆ ಸಚಿವಾಲಯ,
ವಿಧಾನಸೌಧ, ಬೆಂಗಳೂರು-560 001.

ಪ್ರತಿಭಾವಂತ ಸಂಸದೀಯ ಪಟುಗಳ
ಬದುಕು ಬರಹ ಮಾಲಿಕೆ
ಕೆ. ಹನುಮಂತಯ್ಯ

*Eminent Parliamentarian Series*
K. HANUMANTHAIAH



**ಮೊದಲ ಮುದ್ರಣ :**
ಡಿಸೆಂಬರ್, 1998 - 1,500 ಪ್ರತಿಗಳು

**ಮುಖಪುಟ ವಿನ್ಯಾಸ :**
**ಶ್ರೀ ಮೋಹನ್ ವೆರ್ಣೇಕರ್, ವರದಿಗಾರರು**
*ಕರ್ನಾಟಕ ವಿಧಾನಸಭೆ ಸಚಿವಾಲಯ*

**ಪ್ರಕಟಣೆ**
***ಕರ್ನಾಟಕ ವಿಧಾನಸಭೆ ಸಚಿವಾಲಯ***
***ವಿಧಾನಸೌಧ, ಬೆಂಗಳೂರು - 560 001.***

# ಪೀಠಿಕೆ

ನಮ್ಮ ದೇಶ ಸ್ವಾತಂತ್ರ್ಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸುಸಂದರ್ಭದಲ್ಲಿ ದೇಶಕ್ಕಾಗಿ ದುಡಿದು ಅಗ್ರಮಾನ್ಯ ಸಂಸದೀಯಪಟುಗಳಾಗಿ ಕೊಡುಗೆಯನ್ನು ನೀಡಿರುವ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕ ಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಕಿರುಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರ ತಂದಿರುತ್ತಾರೆ. ಅವುಗಳಲ್ಲಿ ಡಾ॥ ಬಿ. ಆರ್. ಅಂಬೇಡ್ಕರ್ ಡಾ॥ ರಾಂಮನೋಹರ ಲೋಹಿಯಾ ಮತ್ತು ಶೇಕ್ ಮಹಮದ್ ಅಬ್ದುಲ್ ಮತ್ತು ಕೃಷ್ಣಮನನ್ ಮೊದಲಾದ ಗಣ್ಯರ ಬಗ್ಗೆ ಆಂಗ್ಲ ಭಾಷೆಯಲ್ಲಿ ಪ್ರಕಟವಾಗಿದ್ದ ಕಿರುಹೊತ್ತಿಗೆಗಳನ್ನು ನಾವು ಕನ್ನಡದಲ್ಲಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸ ಬಯಸುತ್ತೇನೆ.

ವಿದಾನ ಪರಿಷತ್ತಿನ ಸನ್ಮಾನ್ಯ ಸಭಾಪತಿಯವರಾದ ಶ್ರೀ ಡಿ. ಬಿ. ಕಲ್ಮಣ್‌ಕರ್ ಹಾಗೂ ವಿಧಾನ ಸಭೆಯ ಸನ್ಮಾನ್ಯ ಅಧ್ಯಕ್ಷರಾದ ಶ್ರೀ ರಮೇಶ್‌ಕುಮಾರ್ ಅವರುಗಳು ಅಪೇಕ್ಷಿಸಿದಂತೆ ಕರ್ನಾಟಕದ ಏಳಿಗೆಗಾಗಿ ಶ್ರಮಿಸಿದ ಹಾಗೂ ಪ್ರತಿಭಾವಂತ ಸಂಸದೀಯಪಟುಗಳಾದ ಅನೇಕ ಮಹನೀಯರ ಕುರಿತ ಕಿರುಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು ಈ ಕಾರ್ಯವನ್ನು ವಿಧಾನಸಭೆಯ ಸದಸ್ಯರಾದ ಶ್ರೀ ಬಿ. ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿತವಾದ ವಿಧಾನಮಂಡಲದ ಗ್ರಂಥಾಲಯ ಉಪಸಮಿತಿಗೆ ವಹಿಸಲಾಗಿತ್ತು. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ವಿಶ್ವವಿದ್ಯಾನಿಲಯಗಳ ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತ ಗೊಳಿಸಲು ನಿರ್ಧರಿಸಿತು.

ಈ ಪ್ರತಿಭಾವಂತ ಸಂಸದೀಯಪಟುಗಳ ಮಾಲಿಕೆಯಲ್ಲಿ ಮೊದಲು ಕುಸುಮವಾಗಿ ಸ್ವಾತಂತ್ರ್ಯ ಹೋರಾಟಗಾರರಾಗಿ, ಮುಖ್ಯಮಂತ್ರಿಗಳಾಗಿ, ಸಂಸತ್ ಸದಸ್ಯರಾಗಿ, ಕೇಂದ್ರ ಸಚಿವರಾಗಿ ದೀರ್ಘಕಾಲ ಸಂಸದೀಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ ದಿವಂಗತ ಕೆಂಗಲ್ ಹನುಮಂತಯ್ಯನವರನ್ನು ಕುರಿತ ಈ ಕಿರುಹೊತ್ತಿಗೆಯನ್ನು ಹೊರತಂದಿದ್ದೇವೆ. ಈ ಕಿರುಹೊತ್ತಿಗೆಯನ್ನು ರಚಿಸುವ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ವಿದ್ವಾಂಸರಾದ ಡಾ॥ ಎನ್. ಬಿ. ಪಾಂಗಣ್ಣಾಯ, ಡಾ॥ ಹೆಚ್. ಆರ್. ಅಚ್ಯುತ್‌ರಾವ್

ಮತ್ತು ಡಾ॥ ಡಿ. ಎಸ್. ಜಯಪ್ಪಗೌಡ ಅವರಿಗೆ ವಹಿಸಿಕೊಡಲಾಯಿತು. ಅವರು ಅತ್ಯಂತ ಶ್ರದ್ಧೆ ಮತ್ತು ಪ್ರೀತಿಯಿಂದ ಈ ಕಾರ್ಯವನ್ನು ಅಲ್ಪಾವಧಿಯಲ್ಲಿ ಮಾಡಿಕೊಟ್ಟಿದ್ದಾರೆ. ಶ್ರೀಯುತರೆಲ್ಲರಿಗೂ ನಾವು ಅಭಾರಿಯಾಗಿದ್ದೇವೆ. ಈ ನಿಟ್ಟಿನಲ್ಲಿ ಸಹಕಾರ ನೀಡಿರುವ ಮೈಸೂರು ವಿಶ್ವವಿದ್ಯಾನಿಲಯಕ್ಕೆ ನಾವು ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಹಾಗೂ ಉಪ ಸಮಿತಿಯ ಸದಸ್ಯರುಗಳಿಗೂ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ ಮತ್ತು ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಅನುಭವ ನೀಡುತ್ತವೆ ಮತ್ತು ಉಪಯುಕ್ತವಾಗುತ್ತವೆಂದು ಭಾವಿಸುತ್ತೇನೆ.

**ಶ್ರೀ ಡಿ. ಬಿ. ಕಲ್ಮಣ್‌ಕರ್**
*ಸಭಾಪತಿಗಳು,*
*ಕರ್ನಾಟಕ ವಿಧಾನ ಪರಿಷತ್ತು*

**ಶ್ರೀ ರಮೇಶ್ ಕುಮಾರ್**
*ಅಧ್ಯಕ್ಷರು*
*ಕರ್ನಾಟಕ ವಿಧಾನ ಸಭೆ.*

*ಬೆಂಗಳೂರು,*
*ಅಕ್ಟೋಬರ್ - 1998*

# ಅರಿಕೆ

ಕರ್ನಾಟಕ ರಾಜ್ಯದ ವಿಧಾನಮಂಡಲವು ರಾಜ್ಯದ ಪ್ರತಿಭಾವಂತ ಸಂಸದೀಯಪಟುಗಳನ್ನು ಕುರಿತು ಬದುಕು-ಬರಹ ಮಾಲಿಕೆಯಲ್ಲಿ ಕಿರುಹೊತ್ತಿಗೆಗಳನ್ನು ಪ್ರಕಟಿಸಲು ತೀರ್ಮಾನಿಸಿದ್ದು. ನಿಜಕ್ಕೂ ಶ್ಲಾಘನೀಯವಾದ ಕಾರ್ಯ, ಇದರಿಂದ ಶಾಸಕಾಂಗಗಳಲ್ಲಿ ಸೇವೆ ಸಲ್ಲಿಸಿದ ಹಿರಿಯರ ಮತ್ತು ಪ್ರತಿಭಾವಂತರ ವಿಚಾರಗಳು ಮತ್ತು ಅನುಭವಗಳು ಅವರ ಉತ್ತಾರಾಧಿಕಾರಿಗಳಿಗೆ ದಾರಿದೀಪಗಳಾಗುವುದರಲ್ಲಿ ಸಂದೇಹವಿಲ್ಲ. ಈ ಯೋಜನೆಯಂತೆ ಮಾಡಿ ಮುಖ್ಯಮಂತ್ರಿಗಳಾದ ದಿವಂಗತ ಕೆ. ಹನುಮಂತಯ್ಯನವರನ್ನು ಕುರಿತು ಈ ಕಿರು ಹೊತ್ತಿಗೆ ಸಿದ್ಧಪಡಿಸುವ ಜವಾಬ್ಧಾರಿ ನಮ್ಮ ಪಾಲಿಗೆ ಬಂದಿತು.

ಕೆ. ಹನುಮಂತಯ್ಯನವರ ಸುಮಾರು ನಾಲ್ಕು ದಶಕಗಳ ಕಾಲದ ಸಂಸದೀಯ ಜೀವನ ಮತ್ತು ಅವರು ನಿರ್ವಹಿಸಿದ ದೊಡ್ಡ ದೊಡ್ಡ ಜವಾಬ್ದಾರಿ ಸ್ಥಾನಗಳು ಸಂಸಧೀಯ ಇತಿಹಾಸದಲ್ಲಿ ಅವರನ್ನು ಅವಿಸ್ಮರಣೀಯರನ್ನಾಗಿಸಿವೆ. ಅವರು ಉತ್ತಮ ವಾಗ್ಮಿಯೂ ವಿಚಾರವಂತರೂ ಆಗಿದ್ದು, ಇವುಗಳನ್ನು ಪ್ರತಿಬಿಂಬಿಸುವ ವಿಪುಲ ಸಾಮಾಗ್ರಿಗಳು ನಮಗೆ ದೊರೆತಿವೆ. ಈ ಸಾಮಾಗ್ರಿಗಳು ಶಾಸಕರಿಗೂ ಸಾಮಾನ್ಯ ಓದುಗರಿಗೂ ಉಪಯುಕ್ತವಾದರೆ ನಮ್ಮ ಶ್ರಮ ಸಾರ್ಥಕವಾಯಿತೆಂದು ಭಾವಿಸಿದ್ದೇವೆ. ಈ ಹೊತ್ತಿಗೆಯನ್ನು ರಚಿಸಲು ಸಾಕಷ್ಟು ಸ್ವಾತಂತ್ರ್ಯ ನೀಡಿದ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ನಾವು ಕೃತಜ್ಞರಾಗಿದ್ದೇವೆ. ಹಾಗೂ ನಮ್ಮನ್ನು ಪ್ರೋತ್ಸಾಹಿಸಿದ ಮೈಸೂರು ವಿಶ್ವವಿದ್ಯಾನಿಲಯದ ಸನ್ಮಾನ್ಯ ಕುಲಪತಿಗಳಾದ ಪ್ರೊ॥ ಎಸ್. ಎನ್. ಹೆಗ್ಗಡೆ ಅವರಿಗೂ ನಾವು ಋಣಿಗಳಾಗಿದ್ದೇವೆ.

ಮೈಸೂರು
ದಿನಾಂಕ : 31-10-1998

ಪ್ರೊ॥ ಎನ್. ಬಿ. ಪಾಂಗಣ್ಣಾಯ
ಪ್ರೊ॥ ಎಚ್. ಆರ್. ಅಚ್ಯುತರಾವ್
ಪ್ರೊ॥ ಡಿ. ಎಸ್. ಜಯಪ್ಪಗೌಡ

# ಪರಿವಿಡಿ

## ಭಾಗ-ಒಂದು



## ಭಾಗ-ಎರಡು

## ಭಾಗ - ಮೂರು



## ಭಾಗ - ನಾಲ್ಕು

# ಕೆ. ಹನುಮಂತಯ್ಯ - ವ್ಯಕ್ತಿ ಚಿತ್ರ

## ಬಾಲ್ಯ ಮತ್ತು ಶಿಕ್ಷಣ :

ಕರ್ನಾಟಕ ಕಂಡ ಸಂಸದೀಯಪಟುಗಳಲ್ಲಿ ಕೆ. ಹನುಮಂತಯ್ಯನವರು ಅಗ್ರಪಂಕ್ತಿಗೆ ಸೇರಿದವರಾಗಿದ್ದಾರೆ. ಅವರು ಬೆಂಗಳೂರು ಜಿಲ್ಲೆಯ ರಾಮನಗರ ತಾಲ್ಲೂಕಿನ ಲಕ್ಕಪ್ಪನಹಳ್ಳಿಯಲ್ಲಿ 1908ರ ಫೆಬ್ರವರಿ ಹತ್ತರಂದು ಜನಿಸಿದರು. ತಂದೆ ವೆಂಕಟೇಗೌಡರು, ತಾಯಿ ನಂಜಮ್ಮ. ಈ ದಂಪತಿಗಳಿಗೆ ಕೆಲವು ವರ್ಷಗಳ ಕಾಲ ಮಕ್ಕಳಿರಲಿಲ್ಲ. ಅವರು ಸಮೀಪದ ಕೆಂಗಲ್‌ನ ಹನುಮಂತರಾಯಸ್ವಾಮಿಗೆ ಸಂತಾನಕ್ಕಾಗಿ ಹರಕೆ ಹೊತ್ತಿದ್ದರು. ಇದರ ಫಲವಾಗಿ ಈ ಪುತ್ರರತ್ನ ಜನಿಸಿದನೆಂಬ ನಂಬುಗೆಯಿಂದ ಅವರು ಈ ಬಾಲಕನನ್ನು 'ಹನುಮ' ಎಂದು ಪ್ರೀತಿಯಿಂದ ಕರೆಯತೊಡಗಿದರು. ಶಾಲೆಗೆ ಸೇರಿಸುವಾಗ ಬಾಲಕನ ಹೆಸರು ಹನುಮಂತಯ್ಯ ಎಂದು ದಾಖಲಾಯಿತು. ಈ ದಂಪತಿಗಳಿಗೆ ಹನುಮಂತಯ್ಯನ ಅನಂತರ ಮೂವರು ಗಂಡು ಮಕ್ಕಳು ಜನಿಸಿದರು.

ಹನುಮಂತಯ್ಯನ ಪ್ರಾಥಮಿಕ ಶಿಕ್ಷಣ ತಾಯಿಯ ತವರೂರಾದ ಕೆಂಗೇರಿಯ ತಾಯಪ್ಪ ಎಂಬುವರ ಮನೆಯ ಆಶ್ರಯದಲ್ಲಿ ಪ್ರಾರಂಭವಾಯಿತು. ಕೆಳ ಮಧ್ಯಮ ವರ್ಗದ ರೈತ ಕುಟುಂಬಕ್ಕೆ ಸೇರಿದ್ದ ಹನುಮಂತಯ್ಯ ಬೆಳೆದದ್ದು ಕಷ್ಟಕರ ಪರಿಸರದಲ್ಲಿ. ತಾನು ವ್ಯಾಸಂಗ ಮಾಡುತ್ತಿದ್ದ ಮನೆಯಲ್ಲಿ ರಜಾ ದಿನಗಳಲ್ಲಿ ದನ ಕಾಯುವುದು, ಹೊಲ ಉಳುವುದು, ಇತ್ಯಾದಿ ರೈತಾಪಿ ಕೆಲಸಗಳಿಂದ ತಪ್ಪಿಸಿಕೊಳ್ಳುವಂತಿರಲಿಲ್ಲ. ಎಲ್ಲಿ ಓದು ಬಿಡಿಸುತ್ತಾರೋ ಎಂದು ಅಂಜಿ ಈ ಕಷ್ಟಗಳನ್ನೆಲ್ಲ ಸಹಿಸಿಕೊಂಡು ಓದಿನಲ್ಲಿ ತಲ್ಲೀನನಾಗುತ್ತಿದ್ದ. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ತೇರ್ಗಡೆಯಾದ.

ಮುಂದೆ ಓದು ಸಾಗಬೇಕಾದರೆ ಜಿಲ್ಲಾ ಕೇಂದ್ರವಾಗಿದ್ದ ಬೆಂಗಳೂರಿಗೆ ಬರಬೇಕಾಗಿತ್ತು. ಅಲ್ಲಿ ಸ್ವಂತ ವ್ಯವಸ್ಥೆಯಿಂದ ಓದಿಸುವುದು ಹನುಮಂತಯ್ಯನ ತಂದೆಗೆ ಸಾಧ್ಯವಿರಲಿಲ್ಲ. ಗುರುತು ಪರಿಚಯ ಮುಂದೆ ಮಾಡಿಕೊಂಡು ಕೆಲವರ ಆಶ್ರಯ ಕೇಳಿದರು. ಮೊದಲಿಗೆ ಮುನಿಸ್ವಾಮಪ್ಪ ಎಂಬುವರ ಮನೆಯಲ್ಲೂ ತರುವಾಯ ನಾರಾಯಣಸ್ವಾಮಿ ಎಂಬುವರ ಮನೆಯಲ್ಲೂ ಇದ್ದು ಪ್ರೌಢಶಾಲೆ ವಿದ್ಯಾಭ್ಯಾಸ ಮುಂದುವರಿಸಿದನು. ಇಲ್ಲಿ ಈ ಯುವಕನಿಗೆ ಪ್ರೀತ್ಯಾದರಗಳು ದೊರೆತವು. ಆದರೆ ಇನ್ನೊಬ್ಬರ ಮನೆಯಲ್ಲಿದ್ದು ಓದುವುದು ಸುಲಭದ ಮಾತಾಗಿರಲಿಲ್ಲ. ಆ ಕುಟುಂಬದ ಅಪೇಕ್ಷೆಗಳನ್ನು ಅರಿತು ನಡೆದುಕೊಳ್ಳಬೇಕಾಗಿತ್ತು. ಗಳಿಕೆಗಾಗಿ ನೆರೆಹೊರೆಯ ಮಕ್ಕಳಿಗೆ ಮನೆ ಪಾಠಗಳನ್ನು ಹೇಳಿಕೊಟ್ಟು ಅಲ್ಪಸ್ವಲ್ಪ

ಪ್ರತಿಫಲ ಪಡೆಯುವ ಪರಿಪಾಟ ಬೆಳೆಸಿಕೊಂಡ. ಮನೆಯಲ್ಲಿ ಓದಲು ಅಡಚಣೆಗಳಿದ್ದಾಗ ಬೀದಿ ದೀಪದಡಿ ಓದಿದ. ಹೀಗೆ ಬೀದಿ ದೀಪದಡಿ ಓದುತ್ತಿದ್ದಾಗ ಒಮ್ಮೆ ಸಮಾಜ ಸುಧಾರಕರಾಗಿದ್ದ ಕೆ. ಎಚ್. ರಾಮಯ್ಯ ನವರ ದೃಷ್ಟಿಗೆ ಬಿದ್ದ ಹನುಮಂತಯ್ಯ ಅವರ ಅನುಕಂಪ ಮತ್ತು ಪ್ರೋತ್ಸಾಹಗಳಿಗೆ ಪಾತ್ರನಾದ. ಅವರು ಸರ್ಕಾರದಿಂದ ಹಿಂದುಳಿದ ವರ್ಗದವರಿಗೆ ನೀಡುತ್ತಿದ್ದ ವಿದ್ಯಾರ್ಥಿ ವೇತನ ದೊರಕಿಸಿ ಕೊಟ್ಟರು. ಇಂಟರ್ ಮೀಡಿಯೆಟ್ ಓದುವಾಗ ಬೆಂಗಳೂರಿನ ಒಕ್ಕಲಿಗರ ವಿದ್ಯಾರ್ಥಿನಿಲಯದಲ್ಲಿ ತಂಗಲು ಅವಕಾಶ ದೊರೆಯಿತು.

ಬೆಳೆಯುವ ಪೈರು ಮೊಳಕೆಯಲ್ಲಿ ಎಂಬಂತೆ ಹನುಮಂತಯ್ಯನ ಕಾಲೇಜು ಶಿಕ್ಷಣದಲ್ಲಿ ನಾಯಕತ್ವದ ಗುಣವನ್ನು ತೋರಿಸಿದರು. 1925ರಲ್ಲಿ ಅವರು ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯಾದರು. 1927ರಲ್ಲಿ ಮದ್ರಾಸಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ವಿದ್ಯಾರ್ಥಿ ಪ್ರತಿನಿಧಿಯಾಗಿ ಭಾಗವಹಿಸಿದರು. 1928ರಲ್ಲಿ ಸೈಮನ್ ಸಮಿತಿ ಭಾರತಕ್ಕೆ ಬಂದಾಗ ವಿದ್ಯಾರ್ಥಿ ನಾಯಕನಾಗಿ ಅದನ್ನು ವಿರೋಧಿಸಿದರು. ಹನುಮಂತಯ್ಯನವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪದವಿ ಶಿಕ್ಷಣ ಮುಂದುವರಿಸಿದರು. 1930ರಲ್ಲಿ ಪದವೀಧರರಾದರು.

ಮನೆಯಲ್ಲಿ ಕಿತ್ತು ತಿನ್ನುತ್ತಿದ್ದ ಬಡತನ ಅವರ ಹೆಚ್ಚಿನ ವಿದ್ಯಾಭ್ಯಾಸಕ್ಕೆ ತೊಡಕಾಗಿದ್ದಿತು. ದೊಡ್ಡ ಕುಟುಂಬದ ಹೊಣೆ ಹೊತ್ತಿದ್ದ ತಂದೆ ಹೆಚ್ಚಾಗಿ ಊರಿನ ವ್ಯವಹಾರಗಳಲ್ಲಿ ಆಸಕ್ತರಾಗಿರುತ್ತಿದ್ದರು. ತಾಯಿ ಅಹರ್ನಿಶಿ ದುಡಿದು ಮಕ್ಕಳನ್ನು ನೋಡಿಕೊಳ್ಳುತ್ತಿದ್ದರು. ಯಾವುದಾದರೂ ನೌಕರಿ ಹುಡುಕಿಕೊಂಡು ತಾಯಿಯ ಸಂಕಷ್ಟಗಳನ್ನು ಹಗುರ ಮಾಡಬೇಕೆಂಬ ನಿರ್ಧಾರಕ್ಕೆ ಬಂದದ್ದು ಉಂಟು. ಆದರೆ ಮೈಸೂರಿನ ಸಾಹುಕಾರ ಚೆನ್ನಯ್ಯನವರ ನೆರವಿನಿಂದ ಕಾನೂನು ಪದವಿ ವ್ಯಾಸಂಗ ಮಾಡಲು ಅವರು ಪೂನಾಕ್ಕೆ ಹೋದರು. ಆಗೊಮ್ಮೆ ತೀವ್ರ ಕಾಯಿಲೆ ಬಿದ್ದರು. ವಾಸಿಯಾದರೆ ಮಗನಿಗೆ ನಿನ್ನ ಹೆಸರನ್ನೇ ಇಡುತ್ತೇನೆ ಎಂದು ತಾಯಿ ನಂಜಮ್ಮನವರು ಕೆಂಗಲ್ ಹನುಮಂತರಾಯ ದೇವರಿಗೆ ಹರಕೆ ಹೊತ್ತರು. ಹನುಮಂತಯ್ಯನವರು ಚೇತರಿಸಿಕೊಂಡು ಆರೋಗ್ಯವಂತರಾದಾಗ ಅವರನ್ನು 'ಕೆಂಗಲ್ ಹನುಮಂತಯ್ಯ' ಎಂದು ಕರೆಯಲಾಯಿತು ಹೀಗೆ ಅವರ ಹೆಸರಿಗೆ 'ಕೆಂಗಲ್' ಪದ ಅಂಟಿಕೊಂಡಿತು. ಹನುಮಂತಯ್ಯನವರ ತಾಯಿ ಅವರ ಬಗ್ಗೆ ವಹಿಸುತ್ತಿದ್ದ ಕಾಳಜಿಯಿಂದಾಗಿ ಅವರಲ್ಲಿ ಮಾತೃ ಭಕ್ತಿ ಮತ್ತು ದೈವ ಭಕ್ತಿಗಳೆರಡೂ ಹಾಸುಹೊಕ್ಕಾಗಿ ಬೆಳೆದವು.

ಹನುಮಂತಯ್ಯನವರು ಕಾನೂನು ಶಿಕ್ಷಣವನ್ನು ಪೂನಾದಲ್ಲಿ ಅಭ್ಯಸಿಸುತ್ತಿದ್ದಾಗ ಒಮ್ಮೆ ಊರಿಗೆ ಬಂದರು. ಆಗ ಊರಿನ ಜನ ಅಭಿಮಾನದಿಂದ ಓದು ಮುಗಿದ ಮೇಲೆ ಮುಂದೆ ಏನು ಮಾಡುತ್ತೀಯೆ? ಎಂದು ಕೇಳಿದರು. ಆಗ ಹನುಮಂತಯ್ಯ ತಟ್ಟನೆ ''ದಿವಾನನಾಗುತ್ತೇನೆ'' ಎಂದು ಉತ್ತರಿಸಿದರು. ಇದು ಆಗ ತಮಾಷೆಯ ಮಾತಾಗಿ ಕಂಡರೂ ಅವರಲ್ಲಿದ್ದ ದೊಡ್ಡ ಧ್ಯೇಯೋದ್ದೇಶಕ್ಕೆ ಸಾಕ್ಷಿ ನುಡಿಯುತ್ತಿತ್ತು. 1932ರಲ್ಲಿ ಅವರು ಕಾನೂನು ಪದವಿಯನ್ನು ಗಳಿಸಿದರು. ಆಗಿನ ಪ್ರಭಾವಿ ರಾಜಕಾರಣಿಗಳಲ್ಲೊಬ್ಬರಾಗಿದ್ದ ಎಸ್. ಸಿ. ಮಲ್ಲಯ್ಯನವರು ಹನುಮಂತಯ್ಯನವರನ್ನು ಆಗಿನ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲರ ಬಳಿಗೆ ಕರೆದುಕೊಂಡು ಹೋಗಿ ಒಂದು ಅಮಲ್‌ದಾರ್ ಕೆಲಸ ಕೊಡಿಸುವಂತೆ ಕೋರಿದರು. ಆದರೆ ಹನುಮಂತಯ್ಯನವರು ಸರ್ಕಾರಿ ನೌಕರಿಯ ಬಗ್ಗೆ ಹೊಂದಿದ್ದ ಅನಾಸಕ್ತಿಯ ಕಾರಣ ಆ ಪ್ರಯತ್ನ ಅಲ್ಲಿಗೇ ನಿಂತು ಹೋಯಿತು.

ಅವರು 1933ರಲ್ಲಿ ಬೆಂಗಳೂರಿನಲ್ಲಿ ವಕೀಲಿ ವೃತ್ತಿ ಆರಂಭಿಸಿದರು. ಅವರು ಉತ್ತಮ ವಾಗ್ಮಿತ್ವವನ್ನು ಮತ್ತು ಕಾನೂನು ಶಾಸ್ತ್ರದ ಬಗ್ಗೆ ಪಾಂಡಿತ್ಯವನ್ನು ಗಳಿಸಿದ್ದರಿಂದ ಅವರ ವಕೀಲಿತನ ಒಳ್ಳೆಯ ಪ್ರತಿಕ್ರಿಯೆಯನ್ನು ಪಡೆಯಿತು. ಬಡವರ ಬಗ್ಗೆ ಅವರು ಸಹಜವಾಗಿ ಆಸಕ್ತಿ ಹೊಂದಿದ್ದರಿಂದ ಅವರು ಬಡವರಿಗೆ ಅನ್ಯಾಯವಾದಾಗ ಹೆಚ್ಚು ಮುತುವರ್ಜಿ ವಹಿಸಿ ಅವರ ಮೊಕದ್ದಮೆಗಳನ್ನು ನಡೆಸಿಕೊಡುತ್ತಿದ್ದರು. ವಕೀಲಿ ವೃತ್ತಿಯಿಂದ ಸಾಕಷ್ಟು ಸಂಪಾದನೆಯೂ ಬರತೊಡಗಿತು. ಆದರೆ ಹನುಮಂತಯ್ಯನವರದು ದೇಶ ಪ್ರೇಮದಿಂದ, ದೇಶ ಭಕ್ತಿಯಿಂದ ಕೂಡಿದ್ದ ಮನಸ್ಸು; ಶೋಷಣೆಯನ್ನು ಅದು ಯಾವ ರೂಪದಲ್ಲಿದ್ದರೂ ವಿರೋಧಿಸುವ ಪ್ರವೃತ್ತಿ. ಇದರಿಂದಾಗಿ ಅವರು ಆಗಿನ ರಾಜಕೀಯ ಮತ್ತು ಸಾಮಾಜಿಕ ವಿಷಯಗಳಲ್ಲಿ ಆಸಕ್ತಿ ತೋರಿದರು. ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಚಳವಳಿಯನ್ನು ಬೆಂಬಲಿಸಲು ಮುಂದಾದರು. ಒಂದು ಬಾರಿ ಸಾರ್ವಜನಿಕ ಭಾಷಣ ಮಾಡುವಾಗ ಮಹಾರಾಜರ ಆಡಳಿತವನ್ನು ಉಗ್ರವಾಗಿ ಖಂಡಿಸಿದರು. ನಿರ್ಭಯದಿಂದ ಹರಿತವಾಗಿ ಹಾಗೂ ವಿಚಾರ ಪೂರಿತವಾಗಿ ಅವರು ಜನರ ಮುಂದೆ ಮಂಡಿಸುತ್ತಿದ್ದ ವಿಷಯಗಳು ಕೇಳುಗರ ಮೇಲೆ ಪರಿಣಾಮ ಬೀರುತ್ತಿದ್ದವು ಇದು ದಿವಾನರ ಕಿವಿಮುಟ್ಟಿತು.

ಆಗ ಮಿರ್ಜಾ ಇಸ್ಮಾಯಿಲ್ ಸಾಹೇಬರು ಹನುಮಂತಯ್ಯನವರನ್ನು ಕರೆಸಿ ಕೊಂಡು ಬುದ್ಧಿ ಹೇಳಿದರು. ''ಕಾಂಗ್ರೆಸ್ಸಿಗರು ಪೋಲಿಗಳು, ನೀವು ಅವರ ಜೊತೆಗೆ ಸೇರಬಾರದು. ನಿಮ್ಮನ್ನು ಮುನ್ಸೀಫನನ್ನಾಗಿ ಮಾಡುತ್ತೇನೆ, ನಿಮಗೆ ಒಳ್ಳೆಯ ಭವಿಷ್ಯವಿದೆ''. ಎಂದು

ಅವರನ್ನು ಮನವೊಲಿಸಿ ತಮ್ಮ ಬಲೆಗೆ ಹಾಕಿಕೊಳ್ಳಲು ಪ್ರಯತ್ನಿಸಿದರು. ಆದರೆ ಹನುಮಂತಯ್ಯನವರು ''ನಾನು ಮುನ್ಸೀಫ ಆಗುವವನಲ್ಲ ಅಂಥವರನ್ನು ನೇಮಿಸುವವ'' ಎಂಬ ಚುರುಕಿನ ಉತ್ತರ ನೀಡಿ ದಿವಾನರನ್ನು ದಿಗ್ಭ್ರಾಂತಗೊಳಿಸಿದರು. ಇಂತಹ ಕೆಚ್ಚೆದೆಯ ಗಂಡು ಕಾಂಗ್ರೆಸ್ ಪಕ್ಷವನ್ನು ಸೇರಿದ್ದು ಆ ಪಕ್ಷಕ್ಕೆ ದೊಡ್ಡ ಬಲ ತಂದುಕೊಟ್ಟಿತು.

ಬೆಂಗಳೂರಿನ ಸ್ಥಿತಿವಂತ ಮನೆತನಕ್ಕೆ ಸೇರಿದ್ದ ಹಾಗೂ ಒಕ್ಕಲಿಗರ ಸಂಘದ ಕೋಶಾಧಿಕಾರಿಯಾಗಿದ್ದ ಪುಟ್ಟಯ್ಯನವರ ಮಗಳು ಬಿ. ಪುಟ್ಟಮ್ಮನವರನ್ನು ಕೊಟ್ಟು ಹನುಮಂತಯ್ಯನವರಿಗೆ ವಿವಾಹವಾಯಿತು. ಮಾವ ಕೊಟ್ಟುಬಿಟ್ಟು ಅದ್ದೂರಿಯಾಗಿ ಮದುವೆ ಮಾಡಿದರು. ಅಳಿಯ ದೊಡ್ಡ ಅಧಿಕಾರಿಯಾಗಬಹುದು ಇಲ್ಲವೇ ದೊಡ್ಡ ವಕೀಲನಾಗಬಹುದು ಇದರಿಂದ ತಮ್ಮ ಮಗಳು ಸುಖದ ಸುಪ್ಪತ್ತಿಗೆಯಲ್ಲಿ ಓಲಾಡಬಹುದು ಎಂಬ ಕನಸು ಕಾಣುತ್ತಿದ್ದರು ಪುಟ್ಟಯ್ಯನವರು. ಹನುಮಂತಯ್ಯ ದಂಪತಿಗಳಿಗೆ ವಿಜಯಲಕ್ಷ್ಮಿ ಮತ್ತು ವಸಂತಲಕ್ಷ್ಮಿ ಎಂಬ ಇಬ್ಬರು ಹೆಣ್ಣು ಮಕ್ಕಳು ಜನಿಸಿದ್ದರು. ಅಳಿಯನಿಗೆ ಮಾವ ವಕೀಲಿ ವೃತ್ತಿ ನಡೆಸಲು ಹೊಸದಾದ ದೊಡ್ಡ ಕಛೇರಿಯನ್ನೇ ವ್ಯವಸ್ಥೆ ಮಾಡಿದರು. ಸಾವಿರಾರು ರೂಪಾಯಿಗಳ ಕಾನೂನು ಪುಸ್ತಕಗಳನ್ನು ಕೊಂಡುಕೊಟ್ಟರು.

1930ರ ದಶಕ ದೇಶದಾದ್ಯಂತ ರಾಜಕೀಯ ಸ್ಥಿತ್ಯಂತರ ರೂಪುಗೊಳ್ಳುತ್ತಿದ್ದ ಕಾಲ. ಸ್ವಾತಂತ್ರ್ಯ ಚಳವಳಿ ಮತ್ತು ಸಾಮಾಜಿಕ ಸುಧಾರಣೆಗಳು ಬಿರುಸುಗೊಂಡು ಹೊಸ ರಾಜಕೀಯ ವಾತಾವರಣ ಸೃಷ್ಟಿಯಾಗುತ್ತಿದ್ದ ಕಾಲ. ಇತಿಹಾಸದ ವಿದ್ಯಾರ್ಥಿಯಾಗಿದ್ದ ಹನುಮಂತಯ್ಯನವರು ಈ ಸಂಗ್ರಾಮದಿಂದ ದೂರ ಸರಿಯುವ ಮನಸ್ಸುಳ್ಳವರಾಗಿರಲಿಲ್ಲ. ವಿದ್ಯಾರ್ಥಿ ದೆಸೆಯಲ್ಲ ಸಾರ್ವಜನಿಕ ಸೇವೆಗೆ ತಮ್ಮನ್ನು ತೊಡಗಿಸಿಕೊಂಡವರು ಅವರು. 1921 ರಿಂದಲೂ ಹನುಮಂತಯ್ಯನವರು ಖಾದಿ ಧರಿಸುತ್ತಿದ್ದರು. 1933ರಲ್ಲಿ ಬೆಂಗಳೂರು ಜಿಲ್ಲಾ ಹರಿಜನ ಸೇವಕ ಸಂಘದ ಕಾರ್ಯದರ್ಶಿಯಾಗಿದ್ದರು. 1934ರಲ್ಲಿ ಗಾಂಧೀಜಿಯವರು ಬೆಂಗಳೂರಿಗೆ ಬಂದು ನ್ಯಾಷನಲ್ ಕಾಲೇಜಿನ ಮೈದಾನದಲ್ಲಿ ಬಹಿರಂಗ ಭಾಷಣ ಮಾಡಿದರು. ಆಗ ಹರಿಜನ ಸೇವಕ ಸಂಘದ ಕಾರ್ಯದರ್ಶಿಯಾಗಿದ್ದ ಹನುಮಂತಯ್ಯನವರಿಗೆ ಗಾಂಧೀಜಿಯವರನ್ನು ಹತ್ತಿರದಿಂದ ನೋಡುವ ಮತ್ತು ಅವರ ಭಾಷಣವನ್ನು ಗ್ರಹಿಸುವ ಅವಕಾಶ ದೊರೆಯಿತು. ಅದೇ ಸಂದರ್ಭದಲ್ಲಿ ಗಾಂಧೀಜಿ ಕೆಂಗೇರಿ ಆಶ್ರಮಕ್ಕೂ ಭೇಟಿ ಕೊಟ್ಟರು. 1934ರಲ್ಲಿ ಹನುಮಂತಯ್ಯನವರು ಬೆಂಗಳೂರು ಹಿಂದೀಪ್ರಚಾರ ಸಭೆಯ ಅಧ್ಯಕ್ಷರಾದರು. ಹೀಗೆ ಅವರು ಎಡೆಬಿಡದ ಸಾರ್ವಜನಿಕ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.

## ದೇಶ ಸೇವೆಗೆ ಅರ್ಪಣೆ :

ಸಂಸ್ಥಾನದಲ್ಲಿ ಆಗ ಪ್ರಮುಖವಾಗಿ ಎರಡು ರಾಜಕೀಯ ಪಕ್ಷಗಳು ಕಾರ್ಯ ನಿರ್ವಹಿಸುತ್ತಿದ್ದವು. ಒಂದು ಕಾಂಗ್ರೆಸ್ ಮತ್ತು ಇನ್ನೊಂದು ಪ್ರಜಾ ಸಂಯುಕ್ತ ಪಕ್ಷ. ಕಾಂಗ್ರೆಸ್‌ನಲ್ಲಿ ಕೆ.ಟಿ. ಭಾಷ್ಯಂ, ತಗಡೂರು ರಾಮಚಂದ್ರರಾವ್, ಹೆಚ್.ಕೆ. ವೀರಣ್ಣಗೌಡ, ವೀರಕೇಸರಿ ಸೀತಾರಾಮಶಾಸ್ತ್ರಿ, ಎಸ್. ಎಸ್. ಸೆಟ್ಲೂರ್, ಎಸ್. ನಿಜಲಿಂಗಪ್ಪ, ಹೊಸ ಕೊಪ್ಪ ಕೃಷ್ಣರಾವ್, ಎಂ.ಎನ್. ಜೋಯಿಸ್, ಮೊದಲಾದವರು ಮುಖಂಡರಾಗಿದ್ದರು. ಪ್ರಜಾ ಸಂಯುಕ್ತ ಪಕ್ಷದಲ್ಲಿ ಕೆ.ಸಿ. ರೆಡ್ಡಿ, ಹೆಚ್.ಸಿ. ದಾಸಪ್ಪ, ಡಿ.ಎಸ್. ಮಲ್ಲಪ್ಪ, ಡಿ.ಎಚ್. ಚಂದ್ರಶೇಖರಯ್ಯ, ವಿ. ವೆಂಕಟಪ್ಪ, ಎಂ.ಸಿ. ಲಿಂಗೇಗೌಡ, ಮೊದಲಾದವರಿದ್ದರು. 1935ರಲ್ಲಿ ಹನುಮಂತಯ್ಯನವರು ವಕೀಲಿ ವೃತ್ತಿಯನ್ನು ಬಿಟ್ಟು ಕಾಂಗ್ರೆಸ್ ಪಕ್ಷದ ಕಟ್ಟಾಳುವಾಗಿ ದೇಶ ಸೇವೆಗೆ ನಿಂತರು. ಅದೇ ವರ್ಷ ಬೆಂಗಳೂರು ಜಿಲ್ಲೆಯ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಚುನಾಯಿತರಾದರು. ಕಾಂಗ್ರೆಸ್ ಮತ್ತು ಪ್ರಜಾ ಪಕ್ಷಗಳು ವಿಲೀನವಾಗಬೇಕೆಂದು ಅನೇಕ ಮುಖಂಡರು ಮಾಡಿದ ಪ್ರಯತ್ನ ಫಲಿಸಿತು. 1937ರಲ್ಲಿ ಪ್ರಜಾ ಸಂಯುಕ್ತ ಪಕ್ಷ ಕಾಂಗ್ರೆಸ್‌ನಲ್ಲಿ ವಿಲೀನವಾದದ್ದು ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ಮೈಲಿಗಲ್ಲಾಯಿತು. ಹನುಮಂತಯ್ಯನವರು ರಾಜ್ಯದಾದ್ಯಂತ ಪ್ರವಾಸ ಕೈಗೊಂಡು ಕಾಂಗ್ರೆಸ್‌ನ ಧ್ಯೇಯಧೋರಣೆಗಳನ್ನು ಪ್ರಚಾರಪಡಿಸಿದರು. ಅವರು ಹೀಗೆ ತಮ್ಮನ್ನು ದೇಶಸೇವೆಯಲ್ಲಿ ತೊಡಗಿಸಿಕೊಂಡದ್ದು ಅವರ ಸಾಂಸಾರಿಕ ಜೀವನ ಭಂಗವಾಗಲು ಕಾರಣವಾಯಿತು. ಆದರೆ ತ್ಯಾಗಶೀಲರಾಗಿದ್ದ ಹನುಮಂತಯ್ಯನವರು ದೇಶ ಸೇವೆಯನ್ನೇ ಆಯ್ದುಕೊಂಡರು.

1938ರಲ್ಲಿ ನಡೆದ ಶಿವಪುರ ಧ್ವಜ ಸತ್ಯಾಗ್ರಹ ಇಡೀ ದೇಶದ ಗಮನ ಸೆಳೆಯಿತು. ಹನುಮಂತಯ್ಯನವರು ಸಂಸ್ಥಾನದ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರಾದರು. ಅವರ ನಿರರ್ಗಳ ಶೈಲಿಯ ವಿಚಾರಪೂರಿತ ಭಾಷಣಗಳು ಜನರ ಮೇಲೆ ಪರಿಣಾಮ ಬೀರಿದವು. ಸರ್ಕಾರ ಅವರ ದಿಟ್ಟ ವಿಚಾರಗಳಿಂದ ಬೆಚ್ಚಿಬಿದ್ದು ಅವರನ್ನು ದಸ್ತಗಿರಿ ಮಾಡಿತು. ಆಗ ಕೆ.ಟಿ. ಭಾಷ್ಯಂ ಅವರು ಹನುಮಂತಯ್ಯನವರ ಬಳಿ ''ಹನುಮಂತಯ್ಯನವರೇ, ನಾವು ಸುದೀರ್ಘ ಹೋರಾಟ ನಡೆಸಿ ನಾಯಕರೆನಿಸಿಕೊಳ್ಳುವುದು ಕಷ್ಟವಾಯ್ತು. ನೀವು ನಿಮ್ಮ ಮಾತಿನ ವೈಖರಿಯಿಂದ, ಅಪ್ರತಿಮ ಧೈರ್ಯದಿಂದ ಒಂದೇ ದಿನದಲ್ಲಿ ಜನಮನದ ನಾಯಕರಾದಿರಿ'' ಎಂದು ಉದ್ಗರಿಸಿದರು. ಇದು ಹನುಮಂತಯ್ಯನವರ ಭವಿಷ್ಯದ ಬಗ್ಗೆ ಬರೆದ ಭಾಷ್ಯದಂತಿತ್ತು. ಅವರು ಸ್ವಯಂ ನಿರ್ಮಿತ ನಾಯಕರಾದರು.

1939ರಲ್ಲಿ ವಿದುರಾಶ್ವತದಲ್ಲಿ ನಡೆದ ಗೋಲಿಬಾರ್ ಪ್ರಕರಣ ಐತಿಹಾಸಿಕ ಘಟನೆಯಾಗಿದ್ದಿತು. ಅದರಿಂದ ರಾಜ್ಯದ ಮತ್ತು ರಾಷ್ಟ್ರದ ನಾಯಕರು ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು. ಕೆ.ಜಿ.ಎಫ್.ನಲ್ಲಿ ಕಾಂಗ್ರೆಸ್‌ನ ಬೃಹತ್ ಸಭೆ ಸೇರಿ ಸರ್ಕಾರದ ದಮನಕಾರಿ ಕ್ರಮವನ್ನು ಖಂಡಿಸಿತು. ಆ ಸಭೆಯಲ್ಲಿ ಭಾಗವಹಿಸಿದ್ದ ಸಂಸ್ಥಾನದ ಬಹುತೇಕ ಕಾಂಗ್ರೆಸ್ ನಾಯಕರು ದಸ್ತಗಿರಿಗೊಳಗಾದರು. ಆಗ ಕೆ.ಸಿ.ರೆಡ್ಡಿಯವರು ಹನುಮಂತಯ್ಯನವರಿಗೆ ಜೈಲಿನಿಂದ ಒಂದು ಪತ್ರ ಬರೆದು ''ನೀವು ಈಗ ಹೊರಗೆ ಉಳಿದಿರುವ ನಾಯಕರು, ನೀವು ದೇಶದ ದೃಷ್ಟಿಯಿಂದ ನಾಯಕತ್ವ ವಹಿಸಬೇಕು'' ಎಂದು ಹೇಳಿದರು. ಹನುಮಂತಯ್ಯನವರು ಆಗ ತಮ್ಮ ಸಂಪಾದನೆಯ ಏಕ ಮಾತ್ರ ಮೂಲವಾಗಿದ್ದ ವಕೀಲಿ ವೃತ್ತಿಯನ್ನು ಬದಿಗಿಟ್ಟು ಹೋರಾಟವನ್ನು ಮುಂದುವರಿಸಿದರು. ದಿವಾನರನ್ನು ಕಟುವಾದ ಪದಗಳಿಂದ ಟೀಕಿಸಿದರು. ಸರಕಾರ ಅವರ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ ಮೊಕದ್ದಮೆ ಹೂಡಿತು. ಅವರಿಗೆ ದಂಡ ವಿಧಿಸಿ ಸೆರೆಮನೆಗೆ ತಳ್ಳಿತು. ಅವರು ಇದುವರೆಗೆ ಜವಾಬ್ದಾರಿ ಸರ್ಕಾರಕ್ಕೆ ಬುದ್ಧಿ ಹೇಳುತ್ತಿದ್ದೆವು. ಈಗ ಮಹಾರಾಜರಿಗೇ ಬುದ್ಧಿ ಹೇಳಬೇಕಾದ ಅಗತ್ಯ ಬಂದಿದೆ ಎಂದು ಹೇಳುವ ಧೈರ್ಯ ತೋರಿದರು. ಹೀಗೆ ಹನುಮಂತಯ್ಯನವರು ಸರ್ಕಾರದ ಪಾಲಿಗೆ ಬಿಸಿ ಬಿಸಿ ಕೆಂಡವಾದರು. ಅವರ ಜನಪ್ರಿಯತೆ ಹೆಚ್ಚುತ್ತಾ ಹೋಯಿತು. ಅವರು ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಏಳು ಬಾರಿ ಜೈಲು ಶಿಕ್ಷೆ ಅನುಭವಿಸಿದರು. ಅಪ್ಪಟ ದೇಶಪ್ರೇಮಿಯಾಗಿ ರೂಪಗೊಂಡರು.

ಹನುಮಂತಯ್ಯನವರು ಸರ್ಕಾರದಿಂದ ದಮನಕ್ಕೊಳಗಾದ ಜನರ ನೆರವಿಗೆ ಹೋಗುತ್ತಿದ್ದರು. ಪೋಲಿಸ್ ಅಧಿಕಾರಿಗಳಿಂದ ಹಿಂಸೆಗೊಳಗಾದವರ ಪರವಾಗಿ ವಕಾಲತ್ತು ವಹಿಸುತ್ತಿದ್ದರು. ಮಾಗಡಿ ತಾಲ್ಲೂಕಿನ ಅಜ್ಜಂಪುರ ಎಂಬ ಗ್ರಾಮದ ಜನರಿಗೆ ಕಂದಾಯ ಅಧಿಕಾರಿಗಳು ಕಂದಾಯ ವಸೂಲಿಗಾಗಿ ಕಿರುಕುಳ ಕೊಡುತ್ತಿದ್ದರು. ಆಗ ಹನುಮಂತಯ್ಯನವರು ಒಂದು ಉಪಾಯ ಹೇಳಿಕೊಟ್ಟರು. ಅದರಂತೆ ಊರಿನ ಗಂಡಸರೆಲ್ಲಾ ಪರವೂರಿಗೆ ಹೋದರು. ಅಧಿಕಾರಿಗಳು ಊರಿಗೆ ಬಂದು ದಬ್ಬಾಳಿಕೆ ತೋರಿದರೆ ಅವರಿಗೆ ಪೊರಕೆ ಸೇವೆ ಮಾಡುವಂತೆ ಹನುಮಂತಯ್ಯನವರು ಮಹಿಳೆಯರಿಗೆ ಗುಟ್ಟಾಗಿ ಹೇಳಿದ್ದರು. ಹಾಗೆಯೇ ಬಲವಂತ ಮಾಡಿದ ಅಧಿಕಾರಿಗಳಿಗೆ ಹೆಂಗಸರು ಪೊರಕೆಯಲ್ಲಿ ಹೊಡೆದರು. ಆ ಹೆಂಗಸರನ್ನೆಲ್ಲ ಬಂಧಿಸಿ ಪೋಲಿಸರು ಮೊಕದ್ದಮೆ ಹೂಡಿದರು. ಹನುಮಂತಯ್ಯನವರು ಮಹಿಳೆಯರ ಪರ ವಕಾಲತ್ತು ವಹಿಸಿದರು. ಮಹಿಳೆಯರು ನಿರಪರಾಧಿಗಳೆಂದು ತೀರ್ಮಾನವಾಯಿತು. ಈ ಪ್ರಕರಣ ಹನುಮಂತಯ್ಯನವರಿಗೆ ಅಪಾರ ಜನಾನುರಾಗ ತಂದುಕೊಟ್ಟಿತು.

## ಪ್ರಜಾಪ್ರತಿನಿಧಿ ಸಭೆ ಪ್ರವೇಶ

1941ರಲ್ಲಿ ಹನುಮಂತಯ್ಯನವರ ಸಂಸದೀಯ ಜೀವನ ಪ್ರಾರಂಭವಾಯಿತು. ಅವರು ಆ ವರ್ಷ ಬೆಂಗಳೂರು ಪುರಸಭೆ ಕ್ಷೇತ್ರದಿಂದ ಪ್ರಜಾಪ್ರತಿನಿಧಿ ಸಭೆಗೆ ಚುನಾಯಿತರಾದರು. ಅಲ್ಲಿಂದ ಅವರು ಅವಿರತವಾಗಿ 1962ರವರೆಗೂ ಶಾಸನ ಸಭಾ ಸದಸ್ಯರಾಗಿದ್ದು ದಾಖಲೆ ಸ್ಥಾಪಿಸಿದ್ದಾರೆ. 1942ರಲ್ಲಿ ಬೆಂಗಳೂರು ಪುರಸಭೆಯ ಅಧ್ಯಕ್ಷರಾಗಿ ಚುನಾಯಿತರಾಗುವ ಮೂಲಕ ತಮ್ಮ ನಾಯಕತ್ವಕ್ಕೆ ಒಂದು ಗರಿ ಮೂಡಿಸಿಕೊಂಡರು. 1944 ರಿಂದ 1949ರ ಅವಧಿಯಲ್ಲಿ ಅವರು ಪ್ರಜಾಪ್ರತಿನಿಧಿ ಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕರಾಗಿದ್ದರು. ಮಹಾರಾಜರ ಸರ್ಕಾರದ ಕಾಲದಲ್ಲಿ ಸುಮಾರು ಒಂದು ದಶಕದ ಅವಧಿಗೆ ಶಾಸಕರಾಗಿದ್ದ ಹನುಮಂತಯ್ಯನವರು ಉತ್ತಮ ಸಂಸದೀಯಪಟುವಾಗುವ ಲಕ್ಷಣಗಳನ್ನು ತೋರಿದರು.

1941ರ ಜೂನ್‌ನಲ್ಲಿ ನಡೆದ ಪ್ರಥಮ ಅಧಿವೇಶನದಲ್ಲಿಯೇ ಅವರು ರಾಜ್ಯದ ಮುಖ್ಯ ಹುದ್ದೆಗಳಿಗೆ ವಿದೇಶಿಯರನ್ನು ನೇಮಿಸುವ ಪದ್ಧತಿಯನ್ನು ವಿರೋಧಿಸಿದರು. ಆರ್ಕಾಟ್ ರಾಮಸ್ವಾಮಿ ಮೊದಲಿಯಾರರನ್ನು ದಿವಾನರನ್ನಾಗಿ ನೇಮಿಸಿದ ಬಗ್ಗೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಸ್ತಾಪಿಸಿ ಈ ರೀತಿ ಹೊರಗಿನವರನ್ನು ದಿವಾನ ಪದವಿಗೆ ತರುವುದು ಪ್ರಜಾಭಿಪ್ರಾಯಕ್ಕೆ ವಿರೋಧವಾದುದೆಂದು ಖಂಡತುಂಡರಾಗಿ ಹೇಳಿದರು. ಮಹಾರಾಜರ ಆಳ್ವಿಕೆಯ ಮುಂದುವರಿಕೆಯ ಬಗ್ಗೆ ಅವರು ನಿಷ್ಠುರರಾಗಿದ್ದರೂ ಮಹಾರಾಜರಿಗೆ ಪುತ್ರಿಯ ಜನನವಾದಾಗ ಅಷ್ಟೇ ಹೃದಯ ತುಂಬಿ ಯಶ ಕೋರಿದರು. ಇಂತಹ ಸೌಜನ್ಯ, ಸಭ್ಯತೆ ಅವರದಾಗಿದ್ದಿತು. ಶಾಸನ ಸಭೆಯಲ್ಲಿ ಅನುಸರಿಸುವ ಅನೇಕ ವಿಧಿವಿಧಾನಗಳ ಬಗ್ಗೆ ಅವರು ವಿಮರ್ಶಿಸಿ ಅವುಗಳ ದೋಷಗಳನ್ನು ತೋರಿದರು. ಹೀಗೆ ಅವರು ಗುರುತರವಾದ ಕಾಂಗ್ರೆಸ್ ನಾಯಕನ ಜವಾಬ್ದಾರಿಯನ್ನು ವಹಿಸಿ ಉತ್ತಮ ವಾಗ್ಮಿ ಮತ್ತು ಚರ್ಚಾಪಟು ಎಂಬ ಅಭಿದಾನಕ್ಕೆ ಪಾತ್ರರಾದರು.

ಭಾರತವು ಸ್ವಾತಂತ್ರ್ಯಗಳಿಸುವುದು ಸನ್ನಿಹಿತವಾದಾಗ ಅದಕ್ಕೆ ಭಾವಿ ಸಂವಿಧಾನದ ಕರಡು ಸಿದ್ಧಪಡಿಸಲು ಸಂವಿಧಾನ ಸಭೆ ರಚಿತವಾಯಿತು. ಈ ಸಭೆಗೆ ಹನುಮಂತಯ್ಯನವರು ಒಬ್ಬ ಸದಸ್ಯರಾಗಿದ್ದರು. ಅಲ್ಲಿ ಅವರು ಸಂವಿಧಾನದ ರೂಪುರೇಷೆಗಳ ಬಗ್ಗೆ ಅನೇಕ ಸಲಹೆಗಳನ್ನು ನೀಡಿದರು. 1947ರ ಅಕ್ಟೋಬರ್‌ನಲ್ಲಿ ಮೈಸೂರು ಸಂಸ್ಥಾನದಲ್ಲಿ ಕೆ. ಸಿ. ರೆಡ್ಡಿಯವರ ನೇತೃತ್ವದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರ ರಚಿತವಾಯಿತು. 1949ರಲ್ಲಿ ಸ್ಟಾಕ್‌ಹೋಮ್‌ನಲ್ಲಿ ನಡೆದ ಅಂತರ್ ಸಂಸತ್ ಒಕ್ಕೂಟ ಸಮ್ಮೇಳನದಲ್ಲಿ

ಹನುಮಂತಯ್ಯನವರು ಪ್ರತಿನಿಧಿಯಾಗಿ ಭಾಗವಹಿಸಿದರು. ಅದೇ ವರ್ಷ ಭಾರತ ಸಂಸತ್ ಕಾರ್ಯ ಸಮಿತಿಯ ಸದಸ್ಯರಾದರು. ಡಬ್ಲಿನ್‌ನಲ್ಲಿ ನಡೆದ ಅಂತರ ಸಂಸತ್ ಏಕತಾ ಸಮ್ಮೇಳನದಲ್ಲಿ ಭಾರತದ ಪ್ರತಿನಿಧಿಯಾಗಿ ಭಾಗವಹಿಸಿದರು. ಆಗ ಅನೇಕ ಯೂರೋಪ್ ರಾಷ್ಟ್ರಗಳಲ್ಲಿ ಪ್ರವಾಸ ಕೈಗೊಂಡರು.

ಹನುಮಂತಯ್ಯನವರು 1950ರಲ್ಲಿ ಚಿತ್ರದುರ್ಗದಲ್ಲಿ ನಡೆದ ಪ್ರದೇಶ ಕಾಂಗ್ರೆಸ್ ಸಮ್ಮೇಳನದಲ್ಲಿ ರಾಜ್ಯ ಕಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿ ಆಯ್ಕೆಯಾದರು ತರುವಾಯ ರಾಜ್ಯದ್ಯಂತ ಪ್ರವಾಸ ಮಾಡಿ ಪಕ್ಷವನ್ನು ಬಲಪಡಿಸಿದರು. ಪ್ರವಾಸ ಕಾಲದಲ್ಲಿ ಜನರ ಕಷ್ಟಸುಖಗಳನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಕೆ.ಸಿ.ರೆಡ್ಡಿಯವರ ಸರ್ಕಾರವನ್ನು ವಿಮರ್ಶಿಸಲು ಕೆಂಗಲ್ಲರು ಹಿಂದೆಗೆಯಲಿಲ್ಲ. ನಿಯಂತ್ರಿತ ಆಹಾರ ವಿತರಣೆಯಲ್ಲಿ ಆಗುತ್ತಿದ್ದ ಕಲಬೆರಕೆಯನ್ನು ದೋಷಗಳನ್ನು ಟೀಕಿಸಿದರು. ಈ ಸರ್ಕಾರ ಶ್ರೀಮಂತರಿಗೆ ಅನುಕೂಲಕರವಾಗಿದೆ ಎಂಬುದು ಅವರ ಆರೋಪವಾಗಿತ್ತು. ಕೆ.ಸಿ. ರೆಡ್ಡಿಯವರ ಮಂತ್ರಿಮಂಡಲದ ವಿರುದ್ಧ ಅವಿಶ್ವಾಸ ನಿರ್ಣಯ ಮಂಡಿಸುವವರೆಗೂ ಈ ಭಿನ್ನಾಭಿಪ್ರಾಯ ಮುಂದುವರಿಯಿತು. ಆದರೆ ಕೆಲವೇ ಬಹುಮತದಿಂದ ಸರ್ಕಾರ ಉಳಿಯಿತು. ಮೈಸೂರಿನ ರಾಜಕೀಯ ಬಿಕ್ಕಟ್ಟನ್ನು ಪರಿಹರಿಸಲು ಪ್ರಧಾನಿ ನೆಹರೂರವರು ಲಾಲ್‌ಬಹದ್ದೂರ್ ಶಾಸ್ತ್ರಿಯವರನ್ನು ಕಳುಹಿಸಿದರು. ಇಲ್ಲಿಯ ಶಾಸಕರ ಅಭಿಪ್ರಾಯ ಪಡೆದ ಶಾಸ್ತ್ರಿಗಳು ಮೈಸೂರು ಕಾಂಗ್ರೆಸಿಗರು ಹೊಸ ನಾಯಕತ್ವ ಬಯಸುತ್ತಾರೆ ಎಂಬ ವರದಿ ನೀಡಿದರು. ಇದು ಕೆಂಗಲ್ ಹನುಮಂತಯ್ಯನವರು ಪಕ್ಷದ ಮೇಲೆ ಹೊಂದಿದ್ದ ಪ್ರಭಾವವನ್ನು ಸ್ಪಷ್ಟಪಡಿಸುತ್ತದೆ.

ಬಡವರ ಪರವಾಗಿ ಮತ್ತು ಶೋಷಣೆಯ ವಿರುದ್ಧ ಮಾತನಾಡುತ್ತಿದ್ದ ಹನುಮಂತಯ್ಯನವರು ಬೇಗ ಜನಪ್ರೀತಿಗಳಿಸಿದರು. ಭ್ರಷ್ಟತೆಯನ್ನು ವಿರೋಧಿಸುವ ಮತ್ತು ಉನ್ನತ ಮೌಲ್ಯಗಳನ್ನು ಪ್ರತಿಪಾದಿಸುವ ಅವರ ಗುಣಗಳು ಅವರಿಗೆ 'ಆದರ್ಶನಾಯಕ'ನ ವ್ಯಕ್ತಿತ್ವ ತಂದುಕೊಟ್ಟಿದ್ದವು. ಪ್ರಥಮ ಮಹಾ ಚುನಾವಣೆ ಇನ್ನು ಆರು ತಿಂಗಳುಗಳಿರುವಾಗ ಕೆಂಗಲ್ಲರು ಮಂಡಿಸಿದ ಎರಡನೆಯ ಅವಿಶ್ವಾಸ ನಿರ್ಣಯದಲ್ಲಿ ಸರ್ಕಾರ ಸೋಲು ಕಂಡಿತು.

1952ರಲ್ಲಿ ಪ್ರಥಮ ಮಹಾ ಚುನಾವಣೆ ನಡೆಯಿತು. ಹನುಮಂತಯ್ಯನವರು ಕಾಂಗ್ರೆಸ್ ಪಕ್ಷದ ರಾಜ್ಯ ಘಟಕದ ಅಧ್ಯಕ್ಷರಾಗಿ ಅಭ್ಯರ್ಥಿಗಳ ಆಯ್ಕೆ ಮತ್ತು ಪ್ರಚಾರದಲ್ಲಿ ಗುರುತರವಾದ ಪಾತ್ರ ವಹಿಸಿದರು. ಬಹುತೇಕ ಕಾಂಗ್ರೆಸ್ ಅಭ್ಯರ್ಥಿಗಳು ಜಯಶೀಲರಾದರು.

ಹನುಮಂತಯ್ಯನವರು ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಗೊಂಡರು. ಈ ಸಂದರ್ಭದಲ್ಲಿ ಕಾಂಗ್ರೆಸ್‌ನ ಇನ್ನೊಬ್ಬ ಹಿರಿಯ ನಾಯಕರಾದ ಟಿ. ಸಿದ್ದಲಿಂಗಯ್ಯನವರು ನುಡಿದ ಮಾತುಗಳು ಗಮನಾರ್ಹವಾಗಿವೆ.

''ನನ್ನ ಮಿತ್ರರು ಹನುಮಂತಯ್ಯ. ಅವರು ನಾಡನ್ನು ದೇಶವನ್ನು ಎತ್ತರಕ್ಕೆ ಕೊಂಡೊಯ್ಯಬಲ್ಲ ವಿಧಿ ನಿಯುಕ್ತ ಮಾನವ. ಅವರು ಸನಾತನ ಧರ್ಮದಲ್ಲಿ ಅಪಾರ ನಂಬಿಕೆಯುಳ್ಳವರು. ಅವರು ಎಲ್ಲ ಕೆಲಸವನ್ನು ಸಮರ್ಥವಾಗಿ, ನಿರಪೇಕ್ಷೆಯಿಂದ ಮಾಡುತ್ತಾರೆ. ದೇವರೇ ತಮ್ಮಿಂದ ಕೆಲಸ ಮಾಡಿಸುತ್ತಾನೆಂದು ಅಚಲವಾಗಿ ನಂಬಿರುವ ಪ್ರಾಮಾಣಿಕ. ದೇವರ ಭಕ್ತ. ಅವರ ಮೂಲಕ ಈ ನಾಡಿನ, ರಾಷ್ಟ್ರದ ಉತ್ತಮ ಕೆಲಸಗಳು ನಡೆಯುತ್ತವೆಂದು ನನಗೆ ನೆಮ್ಮದಿ. ಅವರು ಎಂದಾದರೂ ಯಾರಿಗಾರದರೂ ಸಿಟ್ಟಿಗೆದ್ದಿದ್ದರೆ ಕೆಲಸ ಚೆನ್ನಾಗಿ ಮಾಡಬೇಕೆಂಬ ಕಾರಣಕ್ಕಾಗಿ ಮಾತ್ರ''.

ಈ ಮಾತುಗಳು ಹನುಮಂತಯ್ಯನವರ ವ್ಯಕ್ತಿತ್ವದ ಬಗ್ಗೆ ಬೆಳಕು ಚೆಲ್ಲುತ್ತವೆ.

ಕೇವಲ ನಲವತ್ತನಾಲ್ಕು ವರ್ಷಗಳ ಪ್ರಾಯಕ್ಕೆ ಮುಖ್ಯಮಂತ್ರಿಗಳಾದ ಕೆಂಗಲ್ ಹನುಮಂತಯ್ಯನವರು ಭಾರತದಲ್ಲಿ ಅತ್ಯಂತ ಕಿರಿಯ ವಯಸ್ಸಿನಲ್ಲಿ ಮುಖ್ಯಮಂತ್ರಿಗಳಾದವರ ಸಾಲಿಗೆ ಸೇರಿದರು. ಅವರು ಧರಿಸುತ್ತಿದ್ದ ತುಂಬು ಕಾಲರಿನ ಉದ್ದನೆಯ ಕೋಟು, ಅದರಕ್ಕೆ ತಕ್ಕ ಗರಿಗರಿಯಾದ ಪ್ಯಾಂಟು, ಮೈಸೂರು ಪೇಟ - ಇವು ಅವರ ವ್ಯಕ್ತಿತ್ವಕ್ಕೆ ವಿಶಿಷ್ಟತೆಯನ್ನು ತಂದುಕೊಟ್ಟಿದ್ದವು. ಭಾರತೀಯ ಮತ್ತು ಪಾಶ್ಚಾತ್ಯ ಸಂಸ್ಕೃತಿಗಳ ಸಮ್ಮಿಳನದಂತೆ ಅವರು ಕಾಣುತ್ತಿದ್ದರು. ಅವರು ಮೈಗೂಡಿಸಿಕೊಂಡಿದ್ದ ಶಿಸ್ತು, ಸಮಯ ಪ್ರಜ್ಞೆ ಮತ್ತು ಹಿತಮಿತವಾದ ಸಂಭಾಷಣೆ ಈ ಗುಣಗಳು ಅವರನ್ನು ಅಪರೂಪದ ರಾಜಕಾರಣಿಯಾಗಿ ರೂಪಿಸಿದ್ದವು.

ಮೈಸೂರು ರಾಜ್ಯದ ಮುಖ್ಯಮಂತ್ರಿಯಾಗಿ ಹನುಮಂತ್ಯನವರು ಮಾಡಿದ ಸಾಧನೆಗಳು ಚಿರಸ್ಮರಣೀಯವಾಗಿವೆ. ಅವುಗಳಲ್ಲಿ ಅವರು ಕರ್ನಾಟಕದ ಏಕೀಕರಣಕ್ಕಾಗಿ ನಡೆಸಿದ ಪ್ರಯತ್ನ, ವಿಧಾನ ಸೌಧ ನಿರ್ಮಾಣಕ್ಕಾಗಿ ಅರ್ಪಣಾ ಮನೋಭಾವದಿಂದ ಮಾಡಿದ ಕೆಲಸ ಮತ್ತು ಕನ್ನಡ ಸಾಹಿತ್ಯ ಪ್ರಕಟಣೆ ಮತ್ತು ಸಂಸ್ಕೃತಿ ಪ್ರಸಾರಕ್ಕಾಗಿ ಕೈಗೊಂಡ ಕ್ರಮಗಳನ್ನು ಜನರು ಮುಖ್ಯವಾಗಿ ಎತ್ತಿ ಹೇಳುತ್ತಾರೆ. ಈ ಅಮೋಘ ಕಾರ್ಯಗಳ ನಡುವೆಯೂ ಅವರು ಹಲವಾರು ಆಡಳಿತ ಸುಧಾರಣೆಗಳನ್ನು ತಂದು ರಾಜ್ಯದ ಅಭಿವೃದ್ಧಿಗೆ ಕಾರಣರಾಗಿರುವುದು ಕಂಡುಬರುತ್ತದೆ.

## ವಿಧಾನಸೌಧ ನಿರ್ಮಾಣ :

ಕಾಲಾನುಕ್ರಮಣಿಕೆಯ ದೃಷ್ಟಿಯಿಂದ ಅವರು ನಿರ್ಮಿಸಿದ ವಿಧಾನಸೌಧದ ಬಗ್ಗೆ ಮೊದಲ ಪ್ರಸ್ತಾಪಿಸಬಹುದು. ಕೆ.ಸಿ. ರೆಡ್ಡಿಯವರು ಮುಖ್ಯಮಂತ್ರಿಗಳಾಗಿದ್ದಾಗ ಅಂದಿನ ಅಠಾರ ಕಛೇರಿಯಲ್ಲಿದ್ದ ಶಾಸಕಾಂಗ ಮತ್ತು ಸಚಿವಾಲಯಗಳಿಗೆ ಹೊಸದೊಂದು ಕಟ್ಟಡ ಕಟ್ಟಿಸುವ ಯೋಜನೆ ಸಿದ್ಧವಾಯಿತು. ಆಗ 30 ಲಕ್ಷ ರೂ.ಗಳ ಅಂದಾಜು ವೆಚ್ಚದೊಂದಿಗೆ ಅಂದಿನ ಪ್ರಧಾನಿ ನೆಹರು ಅವರಿಂದ ಅದಕ್ಕೆ ಅಸ್ತಿಭಾರ ಹಾಕಿಸಲಾಯಿತು. ಆದರೆ ಕೆಂಗಲ್ಲರು ಮುಖ್ಯಮಂತ್ರಿಗಳಾಗುವವರೆಗೂ ಕಟ್ಟಡದ ಕೆಲಸ ಪ್ರಾರಂಭವಾಗಲಿಲ್ಲ. ಕೆಂಗಲ್ಲರು ಅಧಿಕಾರಕ್ಕೆ ಬಂದ ಮೇಲೆ ಈ ಯೋಜನೆಯನ್ನು ಪರಿಷ್ಕರಿಸಿದರು. ಈ ಉದ್ದೇಶಕ್ಕಾಗಿ ನಿರ್ಮಾಣವಾಗುವ ಕಟ್ಟಡದಲ್ಲಿ ಒಂದು ಅಂತಸ್ತಿನ ಬದಲಾಗಿ ಮೂರು ಅಂತಸ್ತುಗಳಿರಬೇಕು, ಶಾಸನ ಸಭೆಗಳು ಕಲಾಪ ಭವನಗಳು, ಸಚಿವರ ಕಛೇರಿಗಳು, ಕಾರ್ಯದರ್ಶಿಗಳ ಕಛೇರಿಗಳು, ಗ್ರಂಥಾಲಯ-ಇವೆಲ್ಲ ಒಂದೇ ಭವನದಲ್ಲಿ ಇರಬೇಕೆಂಬುದು ಅವರ ಅಪೇಕ್ಷೆಯಾಗಿದ್ದಿತು. ಅದಕ್ಕಾಗಿ ಸಂಪೂರ್ಣವಾಗಿ ಕಟ್ಟಡದ ವಿನ್ಯಾಸವನ್ನೇ ಬದಲಿಸಲಾಯಿತು. ನಿರ್ಮಾಣದ ಅಂದಾಜು ವೆಚ್ಚ 30 ಲಕ್ಷಗಳಿಂದ 50 ಲಕ್ಷ ರೂ.ಗಳಿಗೆ ಏರಿತು. ಭವನ ನಿರ್ಮಾಣಕ್ಕೆ ಸೂಕ್ತ ಸ್ಥಳವನ್ನು ಕೆಂಗಲ್ಲರೇ ಆರಿಸಿದರು.

ಆದರೆ ಇಷ್ಟಕ್ಕೆ ಇಂದಿನ ವಿಧಾನಸೌಧ ಮೈದಾಳುತ್ತಿರಲಿಲ್ಲ. ಹನುಮಂತಯ್ಯನವರು ಈ ಕಲ್ಲು, ಇಟ್ಟಿಗೆ, ಮರಳಿನ ಕಟ್ಟಡಕ್ಕೆ ತಮ್ಮ ಮನಸ್ಸು, ಕನಸು, ಪ್ರೀತಿ, ಅಧಿಕಾರ, ಪ್ರತಿಷ್ಠೆ ಎಲ್ಲವನ್ನು ಧಾರೆಯೆರೆದರು. ದೇಶದ ಸುಪ್ರಸಿದ್ಧ ಪ್ರತಿಭಾವಂತ ವಾಸ್ತುಶಿಲ್ಪಿಗಳನ್ನು ಕರೆಸಿದರು. ಅವರಿಂದ ದೇಶವಿದೇಶಗಳ ವಾಸ್ತು ರಚನೆಯ ಎಲ್ಲ ಒಳ್ಳೆಯ ಅಂಶಗಳನ್ನು ಸಮ್ಮಿಳನಗೊಳಿಸಿ ನಕ್ಷೆಗಳನ್ನು ತಯಾರಿಸಿದರು. ಇದರ ಪರಿಣಾಮವಾಗಿ ದಕ್ಷಿಣ ಭಾರತದ ಶೈಲಿಯ ಗೋಪುರಗಳು, ಭಾರತಾಂಗ್ಲ ಶೈಲಿಯ ವಾಸ್ತು ಲಕ್ಷಣಗಳು ಮತ್ತು ಆಧುನಿಕ ವಾಸ್ತುಕಲೆಗಳು ಒಂದಕ್ಕೊಂದು ಹಾಸು ಹೊಕ್ಕಾಗಿ ಸೇರಿಕೊಂಡು ಈ ಮಹಾನ್ ನಿರ್ಮಾಣದ ರೂಪರೇಖೆಗಳು ಸಿದ್ಧಗೊಂಡವು. ಹನುಮಂತಯ್ಯನವರು ಈ ಬೃಹತ್ ಸೌಧದ ಕಟ್ಟಡದ ಕೆಲಸ ನಡೆಯುತ್ತಿದ್ದಾಗ ಕನಸು ಮನಸಲ್ಲೂ ಅದನ್ನೇ ತುಂಬಿಕೊಂಡರು. ದಿನ ಪ್ರಾತಃಕಾಲ ಐದು ಗಂಟೆಗೆಲ್ಲ ನಿವೇಶನದ ಬಳಿ ಹೋಗುತ್ತಿದ್ದರು. ಮಾರು ವೇಷದಲ್ಲಿ ಬಂದು ಅಲ್ಲಿಯ ಸಾಮಗ್ರಿಗಳು ಪೋಲಾಗುತ್ತಿವೆಯೇ ಎಂದು ಪರೀಕ್ಷಿಸುತ್ತಿದ್ದರು. ಅದು ನಿರ್ಮಾಣವಾಗುತ್ತಿದ್ದ ಸಮಯದಲ್ಲಿ ಸರ್ ಎಂ. ವಿಶ್ವೇಶ್ವರಯ್ಯನವರು ಸೇರಿದಂತೆ ಅನೇಕ ಪ್ರಸಿದ್ಧ ಎಂಜಿನಿಯರುಗಳನ್ನು ಸ್ಥಳಕ್ಕೆ ಕರೆದುಕೊಂಡು ಹೋಗಿ ತೋರಿಸಿ

ಅವರ ಸಲಹೆ ಮತ್ತು ಅಭಿಪ್ರಾಯಗಳನ್ನು ಕೇಳಿದರು. ಅದು ನಿರ್ಮಾಣಗೊಳ್ಳುತ್ತಿದ್ದ ಅವಧಿಯಲ್ಲಿ ಬೆಂಗಳೂರಿಗೆ ಭೇಟಿ ನೀಡಿದ ಯುಗೋಸ್ಲಾವಿಯಾ ಅಧ್ಯಕ್ಷ ಮಾರ್ಷಲ್ ಟಿಟೋ, ಇಂಗ್ಲೆಂಡಿನ ರಾಣಿ ಎಲಿಜಬೆತ್ ಮುಂತಾದವರನ್ನು ಕೆಂಗಲ್ಲರು ನಿರ್ಮಾಣ ಸ್ಥಳಕ್ಕೆ ಕರೆದುಕೊಂಡು ಹೋಗಿ ತೋರಿಸಿದರು. ಅವರೆಲ್ಲ ಮೆಚ್ಚುಗೆ ವ್ಯಕ್ತಪಡಿಸಿದರು. ರಾಷ್ಟ್ರಕವಿ ಕೆ. ವಿ. ಪುಟ್ಟಪ್ಪನವರು ಮುಖ್ಯಮಂತ್ರಿಗಳನ್ನು ಭೇಟಿ ಆಗಿದ್ದಾಗ ಅವರನ್ನು ಕರೆದೊಯ್ದು ನಿರ್ಮಾಣವನ್ನು ತೋರಿಸುತ್ತಾ ಹನುಮಂತಯ್ಯನವರು ''ಪುಟ್ಟಪ್ಪನವರೇ, ನೀವು ಅಕ್ಷರಗಳಲ್ಲಿ ಮಹಾ ಕಾವ್ಯ ರಚಿಸಿರುವಿರಿ, ನಾನು ಕಲ್ಲಿನಲ್ಲಿ ಈ ಮಹಾಕಾವ್ಯವನ್ನು ಕಟ್ಟಿಸಿದ್ದೇನೆ'' ಎಂದು ನುಡಿದರು. ಇದು ಹನುಮಂತಯ್ಯನವರು ತಮ್ಮ ಮನಸ್ಸಿನಲ್ಲಿದ್ದ ಮಹಾಸೌಧದ 'ಕಲ್ಪನೆಗೆ ಕೊಟ್ಟ ಮಾತಿನ ರೂಪವಷ್ಟೆ ಹನುಮಂತಯ್ಯನವರ ಈ ಆನಂದವನ್ನು ಬೇಲೂರು ಚನ್ನಕೇಶವ ದೇವಾಲಯವನ್ನು ಕಟ್ಟಿಸಿದ ಹೊಯ್ಸಳ ರಾಜ ವಿಷ್ಣುವರ್ಧನನ ಆನಂದದೊಂದಿಗೆ ಮತ್ತು ಗೋಳಗುಂಬಸ್‌ವನ್ನು ನಿರ್ಮಿಸಿದ ಆದಿಲ್‌ಷಾಹಿ ವಂಶದ ಮಹಮ್ಮದನ' ಆನಂದದೊಂದಿಗೆ ಮಾತ್ರ ಹೋಲಿಸಬಹುದು.

1953 ರಿಂದ 1956ವರೆಗೂ ಮನೋವೇಗದಲ್ಲಿ ವಿಧಾನ ಸೌಧದ ನಿರ್ಮಾಣ ನಡೆಯಿತು. ಅಂದಚೆಂದವಾಗಿ ಅಲಂಕಾರಯುತವಾಗಿ ಈ ಸೌಧವನ್ನು ನಿರ್ಮಿಸಿದ್ದರಿಂದ ಅದರ ವೆಚ್ಚವೂ ಏರುತ್ತ ಬಂದಿತು. ಕೊನೆಗೆ ಅದರ ವೆಚ್ಚ ಎರಡು ಕೋಟಿ ರೂಪಾಯಿಗಳ ಮೊತ್ತವನ್ನು ಸಮೀಪಿಸಿತು. ಈ ವೆಚ್ಚಕ್ಕೆ ಕೇಂದ್ರದಿಂದ ಓವರ್‌ಡ್ರಾಫ್ಟ್ ಮೂಲಕ ರಾಜ್ಯ ಸರ್ಕಾರ ಹಣ ಪಡೆಯಿತು. ಮುಖ್ಯಮಂತ್ರಿಗಳು ಇದಕ್ಕೆ ವಿಧಾನಮಂಡಲದ ಅನುಮೋದನೆಯನ್ನು ಪಡೆದುಕೊಂಡರು. 1,32,400 ಚದರ ಅಡಿಗಳ ವಿಸ್ತಾರದಲ್ಲಿ ಈ ಭವ್ಯ ಸೌಧ ಹರಡಿ ನಿಂತಿತು. ಇದರ ಎಲ್ಲ ಅಂತಸ್ತುಗಳ ವಿಸ್ತೀರ್ಣ 5,00,000 ಚದರ ಅಡಿಗಳು. ವಿಧಾನಸೌಧದ ಮುಂಭಾಗದ ಮಹಾದ್ವಾರದ ಮೇಲೆ 'ಸರಕಾರದ ಕೆಲಸ ದೇವರ ಕೆಲಸ' ಎಂದು ಕೆಂಗಲ್ ಹನುಮಂತಯ್ಯನವರು ಬರೆಸಿ ಕೃತಕೃತ್ಯರಾದ ಭಾವ ತಳೆದರು.

ಆದರೆ ವಿಧಾನಸೌಧ ನಿರ್ಮಾಣ ಹನುಮಂತಯ್ಯನವರು ಎಸಗಿದ ಮಹಾ ಪ್ರಮಾದವೆನ್ನುವಂತೆ ವಿರೋಧ ಪಕ್ಷಗಳಿಂದ ಹಣದ ದುಂದುವೆಚ್ಚದ' ಆರೋಪಕ್ಕೆ, ನಿಂದನೆಗೆ ಒಳಗಾಯಿತು. ಕಾಂಗ್ರೆಸ್‌ನ ಕೆಲವು ಭಿನ್ನಮತೀಯರೂ ಇದಕ್ಕೆ ಧ್ವನಿಗೂಡಿಸಿದರು. ಕೆಲವು ಸಂಪುಟ ದರ್ಜೆ ಸಚಿವರೂ ಗೊಣಗಿಕೊಂಡರು. ಆಗಿನ ವಿರೋಧ ಪಕ್ಷದ ಧುರೀಣ ಶಾಂತವೇರಿ ಗೋಪಾಲಗೌಡರು ಈ ಬಗ್ಗೆ ಸದನದ ಒಳಗೂ ಹೊರಗೂ

ಸರ್ಕಾರವನ್ನು ತರಾಟೆಗೆ ತೆಗೆದುಕೊಂಡರು. ಮುಖ್ಯಮಂತ್ರಿ ಹನುಮಂತಯ್ಯನವರು ನಿಷ್ಕಳಂಕ ಮನಸ್ಸಿನಿಂದ ಈ ಮಹಾ ಕಾರ್ಯವನ್ನು ಆಗ ಮಾಡಿಸಿದ್ದರು. ಅವರು ಅಂದಿನ ಮುಖ್ಯ ಎಂಜಿನಿಯರನ್ನು ಈ ನಿರ್ಮಾಣ ಕಾರ್ಯ ಪ್ರಾರಂಭ ಮಾಡುವಾಗ ಕೆಂಗಲ್ ಹನುಮಂತ ದೇವರ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಎರಡು ಲೋಟ ಹಾಲು ತರಿಸಿ ಇಬ್ಬರೂ ಕಾಯಾ ವಾಚಾ ಮನಸಾ ಶುದ್ಧವಾಗಿ ಕೆಲಸ ಮಾಡೋಣವೆಂಬುದಾಗಿ ದೇವರ ಮುಂದೆ ಪ್ರತಿಜ್ಞೆ ಮಾಡಿ ಹಾಲು ಕುಡಿದಿದ್ದರು. ಆದರೂ ಅದರ ವೆಚ್ಚ ಮೊದಲ ಅಂದಾಜಿಗಿಂತ ನಾಲ್ಕರಷ್ಟು ಹೆಚ್ಚಿತ್ತು. ಇದಕ್ಕೆ ಈ ಇಬ್ಬರೂ ಕಾರಣರಾಗಿರಲಿಲ್ಲ. ಕಾರಣವಾದದ್ದು ಸಾಮಾನ್ಯ ಕಟ್ಟಡದ ಬದಲು ಕನಸಿನ ಭವನ ಕಟ್ಟಿದ್ದರಿಂದ. ಆದರೂ ಆರೋಪಗಳು ಬಂದಾಗ ಮುಖ್ಯಮಂತ್ರಿಗಳು ತಾವೇ ಒಂದು ತನಿಖಾ ಸಮಿತಿಯನ್ನು ನೇಮಿಸಿದರು. ಈ ಕಟ್ಟಡದ ನಿರ್ಮಾಣದಲ್ಲಿ ಆಗಾಗ್ಗೆ ಹೆಚ್ಚಿದ ವೆಚ್ಚಗಳಿಗೆ ಮಂಜೂರಾತಿ ಪಡೆಯುವಲ್ಲಿ, ಲೆಕ್ಕಪತ್ರಗಳನ್ನಿಡುವಲ್ಲಿ ಕೆಲವು ತಾಂತ್ರಿಕ ದೋಷಗಳಾಗಿದ್ದವು. ಹನುಮಂತಯ್ಯನವರು ಸಮಿತಿಯ ಮುಂದೆ ಮತ್ತು ಸದನದಲ್ಲಿ ಆ ತಪ್ಪುಗಳಾಗಿರುವುದನ್ನು ಒಪ್ಪಿಕೊಂಡರು. ಆದರೆ ಅವು ಉದ್ದೇಶಪೂರ್ವಕವಾಗಿ ಮಾಡಿದ ತಪ್ಪುಗಳಲ್ಲ ಎಂದು ಸಮರ್ಥಿಸಿಕೊಂಡರು. ಇದಕ್ಕೆ ಕೆಂಗಲ್ಲರು ಇದನ್ನು ಸರ್ಕಾರಿ ಕೆಲಸ ಎಂದು ಭಾವಿಸದೆ ದೇವರ ಕೆಲಸವೆಂದು ಭಾವಿಸಿದ್ದೇ ಬಹುಶಃ ಕಾರಣವಿರಬಹುದು.

ಈ ವಿಧಾನಸೌದ ಕಾರ್ಯ ಮುಗಿಯುವ ಹೊತ್ತಿಗೆ ಕೆಂಗಲ್ ಹನುಮಂತಯ್ಯನವರು ತಮ್ಮ ವಿರುದ್ಧ ಅವಿಶ್ವಾಸ ಗೊತ್ತುವಳಿ ಅಂಗೀಕರವಾದಾಗ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಇದಕ್ಕೆ ಇತರ ಅನೇಕ ಕಾರಣಗಳಿದ್ದವು. ಏನೇ ಆಗಲಿ 1956ರ ಅಕ್ಟೋಬರ್ ತಿಂಗಳ ವಿಜಯದಶಮಿಯಂದು ಅಂದಿನ ಮುಖ್ಯಮಂತ್ರಿ ಕಡಿದಾಳ್ ಮಂಜಪ್ಪನವರ ಕಾಲದಲ್ಲಿ ಈ ಭವ್ಯ ಸೌಧದ ಉದ್ಘಾಟನೆಯಾಯಿತು. ಸರ್ ಎಂ. ವಿಶ್ವೇಶ್ವರಯ್ಯನವರು ಹನುಮಂತಯ್ಯನವರ ವಿಧಾನಸೌಧ ನಿರ್ಮಾಣದ ವಿಷಯದ ಸರಿತಪ್ಪುಗಳನ್ನು ಇತಿಹಾಸವೇ ನಿರ್ಣಯಿಸುತ್ತದೆ ಎಂದರು. ಜನಸಾಮಾನ್ಯರು ಈ ನಿರ್ಮಾಣ ಕಾರ್ಯವನ್ನು ಮನಸಾರೆ ಕೊಂಡಾಡಿದರು. ಕೆಂಗಲ್ಲರು ಇದರ ಉದ್ಘಾಟನೆಗೆ ಪ್ರತಿ ಹಳ್ಳಿಗರನ್ನು ಆಹ್ವಾನಿಸಬೇಕೆಂದಿದ್ದರು. ಆದರೆ ಅವರ ಈ ಆಸೆ ಕೈಗೂಡದಿದ್ದರೂ ಇವರೇ ಆ ಹಳ್ಳಿಗರ ಮನಸ್ಸನ್ನು ಪ್ರವೇಶಿಸಿ ಅಲ್ಲಿ ಸ್ಥಾನ ಪಡೆಯುವ ಶಾಶ್ವತ ಕೆಲಸ ಮಾಡಿದ್ದರು. ಇಂದು ಆ ಆರೋಪಗಳೆಲ್ಲ ಕರಗಿ ಹೋಗಿವೆ. ವಿಧಾನಸೌಧ ಮಾತ್ರ ಮನೆಮಾತಾಗಿ ಉಳಿದಿದೆ.

## ಕರ್ನಾಟಕ ಏಕೀಕರಣ :

ಕನ್ನಡ ನಾಡು ಇತಿಹಾಸ ಪ್ರಸಿದ್ಧವಾದ ಪರಂಪರೆ, ನೆಲ, ಜಲ, ಎಲ್ಲವನ್ನೂ ಹೊಂದಿದ್ದಿತು. ಗಂಗರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಇಲ್ಲಿ ರಾಜ್ಯ ಸಾಮ್ರಾಜ್ಯಗಳನ್ನು ಕಟ್ಟಿ ಆಳಿದರು. ವಿಜಯನಗರದ ಪತನಾನಂತರ ಕನ್ನಡನಾಡು ಹರಿದು ಹಂಚಿಹೋಯಿತು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಅದು ತನ್ನ ಹಿಂದಿನ ಹಿರಿಮೆಯನ್ನು ಮೆರೆಯುವಂತ್ತ ಸಾಗಿದ್ದರೂ ಆ ಯಶಸ್ಸು ಅಲ್ಪಕಾಲದ್ದಾಗಿದ್ದಿತು. ಕ್ರಿ.ಶ. 1799ರಲ್ಲಿ ಮೈಸೂರು ರಾಜ್ಯ ಬ್ರಿಟಿಷರ ವಶವಾದ ನಂತರ ಕನ್ನಡ ಭಾಷಿಗರ ಪ್ರದೇಶಗಳು ಮುಂಬಯಿ ಪ್ರಾಂತ. ಹೈದರಾಬಾದು ಸಂಸ್ಥಾನ ಮತ್ತು ಮದ್ರಾಸ್ ಪ್ರಾಂತಗಳಲ್ಲಿ ಹಂಚಿ ಹೋಗಿದ್ದಿತು. ಕನ್ನಡನಾಡಿನ ಅರ್ಧಕ್ಕಿಂತ ಕಡಿಮೆ ಭಾಗ ಮಾತ್ರ ಮೈಸೂರು ಸಂಸ್ಥಾನದ ಆಳ್ವಿಕೆಯಲ್ಲಿದ್ದಿತು.

ಭಾರತಕ್ಕೆ ಸ್ವಾತಂತ್ರ್ಯ ಬಂದು ಭಾಷಾವಾರು ಪ್ರಾಂತಗಳನ್ನು ರಚಿಸುವ ಉದ್ದೇಶಕ್ಕಾಗಿ ಪ್ರಯತ್ನಗಳು ನಡೆಯತೊಡಗಿದಾಗ ಮೈಸೂರು ರಾಜ್ಯದಲ್ಲಿ ಇತರ ಕನ್ನಡ ಪ್ರದೇಶಗಳು ಸೇರ್ಪಡೆಯಾಗುವ ಪ್ರಶ್ನೆ ಮುಂದಾಯಿತು. ಕನ್ನಡ ಪ್ರದೇಶಗಳನ್ನೆಲ್ಲ ಒಂದು ಆಡಳಿತದಡಿ ತರಬೇಕೆಂಬ ಬೇಡಿಕೆ ಕಳೆದ ಶತಮಾನದಿಂದಲೇ ಕೇಳಿಬರುತ್ತಿದ್ದಿತು. 1915ರಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾದಾಗ ಈ ಬೇಡಿಕೆಗೊಂದು ಚಳವಳಿಯ ರೂಪ ಬಂದಿತು. ಉತ್ತರ ಕರ್ನಾಟಕದ ಸಾಹಿತಿಗಳು, ರಾಜಕೀಯ ಮುಖಂಡರು ಇದನ್ನು ಒತ್ತಾಯಿಸುತ್ತಲೇ ಬಂದಿದ್ದರು. ಹಳೆಯ ಮೈಸೂರಿನಲ್ಲಿ ಎಸ್. ನಿಜಲಿಂಗಪ್ಪ, ರಾಷ್ಟ್ರ ಕವಿ ಕುವೆಂಪು ಆದಿಯಾಗಿ ಹಲವಾರು ಗಣ್ಯರು ಕರ್ನಾಟಕ ಏಕೀಕರಣ ಚಳವಳಿಗೆ ಹೃತ್ಪೂರ್ವಕ ಬೆಂಬಲ ನೀಡಿದ್ದರು.

1953ರಲ್ಲಿ ನ್ಯಾಯಾಧೀಶ ವಾಂಛ ಆಯೋಗದ ಶಿಫಾರಸಿನಂತೆ ವಿಶಾಲ ಆಂಧ್ರಪ್ರದೇಶ ರಚನೆಯಾಯಿತು. ಆಗ ಶುದ್ಧ ಕನ್ನಡ ಪ್ರದೇಶವಾಗಿದ್ದ ಬಳ್ಳಾರಿ ಜಿಲ್ಲೆಯನ್ನು ಮೈಸೂರಿಗೆ ಸೇರಿಸಿಕೊಳ್ಳುವ ವಿಚಾರದಲ್ಲಿ ಕೇಂದ್ರ ಸರ್ಕಾರವು ಮೈಸೂರು ಸರ್ಕಾರಕ್ಕೆ ಆಯ್ಕೆ ಅಧಿಕಾರವನ್ನು ನೀಡಿತು. ಆಗ ಎಲ್ಲರ ಕಣ್ಣುಗಳು ಮುಖ್ಯಮಂತ್ರಿಗಳ ಕಡೆಗೆ ತಿರುಗಿದವು. ಹನುಮಂತಯ್ಯನವರು ಬಳ್ಳಾರಿ ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡು ಅಲ್ಲಿಯ ಜನಮನವನ್ನು ತಿಳಿದರು. ಕೆಲವೊಂದು ಭಿನ್ನಮತದ ನಡುವೆಯೂ ಬಳ್ಳಾರಿ ಜಿಲ್ಲೆಯನ್ನು ಮೈಸೂರಿಗೆ ಸೇರಿಸಿ ಕೊಳ್ಳಲಾಗುವುದೆಂದು ಘೋಷಿಸಿದರು. ಅವರು ಮುಂದುವರಿದು 'ಬಳ್ಳಾರಿಯು ಮೈಸೂರಿಗೆ ಸೇರಿದ್ದು ಮುಂದೆ ಬರತಕ್ಕ ಕರ್ನಾಟಕಕ್ಕೆ ವಿನಾಯಕ ಪೂಜೆ' ಎಂದು ಉದ್ಗರಿಸಿದರು.

ಕೇಂದ್ರ ಸರ್ಕಾರ ತರುವಾಯ 'ಫಜಾಲಿ ಸಮಿತಿ' ರಚಿಸಿ ಇಡೀ ಭಾರತ ಗಣರಾಜ್ಯವನ್ನು ಭಾಷಾವಾರು ಪ್ರಾಂತಗಳಾಗಿ ವಿಂಗಡಿಸಲು ಆ ಸಮಿತಿಗೆ ಉನ್ನತಾಧಿಕಾರವನ್ನು ನೀಡಿತು. ಈ ಸಮಿತಿ ಏನೇ ಶಿಫಾರಸು ಮಾಡಿದರೂ ಇತರ ಕನ್ನಡ ಪ್ರದೇಶಗಳನ್ನು ಸೇರಿಸಿಕೊಳ್ಳುವ ಅಥವಾ ಬಿಡುವ ಅಧಿಕಾರ ಮೈಸೂರು ರಾಜ್ಯಕ್ಕೆ ಸೇರಿದುದಾಗಿತ್ತು. ಆಗ ಮೈಸೂರು ರಾಜ್ಯದಲ್ಲಿ ಹೊಸ ಪ್ರದೇಶಗಳನ್ನು ಸೇರಿಸಿಕೊಳ್ಳುವುದನ್ನು ವಿರೋಧಿಸುವ ಪ್ರಬಲ ಗುಂಪು ಇದ್ದಿತು. ಈಗಾಗಲೇ ಸಾಕಷ್ಟು ಅಭಿವೃದ್ಧಿ ಸಾಧಿಸಿರುವ ಮೈಸೂರಿಗೆ ಹಿಂದುಳಿದ ಪ್ರದೇಶಗಳು ಸೇರುವುದರಿಂದ ಈ ಭಾಗದ ಸಂಪನ್ಮೂಲಗಳು ಸೋರಿ ಹೋಗುತ್ತವೆ ಎಂಬುದು ಅಂತಹ ಗುಂಪಿನ ಪ್ರಬಲ ವಾದ. ಆದರೆ ಆಂತರಿಕವಾಗಿ ಇದರಿಂದ ರಾಜಕೀಯ ಗುಂಪುಗಳ ಬಲಾಬಲದಲ್ಲಿ ವ್ಯತ್ಯಾಸವುಂಟಾಗಿ ತಮ್ಮ ಸ್ಥಾನಮಾನಗಳಿಗೆ ಧಕ್ಕೆ ಬರುತ್ತದೆ ಎಂಬ ಆತಂಕವೇ ಬಹುತೇಕ ಈ ನಿಲುವಿಗೆ ಕಾರಣವಾಗಿದ್ದಿತು. ಕಾಕತಾಳೀಯವಾಗಿ ಈ ಮೈಸೂರುವಾದಿ ಗುಂಪು ಮುಖ್ಯಮಂತ್ರಿ ಹನುಮಂತಯ್ಯನವರನ್ನು ವಿರೋಧಿಸುವ ಗುಂಪು ಸಹ ಆಗಿದ್ದಿತು. ಇದರಿಂದ ಹನುಮಂತಯ್ಯನವರು ಅತ್ತ ದರಿ ಇತ್ತ ಪುಲಿಯ ನಡುವೆ ಸಿಲುಕಿದರು.

ಹನುಮಂತಯ್ಯನವರು ಯಾವುದೇ ಕಾರ್ಯ ಕೈಗೆತ್ತಿಕೊಂಡರೂ ಯೋಚಿಸಿ ನಿರ್ಧರಿಸಿರುತ್ತಿದ್ದರು. ಒಂದು ಸಾರಿ ಸರಿಯೆಂದು ಅವರ ಮನಸ್ಸಿಗೆ ಹೋದರೆ ಏನೇ ಕಷ್ಟ ಬಂದರೂ ಅದರಿಂದ ವಿಚಲಿತರಾಗುವವರಾಗಿರಲಿಲ್ಲ. ಅವರು ಇತಿಹಾಸದ ವಿದ್ಯಾರ್ಥಿಯಾಗಿದ್ದವರು. ಕನ್ನಡ ನಾಡಿನ ಇತಿಹಾಸ, ಪರಂಪರೆಗಳನ್ನು ಬಲ್ಲವರಾಗಿದ್ದು, ತಾವೇ ಈ ನಾಡಿನ ಬಗ್ಗೆ ಒಂದು ಹಾಡು ಕಟ್ಟಿದ್ದರು :

''ಹನುಮನುದಿಸಿದ ನಾಡು, ಬಸವಬಾಳಿದ ಬೀಡು, ಆಚಾರ್ಯತ್ರಯರು ಬೆಳಗಿದ ಶ್ರೀನಾಡು, ಟೀಪು ಸುಲ್ತಾನನ ಪರಾಕ್ರಮ ಮೆರೆದ ನಾಡು, ವೀರ ಪರಂಪರೆಯ ನೆಲೆವೀಡು, ಧರ್ಮ ದಕ್ಷತೆಗಳ ಕನ್ನಾಡು''

ಇಂತಹ ಮನೋಸ್ಥಿತಿಯಲ್ಲಿದ್ದ ಹನುಮಂತಯ್ಯನವರು ಏಕೀಕರಣದ ಪರವಾಗಿಯೇ ಇದ್ದರು. ಆದರೆ ಅಂದಿನ ರಾಜಕೀಯ ಸನ್ನಿವೇಶದಲ್ಲಿ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕಾಗಿತ್ತು. ಅದಕ್ಕಾಗಿ ವಿಶಾಲ ಮೈಸೂರು ರಚನೆಯಿಂದ ಹಳೆ ಮೈಸೂರಿಗೆ ಏನಾದರೂ ಅನ್ಯಾಯವಾಗುತ್ತದೆಯೇ ಎಂಬುದನ್ನು ಪರಿಶೀಲಿಸಲು ಒಂದು ಸಮಿತಿಯನ್ನು ರಚಿಸಿದರು. ಆ ಸಮಿತಿಯು ಈ ವಾದವನ್ನು ಅಲ್ಲಗಳೆದು ವಿಶಾಲ ಮೈಸೂರು ರಾಜ್ಯದ ರಚನೆಯಿಂದ ರಾಜ್ಯ ಹೆಚ್ಚು ಸ್ವಾವಲಂಬಿಯಾಗುತ್ತದೆ ಎಂಬ ವರದಿ ನೀಡಿತು.

1953ರಲ್ಲಿ ಉತ್ತರ ಕರ್ನಾಟಕದಲ್ಲಿ ಪ್ರವಾಸ ಕೈಗೊಂಡರು. ಅಲ್ಲೆಲ್ಲ ಕರ್ನಾಟಕ ಏಕೀಕರಣವಾಗುವ ಬಗ್ಗೆ ಅತ್ಯುತ್ಸಾಹ ಕಂಡುಬರುತ್ತಿದ್ದಿತು. ಹಳ್ಳಿಹಳ್ಳಿಗಳಲ್ಲೂ ಕೆಂಗಲ್ಲರಿಗೆ ಆತ್ಮೀಯ ಸ್ವಾಗತ ದೊರೆಯಿತು. ಅವರನ್ನು ''ನೀವು ಕರ್ನಾಟಕದ ಕಣ್ಮಣಿ, ಕರ್ನಾಟಕದ ಉದ್ಧಾರಕ, ಕರ್ನಾಟಕದ ಭಾವಿ ಮುಖ್ಯಮಂತ್ರಿ'' ಎಂದೆಲ್ಲ ಹೊಗಳಿದರು. ಅಂದು ಹನುಮಂತಯ್ಯನವರು ಕೈಗೊಳ್ಳುವ ನಿರ್ಧಾರದ ಮೇಲೆಯೇ ಕರ್ನಾಟಕದ ಏಕೀಕರಣ ಅವಲಂಬಿಸಿದ್ದಿತು.

ಹನುಮಂತಯ್ಯ ವಿಧಾನಸಭೆಯಲ್ಲಿ ಕರ್ನಾಟಕ ಏಕೀಕರಣವಾಗುವುದರ ಅಗತ್ಯವನ್ನು ಎಳೆಎಳೆಯಾಗಿ ಸದಸ್ಯರಿಗೆ ಬಿಡಿಸಿ ಹೇಳಿದರು. ಹೈದರ್-ಟಿಪ್ಪು ಸುಲ್ತಾನರ ಕಾಲದಲ್ಲಿ ಮೈಸೂರು ರಾಜ್ಯದ ವಿಸ್ತೀರ್ಣ 80,000 ಚದರ ಮೈಲಿಗಳಿಗೆ ಮೀರಿತ್ತು. 1799ರ ಆನಂತರ ಅದು 29,000 ಚದರ ಮೈಲಿಗಳಿಗೆ ಇಳಿಯಿತು. ಆದ್ದರಿಂದ ನಮ್ಮೆಲ್ಲರ ಇಂದಿನ ಕರ್ತವ್ಯ ನಿಜಾಮರಿಗೆ ಹೋದ ಪ್ರದೇಶ ಮತ್ತು ಮರಾಠರಿಗೆ ಹೋದ ಪ್ರದೇಶಗಳನ್ನು ಒಂದುಗೂಡಿಸುವುದೇ ಆಗಿದೆ ಎಂದರು. ಹೀಗೆ ರಚಿತವಾಗುವ ವಿಶಾಲ ಮೈಸೂರು, ಮೈಸೂರು ರಾಜ್ಯವೇ ಹೊರತು ಹೊಸ ರಾಜ್ಯವಲ್ಲ ಎಂದು ಏಕೀಕರಣ ವಿರೋಧಿಗಳಿಗೆ ಸಮಜಾಯಿಷಿ ನೀಡಿದರು. ''ನಾನು ಕರ್ನಾಟಕದ ದಾಸ'' ಎಂದು ಸಹ ಘೋಷಿಸಿಕೊಂಡರು. ಅಂದಿನ ವಿಧಾನ ಸಭಾಪತಿಯಾಗಿದ್ದ ಎಸ್. ಸಿದ್ದಯ್ಯನವರ ಸಹಕಾರ ಪಡೆದು ಏಕೀಕರಣಕ್ಕೆ ಶಾಸಕರ ಬೆಂಬಲಗಳಿಸಿಕೊಂಡರು. ಕರ್ನಾಟಕದ ಏಕೀಕರಣ ಸಾಧಿಸುವ ಮೂಲಕ ಇತಿಹಾಸದಲ್ಲಿ ಮಹತ್ತರ ಕಾರ್ಯನಿರ್ವಹಿಸಿದ ಶಾಶ್ವತ ಕೀರ್ತಿಗೆ ಪಾತ್ರರಾದರು.

ಆದರೆ ಕೆಂಗಲ್ ಹನುಮಂತಯ್ಯನವರ ಬಗ್ಗೆ ವಿರೋಧವಾಗಿದ್ದವರಿಗೆ ತಮ್ಮ ಗುರಿ ಸಾಧಿಸಿಕೊಳ್ಳುವ ಅವಕಾಶ ಒದಗಿತು. ಅವರು ಹನುಮಂತಯ್ಯನವರ ಬಿಗಿ ಆಡಳಿತದಿಂದ ಬಿಡಿಸಿಕೊಳ್ಳಲು ಅವರ ವಿರುದ್ಧ ಶಾಸನ ಸಭೆಯಲ್ಲಿ ಅವಿಶ್ವಾಸ ಗೊತ್ತುವಳಿ ಮಂಡಿಸಿದರು. ಕಾಂಗ್ರೆಸ್ ಹೈಕಮ್ಯಾಂಡಿನ ಅನುಗ್ರಹವು ಹನುಮಂತಯ್ಯನವರ ಪಾಲಿಗೆ ಕ್ಷೀಣಿಸಿತ್ತು. ಈ ಎಲ್ಲದರ ಒಟ್ಟಿನ ಪರಿಣಾಮವಾಗಿ 1956ರ ಆಗಸ್ಟ್‌ನಲ್ಲಿ ಅವಿಶ್ವಾಸ ಗೊತ್ತುವಳಿ ಅಂಗೀಕಾರವಾಗಿ ಕೆಂಗಲ್ಲರು ಮುಖ್ಯಮಂತ್ರಿ ಹುದ್ದೆಗೆ ರಾಜೀನಾಮೆ ನೀಡಿದರು.

## ಇತರ ಕಾರ್ಯಗಳು

ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದ ಅವಧಿಯಲ್ಲಿ ಇನ್ನು ಅನೇಕ ಗುರುತರ ಕಾರ್ಯಗಳನ್ನು ಮಾಡಿದರು. ಅವುಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ತಂದ ಸುಧಾರಣೆಗಳು ಮುಖ್ಯವಾದವು. ಮುಖ್ಯಮಂತ್ರಿಗಳೇ ಅಧ್ಯಕ್ಷರಾಗಿದ್ದ ಶಿಕ್ಷಣ ಸುಧಾರಣಾ ಸಮಿತಿಯು ಶಿಕ್ಷಣ ಕ್ಷೇತ್ರದಲ್ಲಿ ಕೈಗೊಳ್ಳಬೇಕಾದ ಸುಧಾರಣೆಗಳ ಕುರಿತು ದೀರ್ಘ ವರದಿಯೊಂದನ್ನು ಸಲ್ಲಿಸಿತು. ಕೆಂಗಲ್ಲರು ಈ ವರದಿಯ ತಿರುಳನ್ನು ವಿಧಾನಸಭೆಯಲ್ಲಿ ಮಂಡಿಸಿ ಶಾಸಕರಿಗೆ ವಿವರಿಸಿದರು. ಕಡ್ಡಾಯ ಶಿಕ್ಷಣ, ವಿದ್ಯಾರ್ಥಿಗಳಿಗೆ ಕೈಕೆಲಸದಲ್ಲಿ ತರಬೇತಿ ನೀಡುವುದು, ವೃತ್ತಿಪರ ಪ್ರಯೋಗಗಳಿಗೆ ಆದ್ಯತೆ ಇವೆಲ್ಲ ಅವರ ಶಿಕ್ಷಣ ಯೋಜನೆಯ ಭಾಗವಾಗಿದ್ದವು. ಕಡ್ಡಾಯ ಶಿಕ್ಷಣಕ್ಕೆ ಬೆಂಬಲವಾಗಿ, ಉಳ್ಳವರಿಂದ ಜಮೀನುಗಳನ್ನು ದಾನವಾಗಿ ಪಡೆದು ಆಯಾ ಶಾಲೆಗಳಿಗೆ ಅವುಗಳ ನಿರ್ವಹಣೆಯ ಜವಾಬ್ದಾರಿ ವಹಿಸಬೇಕೆಂಬುದು ಅವರ ಆಶಯವಾಗಿದ್ದಿತು. ಇದರಿಂದ ಶಾಲೆಗಳಲ್ಲಿ ಮಕ್ಕಳಿಗೆ ಶ್ರಮದಾನದ ಬಗ್ಗೆ ತರಬೇತಿ ನೀಡುವುದು ಸುಲಭವಾಗುತ್ತದೆಂದು ಅವರು ನಂಬಿದ್ದರು. ವ್ಯವಸಾಯದ ಕೆಲಸಗಳ ಸಮಯದಲ್ಲಿ ವಿದ್ಯಾರ್ಥಿಗಳಿಗೆ ರಜೆ ಕೊಡುವುದರಿಂದ ಅವರು ತಮ್ಮ ತಂದೆತಾಯಿಗಳಿಗೆ ನೆರವಾಗಲು ಸಹಾಯಕವೆಂದು ಅವರು ಭಾವಿಸಿದ್ದರು. ಅವರ ಶಿಕ್ಷಣ ಸುಧಾರಣೆಗಳಲ್ಲಿ ಹಲವು ಜಾರಿಗೆ ಬಂದವು.

ಹನುಮಂತಯ್ಯನವರು ಸುಸಂಸ್ಕೃತರಾಗಿದ್ದಂತೆಯೇ ಕಲೆ, ಸಾಹಿತ್ಯ ಸಂಸ್ಕೃತಿಗಳ ಬಗ್ಗೆ ಕಾಳಜಿಯುಳ್ಳವರಾಗಿದ್ದರು. ಅವರು ಜನರ ಜೀವನಮಟ್ಟ ಏರಿದರೆ ಸಾಲದು ಜೀವನ ಮೌಲ್ಯವು ಏರಬೇಕು ಎಂದು ನಂಬಿದ್ದರು. ಅದಕ್ಕಾಗಿ ಜನರಲ್ಲಿ ಧಾರ್ಮಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಹಾಗೂ ಕಲಾ ವಿಷಯಗಳ ಬಗ್ಗೆ ಹೆಚ್ಚಿನ ಅರಿವುಂಟಾಗಬೇಕೆಂಬುದು ಅವರ ಹಂಬಲವಾಗಿದ್ದಿತು. ಅನೇಕ ಸಾಹಿತ್ಯಿಕ ವಿಷಯಗಳಲ್ಲಿ ಕುವೆಂಪು, ಅನಕೃ, ಎ.ಎನ್. ಮೂರ್ತಿರಾವ್, ಡಿ.ವಿ.ಜಿ, ದೇವುಡು, ಬಿ. ಶಿವಮೂರ್ತಿಶಾಸ್ತ್ರಿ ಸಿ.ಕೆ. ವೆಂಕಟರಾಮಯ್ಯ, ಮೊದಲಾದವರ ಸಲಹೆ, ಮಾರ್ಗದರ್ಶನಗಳನ್ನು ಪಡೆಯುತ್ತಿದ್ದರು. ಪ್ರಾಚೀನ ಸಾಹಿತ್ಯ ಕೃತಿಗಳು ಇಂದಿನ ಪೀಳಿಗೆಯವರಿಗೆ ಸುಲಭ ದರದಲ್ಲಿ ದೊರೆಯಬೇಕೆಂಬ ಉದ್ದೇಶದಿಂದ ಅನೇಕ ಕೃತಿಗಳ ಮರುಮುದ್ರಣ ಮಾಡಿಸಿದರು. ಅವುಗಳಲ್ಲಿ ಕುಮಾರ ವ್ಯಾಸ ಭಾರತ, ಕನ್ನಡ ಜೈಮಿನಿ ಭಾರತ, ಹರಿಶ್ಚಂದ್ರ ಕಾವ್ಯ, ಎ.ಆರ್. ಕೃಷ್ಣಶಾಸ್ತ್ರಿಗಳ ಕನ್ನಡ ವಚನ ಭಾರತ - ಇವು ಮುಖ್ಯವಾದವು. ಕನ್ನಡ ವಿಶ್ವಕೋಶ ಮತ್ತು ಕನ್ನಡ ನಿಘಂಟು ಯೋಜನೆಗಳು ಇವರ ಕಾಲದಲ್ಲೇ ಪ್ರಾರಂಭವಾದವು.

ಗ್ರಾಮೀಣ ಸಂಸ್ಕೃತಿಯನ್ನು ಉಳಿಸಿ ಬೆಳಸುವುದು ಅಗತ್ಯವೆಂದು ಭಾವಿಸಿದ್ದ ಹನುಮಂತಯ್ಯನವರು ಅದಕ್ಕಾಗಿ ಹಲವಾರು ಕ್ರಮಗಳನ್ನು ಕೈಗೊಂಡರು. ಜನರಿಗೆ ಪ್ರಿಯವಾದ ನಾಟಕಗಳನ್ನು ಆಡುವುದು, ಭಜನೆ, ಹರಿಕಥೆ ನಡೆಸುವುದು ಇದಕ್ಕೆಲ್ಲ ಸರ್ಕಾರ ಪ್ರೋತ್ಸಾಹ ನೀಡಿತು. ಸಾಹಿತಿಗಳು ಕಾರ್ಯಕ್ರಮಗಳನ್ನು ನಡೆಸಲು ಅವಕಾಶ ಕಲ್ಪಿಸಿತು. ಈ ಕಾರ್ಯಕ್ರಮಗಳಿಂದ ಸಂಜೆ ಹೊತ್ತು ರೈತರು, ಕಾರ್ಮಿಕರು, ಒಳ್ಳೆಯ ರೀತಿಯಲ್ಲಿ ಕಾಲ ಕಳೆಯಬೇಕೆಂಬುದು ಅವರ ಆಶಯವಾಗಿತ್ತು. ಇಂತಹವುಗಳನ್ನೆಲ್ಲ ಮಾಡಲು ಕಟ್ಟಡಗಳ ಅಗತ್ಯವಿತ್ತು. ಅದಕ್ಕಾಗಿ ಮುಖ್ಯ ಊರುಗಳಲ್ಲಿ 'ಸಂಸ್ಕೃತಿ ಪ್ರಸಾರ ಮಂದಿರಗಳನ್ನು ಕಟ್ಟಿಸಿದರು.

ಗಾಂಧೀಜಿಯವರ ತತ್ವಾನುಷ್ಠಾನದ ಅಂಗವಾಗಿ ಪಾನ ನಿರೋಧವನ್ನು ಜಾರಿಗೆ ತಂದರು. ಅದರಿಂದ ರಾಜ್ಯದ ಬೊಕ್ಕಸಕ್ಕೆ ಆಗುತ್ತಿದ್ದ ನಷ್ಟದ ಬಗ್ಗೆ ಅವರು ಯೋಚಿಸಲಿಲ್ಲ. ಕೆಲವೆಡೆ ವಸಾಹತುಶಾಹಿ ಹೆಸರುಗಳಿದ್ದುದನ್ನು ತೆಗೆದು ಸ್ಥಳೀಯ ಹೆಸರುಗಳನ್ನಿಟ್ಟರು. ಆಗ ಫ್ರೆಂಚ್ ರಾಕ್ಸ್ ಪಾಂಡವಪುರವಾಯಿತು, ಕ್ಲೋಸ್‌ಪೇಟ್ ರಾಮನಗರವಾಯಿತು. ಸಾಹಿತ್ಯ ಮತ್ತು ಸಂಸ್ಕೃತಿ ಇಲಾಖೆ ಇವರ ಕಾಲದಲ್ಲಿ ಪ್ರಾರಂಭವಾಯಿತು.

ಕೆಂಗಲ್ಲರು ದೇಶದ ಅಭಿವೃದ್ಧಿಗಾಗಿ ಪ್ರತಿಪಾದಿಸಿದ ಕೈಗಾರಿಕಾ ನೀತಿ ಇಂದಿಗೆ ನೂರಕ್ಕೆ ನೂರರಷ್ಟು ಅನ್ವಯಿಸುತ್ತಿರುವುದು ಅವರ ದೂರದೃಷ್ಟಿಗೆ ಸಾಕ್ಷಿಯಾಗಿದೆ. ವಿಧಾನಸಭೆಯಲ್ಲಿ ಕೆಲವು ಶಾಸಕರು ಹೊರರಾಜ್ಯಗಳಿಂದ ಉದ್ಯಮಿಗಳು ಬಂದು ಇಲ್ಲಿ ಉದ್ಯಮಗಳನ್ನು ಸ್ಥಾಪಿಸುತ್ತಿರುವುದಕ್ಕೆ ಆಕ್ಷೇಪಿಸಿದರು. ಆಗ ಭಾಷಾ ಗುಂಪುಗಳ ಒತ್ತಡ ದಟ್ಟವಾಗಿದ್ದ ಕಾಲ. ಅದಕ್ಕೆ ಹನುಮಂತಯ್ಯನವರು ನಮ್ಮ ರಾಜ್ಯ ಅಭಿವೃದ್ಧಿಯಾಗಬೇಕಾದರೆ ಹೊರ ರಾಜ್ಯಗಳವರೂ ಬರಲಿ, ಬೇಕಾದರೆ, ಹೊರ ದೇಶಗಳವರೂ ಬರಲಿ ಸ್ವಾಗತಿಸೋಣ ಎನ್ನುತ್ತಾರೆ. ಇಂದು ಈ ಕಾರ್ಯನೀತಿಯನ್ನೇ ರಾಷ್ಟ್ರೀಯ ನೀತಿಯಾಗಿ ಅಂಗೀಕರಿಸಿರುವುದು ಕೆಂಗಲ್ಲರ ದೃಷ್ಟಿಗೆ ದೊರಕಿದ ಮನ್ನಣೆಯಾಗಿದೆ. ಹಾಗೆಂದು ಅವರು ವಿದೇಶೀಯರು ಸ್ಥಳೀಯರನ್ನು ಶೋಷಿಸುವುದನ್ನು ಸಹಿಸುತ್ತಿರಲಿಲ್ಲ. ಕೋಲಾರದ ಚಿನ್ನದ ಗಣಿಗಳಲ್ಲಿ ನೂರು ವರ್ಷಗಳಿಂದ ಗಣಿಗಾರಿಕೆಯನ್ನು ವಿದೇಶಿ ಕಂಪನಿಗಳು ನಡೆಸಿಕೊಂಡು ಬಂದಿದ್ದವು. ಅವುಗಳಿಂದ ಕಾರ್ಮಿಕರ ಶೋಷಣೆಯಾಗುತ್ತಿದ್ದಿತು. ಇದನ್ನು ಪರಿಹರಿಸಲು ಹಿಂದಿನ ಕಂಪನಿಗಳನ್ನು ರದ್ದುಪಡಿಸಿ ಗಣಿಗಳನ್ನು ರಾಷ್ಟ್ರೀಕರಿಸುವುದರಲ್ಲಿ ಅವರು ಯಶಸ್ವಿಯಾದರು.

ಹನುಮಂತಯ್ಯನವರು ರಾಜ್ಯದಲ್ಲಿ ಭ್ರಷ್ಟಾಚಾರರಹಿತ, ಶಿಸ್ತಿನಿಂದ ಕೂಡಿದ ಮತ್ತು

ಕಾನೂನನ್ನು ಮಾನ್ಯ ಮಾಡುವ ಆಡಳಿತವನ್ನು ಕೊಡಲು ನಿರ್ಧರಿಸಿ ಅದರಲ್ಲಿ ಸಫಲರಾದರು. ಹಾಗೆಯೇ ಅವರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ವಿಷಯಗಳ ಬಗ್ಗೆಯೂ ಓದಿ, ಕೇಳಿ ಮತ್ತು ಪ್ರವಾಸ ಮಾಡಿ, ಚೆನ್ನಾಗಿ ತಿಳಿದುಕೊಂಡಿದ್ದರು. ವಿಶ್ವಸಂಸ್ಥೆಯ ಮಹಾ ಪ್ರಧಾನ ಕಾರ್ಯದರ್ಶಿ ಡ್ಯಾಗ್ ಹ್ಯಾಮರ್ಶೀಲ್ಡ್‌ರವರು ಬೆಂಗಳೂರಿಗೆ ಅಂತರರಾಷ್ಟ್ರೀಯ ಸಮಾರಂಭವೊಂದಕ್ಕೆ ಬಂದಿದ್ದರು. ಅವರು ಕೆಂಗಲ್ಲರ ವಿಚಾರಪೂರ್ಣ ಭಾಷಣವನ್ನು ಮೆಚ್ಚಿಕೊಂಡು ''ಕೆಂಗಲ್ಲರಂಥ ಉನ್ನತಮಟ್ಟದ ಬುದ್ಧಿಜೀವಿ ರಾಜಕಾರಣಿಗಳು ವಿರಳ. ಇವರನ್ನು ಕಂಡು ಸಂತೋಷವಾಯ್ತು. ಈ ಭೇಟಿ ನನಗೆ ಹೆಮ್ಮೆ ತಂದಿದೆ'' ಎಂದು ಅಭಿಮಾನದಿಂದ ಹೇಳಿದರು. ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ ಸದಸ್ಯರಾಗಿದ್ದ ಹನುಮಂತಯ್ಯನವರು ಅದರ ಸ್ಥಾಯಿ ಸಮಿತಿಯಾದ ಯೋಜನಾ ಆಯೋಗದ ಸದಸ್ಯರು ಆಗಿದ್ದರು. ಅಲ್ಲಿ ದೇಶದ ಅಭಿವೃದ್ಧಿಯ ಬಗ್ಗೆ ಅನೇಕ ಉಪಯುಕ್ತ ಸಲಹೆಗಳನ್ನು ನೀಡಿ ರಾಷ್ಟ್ರಮಟ್ಟದಲ್ಲಿ ತಮ್ಮ ವ್ಯಕ್ತಿತ್ವದ ಪರಿಚಯ ಮಾಡಿಕೊಟ್ಟರು.

## ಶಾಸಕರಾಗಿ ಮುಂದುವರಿಕೆ

ಕೆಂಗಲ್ ಹನುಮಂತಯ್ಯನವರು 1956 ಆಗಸ್ಟ್‌ನಲ್ಲಿ ಮುಖ್ಯಮಂತ್ರಿ ಸ್ಥಾನವನ್ನು ತ್ಯಜಿಸಬೇಕಾಗಿ ಬಂದಿತು. ಆದರೆ ಅದು ಅವರ ಸಂಸದೀಯ ಜೀವನಕ್ಕೆ ಮುಳುವಾಗಲಿಲ್ಲ. ಮುಖ್ಯಮಂತ್ರಿ ಹುದ್ದೆಯು ಕೈತಪ್ಪಿದ್ದರಿಂದ ಅವರು ಕೈಕಟ್ಟಿ ಕೂರಲಿಲ್ಲ. 1957ರ ವಿಧಾನ ಸಭಾ ಚುನಾವಣೆಯಲ್ಲಿ ಸ್ಪರ್ಧಿಸಿದರು. ಆಗ ಅವರನ್ನು ಸೋಲಿಸಲು ಭಾರಿ ಪ್ರಯತ್ನ ನಡೆದರೂ ಅವರು ಹೆಚ್ಚಿನ ಬಹುಮತದಿಂದಲೇ ಚುನಾಯಿತರಾದರು. ವಿಧಾನಸಭೆಯ ಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ತಾವು ಮುಖ್ಯಮಂತ್ರಿಗಳಾಗಿದ್ದಾಗ ಮಾಡಿದ ಅನೇಕ ಕೆಲಸಗಳ ಬಗ್ಗೆ ಪ್ರಸ್ತಾಪ ಬಂದಾಗ ಅದಕ್ಕೆ ಸಮಂಜಸವಾದ ಉತ್ತರ ಕೊಟ್ಟರು. ರಾಜ್ಯದ ಇತರ ವ್ಯವಹಾರಗಳ ಬಗ್ಗೆಯೂ ಸಕ್ರಿಯವಾಗಿ ಚರ್ಚೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಇಲಾಖಾ ಕಾರ್ಯದರ್ಶಿಗಳು ಮಂತ್ರಿಗಳ ಅಧಿಕಾರದಲ್ಲಿ ಹಸ್ತಕ್ಷೇಪ ಮಾಡುತ್ತಿರುವುದರ ಬಗ್ಗೆ ಸರ್ಕಾರವನ್ನು ಜಾಗೃತಿಗೊಳಿಸಿದರು. ಅವರು ತನ್ನ ಕಾಲದಲ್ಲಿ ಮಾಡಿದ ಕೆಲಸ ಕಾರ್ಯಗಳ ಬಗ್ಗೆ ಮೆಲುಕು ಹಾಕುತ್ತ ಕುಳಿತುಕೊಳ್ಳಲಿಲ್ಲ. ವಿಧಾನ ಸಭೆಯಲ್ಲಿ ಬಜೆಟ್ ಮಂಡನೆಯಾದಾಗ ಆಸಕ್ತಿಯಿಂದ ಚರ್ಚೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು. 1959ರಲ್ಲಿ ಬೆಂಗಳೂರು, ಮೈಸೂರು ನಗರಗಳಲ್ಲಿ ವಿದ್ಯಾರ್ಥಿಗಳ ಮುಷ್ಕರ ಹಿಂಸಾರೂಪ ತಳೆದಾಗ ಮುಷ್ಕರಕಾರರ ಮತ್ತು ಸರ್ಕಾರದ ಸರಿತಪ್ಪುಗಳನ್ನು ಶಾಸನ ಸಭೆಯಲ್ಲಿ ನಿಷ್ಪಕ್ಷಪಾತವಾಗಿ ವಿಮರ್ಶಿಸಿದರು:

ಶ್ರೀ ಬಿ. ಡಿ. ಜತ್ತಿಯವರು ಮುಖ್ಯಮಂತ್ರಿಗಳಾಗಿದ್ದಾಗ ನಾಯಕತ್ವದ ಬಿಕ್ಕಟ್ಟು ಉದ್ಭವಿಸಿತು. ಆಗ ಕಾಂಗ್ರೆಸ್ ಹೈಕಮ್ಯಾಂಡ್ ಮೂರು ನಾಲ್ಕು ನಾಯಕರುಗಳ ಹೆಸರನ್ನು ಸೂಚಿಸಿ ಇವರಲ್ಲಿ ಯಾರಾದರೊಬ್ಬರನ್ನು ಶಾಸಕಾಂಗ ಪಕ್ಷದ ನಾಯಕರಾಗಿ ಆರಿಸಲು ಶಾಸಕರಿಗೆ ಅವಕಾಶ ಕಲ್ಪಿಸಿತು. ಆಗ ಆ ಹೆಸರುಗಳಲ್ಲಿ ಕೆಂಗಲ್ಲರದೂ ಒಂದಾಗಿದ್ದಿತು. ಶಾಸಕರು ಕೆಂಗಲ್ ಹನುಮಂತಯ್ಯನವರನ್ನೇ ನಾಯಕರನ್ನಾಗಿ ಆರಿಸಿದರು. ಇದು ಕೆಂಗಲ್ಲರಿಗೆ ದೊರೆತ ನೈತಿಕ ಗೆಲುವು. ಆದರೆ ಹೈಕಮ್ಯಾಂಡಿಗೆ ಅದರಲ್ಲೂ ಪ್ರಧಾನಿಯವರಿಗೆ ಕೆಂಗಲ್ಲರನ್ನು ಮತ್ತೆ ಅಧಿಕಾರಕ್ಕೆ ತರುವ ಇಚ್ಛೆಯಿಲ್ಲದಿದ್ದರಿಂದ ಬಿ.ಡಿ. ಜತ್ತಿಯವರನ್ನೇ ಮುಂದುವರಿಸಲಾಯಿತು. ಆದರೂ ಕೆಂಗಲ್ಲರು ವಿಶಾಲ ಕರ್ನಾಟಕದ ಕಾಂಗ್ರೆಸ್ ಶಾಸಕರ ಬಹುಮತದ ಬೆಂಬಲ ಪಡೆದ ಹೆಗ್ಗಳಿಕೆಗೆ ಪಾತ್ರರಾದರು.

## ಲೋಕಸಭೆ ಪ್ರವೇಶ

ಕೆಂಗಲ್ಲರು ಅಧಿಕಾರವಿಲ್ಲದಿದ್ದರೂ ವರ್ಚಸ್ಸುಳ್ಳ ವ್ಯಕ್ತಿಯಾಗಿದ್ದರು. ಅವರ ಬೆಂಬಲಕ್ಕೆ ಸಾಕಷ್ಟು ಶಾಸಕರೂ ಪಕ್ಷದ ಕಾರ್ಯಕರ್ತರೂ ಅಪಾರ ಸಂಖ್ಯೆಯ ಅಭಿಮಾನಿಗಳೂ ಇದ್ದರು. ಅವರು 1957 ರಿಂದ 1962 ರವರೆಗೆ ಹೆಚ್ಚಿನ ಜವಾಬ್ದಾರಿಗಳಿಲ್ಲದೆ ಶಾಸಕರಾಗಿಯೇ ಕಳೆದರು. ಆದರೆ ಹೆಚ್ಚು ಕಾಲ ಹೀಗೆ ಮುಂದುವರಿಸಬಾರದೆಂದು ನಿರ್ಧರಿಸಿದ ಪಕ್ಷ ಅವರನ್ನು 1962ರ ಲೋಕಸಭಾ ಚುನಾವಣೆಗೆ ನಿಲ್ಲಿಸಿತು. ಅವರು ಬೆಂಗಳೂರು ನಗರ ಕ್ಷೇತ್ರದಿಂದ ಸ್ಪರ್ಧಿಸಿ ಚುನಾಯಿತರಾದರು. ಕೆಂಗಲ್ ಹನುಮಂತಯ್ಯನವರು ಲೋಕ ಸಭೆ ಪ್ರವೇಶಿಸಿದ್ದು ಅವರ ಜೀವನದಲ್ಲಿ ಹೊಸ ಅಧ್ಯಾಯವನ್ನು ತೆರೆಯಿತು. ಹಾಗೆಯೇ ಲೋಕ ಸಭೆಗೂ ಒಂದು ವೈಶಿಷ್ಟ್ಯ ಬಂದಿತು. ಅವರು ಭಾರತ ಕಂಡ ಅತ್ಯುತ್ತಮ ಸಂಸದೀಯಪಟುಗಳಲ್ಲಿ ಒಬ್ಬರಾಗಿ ರೂಪುಗೊಂಡರು. ದಕ್ಷಿಣ ಭಾರತವನ್ನು ಪ್ರತಿನಿಧಿಸುತ್ತಿದ್ದ ಸದಸ್ಯರಲ್ಲಿ ಅವರಷ್ಟು ಪರಿಣಾಮಕಾರಿಯಾಗಿ ಲೋಕ ಸಭಾ ಕಲಾಪಗಳಲ್ಲಿ ಭಾಗವಹಿಸುತ್ತಿದ್ದವರು ವಿರಳ. ಕೆಂಗಲ್ಲರು ಸಂದರ್ಭ ಬಿದ್ದಾಗ ಸರ್ಕಾರದ ಅರೆ ಕೊರೆಗಳನ್ನು ಎತ್ತಿ ಹೇಳಲು ಹಿಂದೆಗೆದವರಲ್ಲ. ಆಡಳಿತ ಪಕ್ಷದಲ್ಲಿದ್ದೂ ಪ್ರಧಾನಿ ನೆಹರೂರವರ ಕ್ರಮಗಳನ್ನು ಪ್ರಶ್ನಿಸುತ್ತಿದ್ದವರು ಅವರೊಬ್ಬರೇ ಎಂಬ ಪ್ರತೀತಿಗೆ ಕಾರಣವಾಗುವಷ್ಟು ವಿಮರ್ಶಾ ದೃಷ್ಟಿಯಿಂದ ಅವರು ಮಾತನಾಡುತ್ತಿದ್ದರು.

ನೇಫಾದ ರಕ್ಷಣೆಯ ವಿಷಯ, ಜಮ್ಮು-ಕಾಶ್ಮೀರದ ವಿಷಯ ಮತ್ತು ತೆಲಂಗಾಣ ಸಮಸ್ಯೆಯ ಕುರಿತು ಕೆಂಗಲ್ಲರು ಲೋಕಸಭೆಯಲ್ಲಿ ಮಾಡಿರುವ ಭಾಷಣಗಳು ವಿಚಾರಪೂರಿತವಾಗಿವೆ. ಅವರ ವಿಚಾರ ಮಂಡನೆಯಲ್ಲಿ ಹರಿತವಾದ ಶೈಲಿ, ಸ್ಪಷ್ಟತೆ ಮತ್ತು ನಿರ್ಭೀತ ಅಭಿವ್ಯಕ್ತಿಗಳು ಎದ್ದು ಕಾಣುತ್ತವೆ. ಲಾಲ್ ಬಹದ್ದೂರ್ ಶಾಸ್ತ್ರಿಗಳು ಪ್ರಧಾನಿಯಾದ ಮೇಲೆ ಕೆಂಗಲ್ಲರಿಗೆ ಇತರ ಜವಾಬ್ದಾರಿಗಳನ್ನು ವಹಿಸಿದರು . ಕಾಫಿ ಮಂಡಲಿಯ ಸದಸ್ಯರಾದರು, ಅಖಿಲ ಭಾರತ ವಿವೇಕಾನಂದ ಸ್ಮಾರಕ ಸಮಿತಿಯ ಮೈಸೂರು ರಾಜ್ಯ ಶಾಖೆಯ ಅಧ್ಯಕ್ಷರಾದರು. 1966ರಲ್ಲಿ ಕೆನಡದ ಒಟ್ಟಾವದಲ್ಲಿ ನಡೆದ ಕಾಮನ್‌ವೆಲ್ತ್ ಸಂಸದೀಯ ಸಮ್ಮೇಳನದಲ್ಲಿ ಭಾರತೀಯ ನಿಯೋಗದ ನಾಯಕರಾಗಿ ಭಾಗವಹಿಸಿದರು. ಇಂಗ್ಲೆಂಡ್, ಅಮೆರಿಕ ಮತ್ತು ಕೆನಡ ದೇಶಗಳಲ್ಲಿರುವ ಸಾರ್ವಜನಿಕ ಆಡಳಿತ ಪದ್ಧತಿಗಳನ್ನು ಅಭ್ಯಸಿಸಿದರು.

1967ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಸ್ಪರ್ಧಿಸಿ ಮರು ಆಯ್ಕೆಗೊಂಡರು. ಕಾಂಗ್ರೆಸ್ ಪಕ್ಷದ ಸಂಸದೀಯ ಮಂಡಳಿಯ ಉಪನಾಯಕರಾಗಿ ಚುನಾಯಿತರಾದರು. ಭಾರತ ಸರ್ಕಾರ ರಚಿಸಿದ್ದ ಆಡಳಿತ ಸುಧಾರಣಾ ಆಯೋಗದಲ್ಲಿ ಮೊದಲು ಸದಸ್ಯರಾಗಿ ಮತ್ತು ಅನಂತರ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಕೆಂಗಲ್ಲರು ತಮ್ಮ ಅಪಾರ ಆಡಳಿತ ಅನುಭವಗಳನ್ನು ಇಲ್ಲಿ ಹರಳುಗಟ್ಟಿಸಿ 25 ಸಾವಿರ ಪುಟಗಳ ಬೃಹತ್ ವರದಿಯನ್ನು 1970ರಲ್ಲಿ ಸರ್ಕಾರಕ್ಕೆ ಸಲ್ಲಿಸಿದರು. ಸರ್ಕಾರ ಈ ವರದಿಯ ಶೇಕಡ ಎಂಭತ್ತರಷ್ಟು ಶಿಫಾರಸುಗಳನ್ನು ಅಂಗೀಕರಿಸಿತು. ಅವುಗಳ ಅನುಷ್ಠಾನ ಮುಂದೆ ಬಂದ ಸರ್ಕಾರಗಳನವಲಂಬಿಸಿದ್ದಿತು. 1969ರಲ್ಲಿ ಬಾರ್ಸಿಲೋನದಲ್ಲಿ ನಡೆದ ಆಡಳಿತ ವಿಜ್ಞಾನ ಸಮ್ಮೇಳನದಲ್ಲಿ ಭಾರತೀಯ ನಿಯೋಗದ ನಾಯಕರಾಗಿ ಕೆಂಗಲ್ಲರು ಭಾಗವಹಿಸಿದ್ದರು. ಹೀಗೆ ಸಾರ್ವಜನಿಕ ಕ್ಷೇತ್ರದ ಅವರ ಆಡಳಿತ ಅನುಭವಗಳು ಶಾಶ್ವತವಾಗಿ ಗ್ರಂಥರೂಪ ಪಡೆದವು.

## ಭಾರತ ಸರ್ಕಾರದ ಸಚಿವರಾಗಿ

1969ರಲ್ಲಿ ಕಾಂಗ್ರೆಸ್ ಪಕ್ಷ ವಿಭಜನೆ ಕಂಡಿತು. ಆಗ ಪ್ರಧಾನಿಯಾಗಿದ್ದ ಇಂದಿರಾ ಗಾಂಧಿಯವರ ನೇತೃತ್ವದ ಕಾಂಗ್ರೆಸ್‌ಗೆ ಆಡಳಿತ ಕಾಂಗ್ರೆಸ್ ಎಂದು ಹೆಸರಾಯಿತು. ಹನುಮಂತಯ್ಯನವರು ಆಡಳಿತ ಕಾಂಗ್ರೆಸ್‌ನಲ್ಲುಳಿದರು. ಅದರ ರಾಷ್ಟ್ರೀಯ ಕಾರ್ಯಕಾರಿ ಸಮಿತಿಯ ಸದಸ್ಯರಾದರು. 1970ರಲ್ಲಿ ಕೇಂದ್ರ ಸರ್ಕಾರದ ಕಾನೂನು ಮತ್ತು ಸಮಾಜ ಕಲ್ಯಾಣ ಖಾತೆಯ ಸಚಿವರಾದರು. ಭಾರತ ಸರ್ಕಾರ ಅವರನ್ನು ಹೇಗ್‌ನ ಅಂತರರಾಷ್ಟ್ರೀಯ

ನ್ಯಾಯಾಲಯದ ಸದಸ್ಯರನ್ನಾಗಿ ನೇಮಿಸಿತು. ಕಾನೂನು ಇಲಾಖೆಯಲ್ಲಿ ಅನೇಕ ಸುಧಾರಣೆಗಳನ್ನು ತರಲು ಕ್ರಮಕ್ಕೈಗೊಂಡರು. ಫಿಲಿಪೀನ್ಸ್‌ನ ಮನಿಲಾದಲ್ಲಿ 1970ರ ಸೆಪ್ಟೆಂಬರ್‌ನಲ್ಲಿ ನಡೆದ ಸಮಾಜ ಕಲ್ಯಾಣಕ್ಕೆ ಸಂಬಂಧಿಸಿದ ಅಂತರ ರಾಷ್ಟ್ರೀಯ ಸಮ್ಮೇಳನದಲ್ಲಿ ಭಾರತ ನಿಯೋಗದ ನಾಯಕರಾಗಿ ಭಾಗವಹಿಸಿದರು. ಅದರ ಒಂದು ಅಧಿವೇಶನದ ಅಧ್ಯಕ್ಷತೆಯನ್ನು ವಹಿಸಿದರು. ಅದೇ ಸಂದರ್ಭದಲ್ಲಿ ಮನಿಲಾದಲ್ಲಿ ಸೇರಿದ್ದ ಏಷ್ಯಾ ದೇಶಗಳ ಸಮಾಜ ಕಲ್ಯಾಣ ಸಚಿವರ ಸಮ್ಮೇಳನದಲ್ಲಿ ಭಾಗವಹಿಸಿ ಅದರ ಉಪಾಧ್ಯಕ್ಷರಾಗಿ ಚುನಾಯಿತರಾದರು.

1971ರ ಜನವರಿಯಲ್ಲಿ ನವದೆಹಲಿಯಲ್ಲಿ ನಡೆದ ಕಾನೂನು ಸಚಿವರ, ಅಟಾರ್ನಿ ಜನರಲ್‌ಗಳ ಮತ್ತು ಸಾಲಿಸಿಟರ್ ಜನರಲ್‌ಗಳ ಅಂತರಾಷ್ಟ್ರೀಯ ಸಮ್ಮೇಳನದಲ್ಲಿ ಭಾರತೀಯ ನಿಯೋಗದ ನಾಯಕರಾಗಿ ಭಾಗವಹಿಸಿದರು. ಆ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾದರು.

1971ರ ಲೋಕಸಭಾ ಚುನಾವಣೆಯಲ್ಲಿ ಬೆಂಗಳೂರು ನಗರ ಕ್ಷೇತ್ರದಿಂದ ಲೋಕ ಸಭೆಗೆ ಪುನರಾಯ್ಕೆಯಾದರು. ಅದೇ ವರ್ಷದ ಮಾರ್ಚ್‌ನಲ್ಲಿ ಕೇಂದ್ರ ರೈಲ್ವೆ ಸಚಿವರಾದರು. ಕೆಂಗಲ್ ಹನುಮಂತಯ್ಯನವರು ಅಧಿಕಾರವಿರುವುದು ಸೇವೆಗಾಗಿ ಎಂದು ನಂಬಿದ್ದರು. ಅದಕ್ಕಾಗಿ ಎದುರಾಗಬಹುದಾದ ಕಷ್ಟನಿಷ್ಠುರಗಳಿಗಾಗಲಿ, ಮಾಡಬೇಕಾದ ತ್ಯಾಗಕ್ಕಾಗಲಿ ಅವರು ಯೋಚಿಸಿದವರಲ್ಲ. ರೈಲ್ವೆ ಇಲಾಖೆಗಳ ಅನೇಕ ಕುಂದುಕೊರತೆಗಳನ್ನು ಸರಿಪಡಿಸಲು ಅವರು ದೃಢ ನಿರ್ಧಾರ ಮಾಡಿದರು. ಆ ನಿಟ್ಟಿನಲ್ಲಿ ಹಲವಾರು ಕ್ರಮಗಳನ್ನು ಕೈಗೊಂಡರು. ಆಗ ರೈಲು ಬಡ್ಜೆಟ್ ನಷ್ಟದಲ್ಲಿದ್ದಿತು. ಇದಕ್ಕೆ ಮುಖ್ಯ ಕಾರಣ ರೈಲ್ವೆ ಆಸ್ತಿಯ ದುರುಪಯೋಗ ಮತ್ತು ಟಿಕೆಟ್‌ರಹಿತ ಪ್ರಮಾಣಿಕರ ಹೆಚ್ಚಳ. ಇವೆರಡಕ್ಕೂ ಅಧಿಕಾರಿಗಳನ್ನು ಹೊಣೆಗಾರರನ್ನಾಗಿಸುವ ಮೂಲಕ ತಡೆಯೊಡ್ಡಿದರು. ಕೆಲವೊಮ್ಮೆ ತಾವೇ ಸಾಮಾನ್ಯ ದರ್ಜೆಯಲ್ಲಿ ಪ್ರಯಾಣ ಮಾಡಿ ಪರಿಶೀಲಿಸಿದರು. ಇದರ ಪರಿಣಾಮವಾಗಿ ರೈಲ್ವೆ ಆದಾಯದಲ್ಲಿ ಭಾರಿ ಹೆಚ್ಚಳ ಕಂಡುಬಂದಿತು. 78 ಕೋಟಿ ರೂಪಾಯಿಗಳ ನಷ್ಟ ಅನುಭವಿಸುತ್ತಿದ್ದ ಸಂಸ್ಥೆಗೆ 1972ರ ಬಜೆಟ್‌ನಲ್ಲಿ 30ಕೋಟಿ ರೂಪಾಯಿಗಳ ಲಾಭ ತೋರಿಸಿದರು. ರೈಲುಗಳು ಕಾಲಕ್ಕೆ ಸರಿಯಾಗಿ ಓಡಬೇಕೆಂಬುದು ಕೆಂಗಲ್ಲರ ಅಪೇಕ್ಷೆಯಾಗಿದ್ದಿತು. ಅದು ಸಾಧ್ಯವಾಗದಿದ್ದರೆ ರಾಜೀನಾಮೆ ಕೊಟ್ಟು ಹೋಗಲು ಅವರು ಸಿದ್ಧರಿದ್ದರು. ಕೊನೆಗೂ ರೈಲ್ವೆ ಸಚಿವರ ಆಣತಿಯಂತೆ ರೈಲುಗಳು ನಿಯಮಿತ ಕಾಲಕ್ಕೆ ಸರಿಯಾಗಿ ಓಡತೊಡಗಿದವು. ಇದು ಸರ್ಕಾರಕ್ಕೂ ಪ್ರಯಾಣಿಕರಿಗೂ ಪವಾಡವೆಂಬಂತೆ ತೋರಿ ಬಂತು.

ದೇಶದ ಎಲ್ಲ ರೈಲು ಮಾರ್ಗಗಳು ಒಂದೇ ಗೇಜಿನಲ್ಲಿರುವುದು ಅಪೇಕ್ಷಣೀಯವೆಂದು ಕೆಂಗಲ್ಲರು ಭಾವಿಸಿದ್ದರು. ಅದಕ್ಕಾಗಿ ಅವರು ಅನೇಕ ರೈಲು ಮಾರ್ಗಗಳನ್ನು ಬ್ರಾಡ್‌ಗೇಜಿಗೆ ಪರಿವರ್ತಿಸಲು ಕ್ರಮಕೈಗೊಂಡರು. ಹಾಗೆ ಗೇಜ್ ಪರಿವರ್ತನೆ ಕಾರ್ಯ ಪ್ರಾರಂಭವಾದುದರಲ್ಲಿ ಬೆಂಗಳೂರು-ಗುಂತಕಲ್ ಮಾರ್ಗವೂ ಸೇರಿದೆ. ಅವರು ಭಾರತದ ರಾಜಧಾನಿ ದೆಹಲಿಗೆ ಎಲ್ಲ ರಾಜ್ಯಗಳ ರಾಜಧಾನಿಗಳಿಂದ ನೇರ ರೈಲು ಸಂಪರ್ಕದ ವ್ಯವಸ್ಥೆಯಾಗಬೇಕೆಂದು ಬಯಸಿದ್ದರು. ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೂ ನೇರ ರೈಲು ಸಂಪರ್ಕ ಕಲ್ಪಿಸುವುದೂ ಅವರ ಯೋಜನೆಯಾಗಿದ್ದಿತು. ಇವೆಲ್ಲ ಮುಂದಿನ ದಶಕಗಳಲ್ಲಿ ಆದ್ಯತೆಯ ಯೋಜನೆಗಳಾದವು. ದಕ್ಷಿಣ ಭಾರತಕ್ಕೆ ರೈಲು ಮಾರ್ಗಗಳ ನಿರ್ಮಾಣದಲ್ಲಿ ಆಗಿದ್ದ ಅನ್ಯಾಯವನ್ನು ಕೆಲಮಟ್ಟಿಗೆ ಸರಿಪಡಿಸಿದರು. ಕೇವಲ ತಮ್ಮ ಒಂದೂವರೆ ವರ್ಷದ ಅಧಿಕಾರದಲ್ಲಿ ಅವರು ಗಣನೀಯ ಕಾರ್ಯ ಸಾಧನೆ ಮಾಡಿದರು. 1972ರ ಆಗಸ್ಟ್ ಹೊತ್ತಿಗೆ ಅವರಿಂದ ರೈಲು ಖಾತೆಯು ಕೈಬಿಟ್ಟು ಹೋಯಿತು.

ಕೆಂಗಲ್ ಹನುಮಂತಯ್ಯನವರು ತಮ್ಮ ಅರವತ್ತೈದನೆಯ ವಯಸ್ಸಿಗೆ ಸರ್ಕಾರದಲ್ಲಿ ಹೊಂದಿದ್ದ ದೊಡ್ಡ ಜವಾಬ್ದಾರಿ ಸ್ಥಾನಗಳಿಂದ ದೂರವಾದರು. ಅವರು 1977ರವರೆಗೂ ಲೋಕ ಸಭೆ ಸದಸ್ಯರಾಗಿದ್ದರು. ಈ ಅವಧಿಯಲ್ಲೂ ಅವರು ಉತ್ಸಾಹ ಕಳೆದುಕೊಳ್ಳದೆ ಲೋಕ ಸಭೆಯ ಕಲಾಪಗಳಲ್ಲಿ ಭಾಗವಹಿಸುತ್ತಿದ್ದರು. ಸರ್ಕಾರದ ಲೋಪದೋಷಗಳನ್ನು ವಿಮರ್ಶಿಸಿ ಸಮದರ್ಶಿಯ ಪಾತ್ರ ವಹಿಸುತ್ತಿದ್ದರು. ಅವರು ಲೋಕ ಸಭಾ ಸದಸ್ಯರಾಗಿರುವವರೆಗೂ ಅದರ ಅಮೂಲ್ಯ ಆಸ್ತಿಯಾಗಿದ್ದರು. 1977ರ ಲೋಕ ಸಭಾ ಚುನಾವಣೆಯಲ್ಲಿ ಅವರು ಸೋಲನ್ನನುಭವಿಸಿದರು. ಕೆಂಗಲ್ಲರು ತಮ್ಮ ಸಾರ್ವಜನಿಕ ಜೀವನದಲ್ಲಿ ಕಂಡ ಮೊದಲ ಮತ್ತು ಕೊನೆಯ ಸೋಲು ಅದು. ಆಗ ಇಡೀ ದೇಶದಲ್ಲಿ ರಾಜಕೀಯ ಪರಿವರ್ತನೆ ನಡೆದಿದ್ದಿತು. ಕಾಂಗ್ರೆಸ್ ಪಕ್ಷ ತುರ್ತು ಪರಿಸ್ಥಿತಿಯ ಆಡಳಿತದ ಪರಿಣಾಮವಾಗಿ ಕೇಂದ್ರದಲ್ಲಿ ಮೊದಲ ಬಾರಿಗೆ ಅಧಿಕಾರದಿಂದ ಕೆಳಗಿಳಿದಿತು. ಸ್ವತಃ ಪ್ರಧಾನಿ ಇಂದಿರಾ ಗಾಂಧಿಯವರು ಸೋಲು ಕಂಡಿದ್ದರು. ಇಲ್ಲಿಗೆ ಹನುಮಂತಯ್ಯನವರ ಸಂಸದೀಯ ಜೀವನ ಕೊನೆಗೊಂಡಂತಾಗಿತ್ತು.

## ಭಾರತೀಯ ಸಂಸ್ಕೃತಿಯ ಪ್ರವರ್ತಕ

ಕೆಂಗಲ್ ಹನುಮಂತಯ್ಯನವರದು ಬಹುಮುಖ ವ್ಯಕ್ತಿತ್ವ. ಅವರು ಹೊರಗಿನಿಂದ ವೃತ್ತಿ ರಾಜಕಾರಣಿಯಂತೆ ಕಂಡರೂ ಅಂತರ್ಯದಲ್ಲಿ ಆಧ್ಯಾತ್ಮಿಕ ಜೀವಿಯಾಗಿದ್ದರು ಮತ್ತು ಧರ್ಮಭೀರುವಾಗಿದ್ದರು ಹಾಗೂ ಕನಸುಗಾರನಾಗಿದ್ದರು. ಅದಕ್ಕೆ ಅವರ ಸಂಸ್ಕಾರ ಒಂದು ಕಡೆ ಕಾರಣವಾದರೆ ಅವರು ಬಾಲ್ಯದಲ್ಲಿ ಬೆಳೆದುಬಂದ ಪರಿಸರವೂ ಇನ್ನೊಂದೆಡೆ

ಕಾರಣವಾಗಿದ್ದಿತು. ಮಾತೃಭಕ್ತಿ ಮತ್ತು ದೈವಭಕ್ತಿಗಳು ಅವರ ಜೀವನದಲ್ಲಿ ಸದಾ ಸ್ಫೂರ್ತಿಯ ನೆಲೆಗಳಾಗಿದ್ದವು. ಈ ಹಿನ್ನೆಲೆಯಲ್ಲಿಯೇ ಅವರು ವಿಧಾನಸೌಧದ ನಾಲ್ಕು ನಿಟ್ಟಿನಲ್ಲಿ ಬರೆಸಿದ ಮಹಾ ವಾಕ್ಯಗಳನ್ನು ಗ್ರಹಿಸಬೇಕು. ಅವರು ತಮ್ಮ ಜೀವಿತದ ಕೊನೆಯ ದಶಕಗಳಲ್ಲಿ ಅಧಿಕಾರಕ್ಕಿಂತಲೂ ಧರ್ಮ ಕಾರ್ಯಕ್ಕೆ ಹೆಚ್ಚು ಮಹತ್ವ ನೀಡಿದರು.

ಧರ್ಮಾಭಿಮಾನ ಸಮಾಜದಲ್ಲಿ ಕ್ಷೀಣಿಸುತ್ತಿರುವ ಬಗ್ಗೆ ಹನುಮಂತಯ್ಯನವರಿಗೆ ಚಿಂತೆಯಿದ್ದಿತು. ಅವರು ಅಧಿಕಾರದಲ್ಲಿದ್ದಾಗ ತಮ್ಮ ಪ್ರವಾಸ ಕಾಲದಲ್ಲಿ ಅವಕಾಶ ಸಿಕ್ಕಾಗಲೆಲ್ಲ ದೇವಾಲಯಗಳಿಗೆ ಭೇಟಿ ನೀಡುವ ಪರಿಪಾಟ ಬೆಳೆಸಿಕೊಂಡಿದ್ದರು. ಅವರಿಗೆ ಕೆಂಗಲ್ ಹನುಮಂತರಾಯಸ್ವಾಮಿ ಆರಾಧ್ಯ ದೈವ. ಬಾಲ್ಯದಿಂದಲೂ ಆ ದೇವರ ಬಗ್ಗೆ ಭಕ್ತಿ ಮತ್ತು ನಿಷ್ಠೆಗಳು ಅವರಲ್ಲಿ ತುಂಬಿ ಬಂದಿದ್ದವು. ಅವರು ಮುಖ್ಯಮಂತ್ರಿಯಾಗಿದ್ದಾಗಿನಿಂದಲೂ ಬೆಂಗಳೂರು - ಮೈಸೂರು ಹೆದ್ದಾರಿಯಲ್ಲಿರುವ ಈ ಪುಣ್ಯಕ್ಷೇತ್ರದ ಅಭಿವೃದ್ಧಿಗೆ ಗಮನ ಹರಿಸಿದ್ದರು. 1970ರಲ್ಲಿ ಹನುಮಂತರಾಯನ ಹೊಸ ಗುಡಿಗೆ ಗುದ್ದಲಿಪೂಜೆ ನಡೆಯಿತು. ದಾನಿಗಳ ದಾನದಿಂದ ಬಂದ ಹಣ, ತಮ್ಮ ಕಾಣಿಕೆ ಹಾಗೂ ತಾವು ಸಮಾರಂಭದಲ್ಲಿ ಭಾಗವಹಿಸಿದಾಗ ತಮಗೆ ನೀಡಿದ ಹಾರಗಳ ಹರಾಜಿನಿಂದ ಬಂದ ಹಣವನ್ನು ಸಂಗ್ರಹಿಸಿ ಐದಾರು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಈ ದೇವಸ್ಥಾನವನ್ನು ನಿರ್ಮಿಸಿದರು. ಅದು 1973ರಲ್ಲಿ ಮುಗಿಯಿತು. ದೇವಸ್ಥಾನದ ಮುಂಭಾಗದ ಬೆಟ್ಟದ ಮೇಲೆ 29 ಅಡಿಗಳ ಎತ್ತರದ ರಾಮ-ಲಕ್ಷ್ಮಣ-ಸೀತಾ-ಆಂಜನೇಯರ ವಿಗ್ರಹಗಳನ್ನು ಕಡೆದು ನಿಲ್ಲಿಸಿದರು. ಇಂದು ಕೆಂಗಲ್ ಊರು ಭಕ್ತರನ್ನು ಮತ್ತು ಪ್ರವಾಸಿಗಳನ್ನು ಆಕರ್ಷಿಸುತ್ತಿದೆ. ವರ್ಷದಲ್ಲಿ ನೂರಾರು ಮದುವೆಗಳು ಇಲ್ಲಿ ನಡೆಯುತ್ತಿವೆ. ದನದ ಜಾತ್ರೆ ನಡೆಯುತ್ತದೆ. ಇಂದು 'ಹನುಮಂತಯ್ಯ' ಮತ್ತು 'ಕೆಂಗಲ್' ಈ ಎರಡು ಹೆಸರುಗಳು ಅವಿನಾಭಾವ ಸಂಬಂಧ ಹೊಂದಿವೆ.

ರಾಮನಗರದ ಸಮೀಪದ ರಾಮಗಿರಿಯಲ್ಲಿ ಶ್ರೀರಾಮನ ಪಾದಗಳಿರುವ ಸ್ಥಳದಲ್ಲಿ ಶ್ರೀ ರಾಮ ದೇವಸ್ಥಾನವನ್ನು ಕೆಂಗಲ್ಲರು ನಿರ್ಮಿಸಿದರು. ಬೆಂಗಳೂರಿನ ಹನುಮಂತ ನಗರದಲ್ಲಿ ಬೃಹತ್ ಪ್ರಮಾಣದ ರಾಮಾಂಜನೇಯ ಆಲಿಂಗನ ಮೂರ್ತಿಯು ಚಿತ್ತಾಕರ್ಷಕವಾಗಿದೆ. ಈ 'ಮಿಲನಾದ್ರಿ'ಯ ನಿರ್ಮಾಣದಲ್ಲಿ ಹನುಮಂತಯ್ಯನವರು ಮುಖ್ಯ ಪಾತ್ರ ವಹಿಸಿದರು. ಅವರು ಸ್ವಾಮಿ ವಿವೇಕಾನಂದ ಸ್ಮಾರಕ ಭವನದ ಟ್ರಸ್ಟ್‌ನ ಮೈಸೂರು ರಾಜ್ಯ ಶಾಖೆಯ ಅಧ್ಯಕ್ಷರಾಗಿದ್ದರು. ಶೃಂಗೇರಿ ಮಠದ ಜಗದ್ಗುರು ಕೆಂಗಲ್ಲರಿಗೆ 'ರಾಷ್ಟ್ರರತ್ನ' ಎಂಬ ಪ್ರಶಸ್ತಿ ನೀಡಿ ಗೌರವಿಸಿದರು.

ಕೆಂಗಲ್ಲರು ಸಮಗ್ರ ದರ್ಶನ ಹೊಂದಿದ್ದವರು. ಅವರು ಲೌಕಿಕ ಮತ್ತು ಆಧ್ಯಾತ್ಮಗಳೆರಡನ್ನು ಸಮನ್ವಯಗೊಳಿಸಿಕೊಂಡಿದ್ದರು. ಅವರು ರಾಷ್ಟ್ರದ ವಿಮೋಚನೆಗಾಗಿ ತಾವು ಮತ್ತು ಇತರರು ನಡೆಸಿದ ಹೋರಾಟದ ಕುರುಹಾಗಿ ಸ್ಮಾರಕಗಳನ್ನು ನಿರ್ಮಿಸಬೇಕೆಂಬ ಉದ್ದೇಶ ಹೊಂದಿದ್ದರು. ಇದು ಮುಂದಿನ ಪೀಳಿಗೆಗೆ ಸ್ಫೂರ್ತಿಯ ನೆನಪಾಗಿ ಉಳಿಯಬೇಕೆಂಬುದು ಅವರ ಆಶಯ. ಈ ಉದ್ದೇಶಕ್ಕಾಗಿ ಅವರು ಐತಿಹಾಸಿಕ ಧ್ವಜ ಸತ್ಯಾಗ್ರಹ ನಡೆದ ಮದ್ದೂರು ಬಳಿಯ ಶಿವಪುರದಲ್ಲಿ ಒಂದು 'ಸತ್ಯಾಗ್ರಹ ಸೌಧ' ನಿರ್ಮಿಸುವ ಯೋಜನೆಯನ್ನು ಹಮ್ಮಿಕೊಂಡರು. ಕೆಂಗಲ್ಲರು ಈ ಉದ್ದೇಶಕ್ಕಾಗಿ 1974ರ ಜುಲೈ 14ರಂದು ವಿಧಾನಸೌಧದ ಸಭಾಂಗಣದಲ್ಲಿ ಒಂದು ಸಭೆ ಕರೆದರು. ಮುಖ್ಯಮಂತ್ರಿ ಡಿ. ದೇವರಾಜ ಅರಸರಿಂದ ಹಿಡಿದು ಅನೇಕ ಗಣ್ಯರು ಈ ಸಭೆಯಲ್ಲಿ ಉಪಸ್ಥಿತರಿದ್ದರು. ಅಲ್ಲಿ ಕೆಂಗಲ್ಲರು ತಮ್ಮ ಯೋಜನೆಯನ್ನು ಮಂಡಿಸಿದರು. ಎಲ್ಲರ ಬೆಂಬಲ ದೊರೆಯಿತು. ಕೆಂಗಲ್ಲರ ಮೇಲ್ವಿಚಾರಣೆಯಲ್ಲಿ 'ಸತ್ಯಾಗ್ರಹ ಸೌಧ'ದ ನಿರ್ಮಾಣ ಪ್ರಾರಂಭವಾಯಿತು. ಸರ್ಕಾರ ಮತ್ತು ಸಾರ್ವಜನಿಕರು ಧನ ಸಹಾಯ ಮಾಡಿದರು. ಹನುಮಂತಯ್ಯನವರು ವೃತ್ತಾಕಾರದ ಈ ಕಟ್ಟಡವನ್ನು ಸುಂದರವಾಗಿ ಕಟ್ಟಲು ತಮ್ಮ ಅನುಭವವನ್ನು ಧಾರೆಯೆರೆದರು. ಸ್ವಾತಂತ್ರ್ಯ ಯೋಧರ ನೆನಪಿಗಾಗಿ ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ರಾರಾಜಿಸುತ್ತಿರುವ ಈ ನಿರ್ಮಾಣಕ್ಕೆ ಕೆಂಗಲ್ಲರೆ ಪ್ರಮುಖ ಕಾರಣರು. 1978ರಲ್ಲಿ ಈ ಕಾರ್ಯ ಸಂಪೂರ್ಣವಾಯಿತು.

ಕೆಂಗಲ್ಲರು ಆದರ್ಶ ರಾಜಕೀಯ ಮಾಡಲು ಹೋರಾಡಿದ ವ್ಯಕ್ತಿ. ಆದರೆ ಅವರ ಈ ಗುರಿ ಸಾಧನೆಗೆ ಹಾಲಿ ಇದ್ದ ರಾಜಕೀಯ ಪಕ್ಷಗಳಲ್ಲಿ ಸಾಕಷ್ಟು ಸ್ವಾತಂತ್ರ್ಯವಿರಲಿಲ್ಲ. ಅವರು ತಾನೇ ಒಂದು ಪಕ್ಷ ಕಟ್ಟಿ ಸಜ್ಜನರ ಬೆಂಬಲದಿಂದ ಅದನ್ನು ಬೆಳಸಬೇಕೆಂಬ ಉದ್ದೇಶದಿಂದ 'ಸ್ವರಾಜ್ಯ' ಎಂಬ ಪಕ್ಷವನ್ನು 1977ರಲ್ಲಿ ಸ್ಥಾಪಿಸಿದರು. ಆದರೆ ಪ್ರಸ್ತುತ ರಾಜಕೀಯ ಸನ್ನಿವೇಶ ಅಂತಹ ಪ್ರಯತ್ನಕ್ಕೆ ಪಕ್ವವಾಗಿರಲಿಲ್ಲ. ಅದು ಯಶಸ್ವಿಯಾಗದಿದ್ದನ್ನು ಕಂಡು ಅವರು ಪುನಃ ಕಾಂಗ್ರೆಸ್-ಐ ಪಕ್ಷವನ್ನು ಸೇರಿದರು. 1978ರಲ್ಲಿ ನಡೆದ ಚಿಕ್ಕಮಗಳೂರಿನ ಲೋಕ ಸಭಾ ಉಪ ಚುನಾವಣೆಯಲ್ಲಿ ಮಾಜಿ ಪ್ರಧಾನಿ ಇಂದಿರಾ ಗಾಂಧಿಯವರನ್ನು ಬೆಂಬಲಿಸಿದರು. ಕಾಂಗ್ರೆಸ್(ಐ) ಪಕ್ಷದ ಕಾರ್ಯಕಾರಿ ಸಮಿತಿಯ ಸದಸ್ಯರಾದರು. ಕೆಂಗಲ್ಲರಿಗೆ ಲಾಲ್‌ಬಹದ್ದೂರ್ ಶಾಸ್ತ್ರಿಗಳು ಪ್ರಧಾನಿಯಾಗಿದ್ದ ಕಾಲದಿಂದಲೂ ಒಂದಕ್ಕೂ ಹೆಚ್ಚು ಬಾರಿ ರಾಜ್ಯಪಾಲರಾಗಲು, ರಾಯಭಾರಿಯಾಗಲು ಆಹ್ವಾನಗಳು ಬಂದವು. ಆದರೆ ಅವನ್ನು ಒಪ್ಪಿಕೊಳ್ಳದೆ ಅವರು ಜನರೊಡನೆ ಬಾಳಿ ತಮ್ಮ ಜೀವಿತವನ್ನು ಕಳೆದರು.

1980ರ ಡಿಸೆಂಬರ್ ಒಂದರಂದು ಈ 'ರಾಷ್ಟ್ರ ರತ್ನ' ಇಹಲೋಕ ತ್ಯಜಿಸಿದರು. ಅವರ ನಿಧನದ ವಾರ್ತೆ ಹರಡುತ್ತಿದ್ದಂತೆ ಬೆಂಗಳೂರಿನ 'ಕೆಂಗಲ್ ಕೃಪ'ಕ್ಕೆ ಅಪಾರ ಜನಸ್ತೋಮ ಹರಿದು ಬಂದಿತು. ಅವರ ಪಾರ್ಥಿವ ಶರೀರವನ್ನು ರಾಜಧಾನಿಯ ಮುಖ್ಯ ಬೀದಿಗಳಲ್ಲಿ ಮೆರವಣಿಗೆಯಲ್ಲಿ ಕೊಂಡ್ಯೊಯಲಾಯಿತು. ಈ ಯಾತ್ರೆ ಅವರ ಕಲ್ಪನೆಯ ಸಾಕಾರಮೂರ್ತಿ ವಿಧಾನಸೌಧದ ಸುತ್ತ ಪ್ರದಕ್ಷಿಣೆ ಹಾಕಿ ಅವರ ಅಂತಿಮ ಇಚ್ಛೆಯಂತೆ ಕೆಂಗಲ್ ಹನುಮಂತರಾಯಸ್ವಾಮಿ ದೇವಾಲಯದ ಆವರಣದಲ್ಲಿರುವ 'ಕೆಂಗಲ್ ಧಾಮ'ಕ್ಕೆ ಸಾಗಿತು. ಅಲ್ಲಿ ಅವರ ಅಂತ್ಯಕ್ರಿಯೆ ನಡೆಯಿತು. ಈ ಅಪರೂಪದ ಚೇತನ ರಾಜ್ಯ ಮತ್ತು ರಾಷ್ಟ್ರದ ಇತಿಹಾಸದಲ್ಲಿ ಅಚ್ಚಳಿಯದ ಸಾಧನೆಗಳನ್ನುಳಿಸಿ ಇತಿಹಾಸ ಪುಟಗಳನ್ನು ಸೇರಿತು.

ಹಿರಿಕಿರಿಯರು ಕೆಂಗಲ್ಲರ ನಿಧನಕ್ಕಾಗಿ ಶೋಕ ವ್ಯಕ್ತಪಡಿಸಿ ನುಡಿ ಶ್ರದ್ಧಾಂಜಲಿಯನ್ನು ಅರ್ಪಿಸಿದರು. ''ದೇಶಕ್ಕೆ ಬಹುಮುಖ ಸೇವೆ ಸಲ್ಲಿಸಿದ್ದ ಹನುಮಂತಯ್ಯನವರು ಆಧುನಿಕ ಕರ್ನಾಟಕದ ಶಿಲ್ಪಿಗಳಲ್ಲೊಬ್ಬರೆಂದು'' ಅಂದಿನ ಕೇಂದ್ರ ಸಚಿವರೂ ಮಾಜಿ ಮುಖ್ಯಮಂತ್ರಿಯೂ ಆಗಿದ್ದ ವಿರೇಂದ್ರ ಪಾಟೀಲರು ಕೆಂಗಲ್ಲರನ್ನು ನೆನೆದುಕೊಂಡರು. ''ಧೀರೋದಾತ್ತ ನಾಯಕರಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ ಮತ್ತು ರಾಜ್ಯ ಪ್ರಗತಿ ದಿಸೆಯಲ್ಲಿ ಹೆಜ್ಜೆ ಹಾಕಲು ದುಡಿದ ಕೆಂಗಲ್ ಅವರು ಶುದ್ಧ ಹಾಗೂ ಸಮರ್ಥ ಆಡಳಿತಗಾರರಾಗಿದ್ದರೆಂದು'' ಅಂದಿನ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಆರ್. ಗುಂಡೂರಾವ್ ಅವರು ತಮ್ಮ ದುಃಖ ವ್ಯಕ್ತಪಡಿಸಿದರು. ''ಕರ್ನಾಟಕದ ರಚನೆಗೆ ಕಾರಣಕರ್ತರಲ್ಲೊಬ್ಬರಾಗಿದ್ದ ಹನುಮಂತಯ್ಯ ಅವರ ನಿಧನದಿಂದ ದೇಶ ಮತ್ತು ಕರ್ನಾಟಕ ರಾಜ್ಯಕ್ಕೆ ಅಪಾರ ನಷ್ಟವಾಗಿದೆಯೆಂದು'' ಮಾಜಿ ಉಪ ರಾಷ್ಟ್ರಪತಿ ಬಿ.ಡಿ. ಜತ್ತಿ ಅವರು ಶೋಕಿಸಿದರು. ಭಾರತದ ಅಮೋಘ ವಜ್ರವೊಂದು ಕಣ್ಮರೆಯಾಯಿತೆಂದು ರಾಜ್ಯ ವಿಧಾನ ಸಭೆಯ ಮಾಜಿ ವಿರೋಧ ಪಕ್ಷದ ನಾಯಕ ಬಿ.ಕೆ. ಪುಟ್ಟರಾಮಯ್ಯ ದಿವಂಗತರ ಗುಣಗಾನ ಮಾಡಿದರು. ತಮ್ಮ ಐವತ್ತು ವರ್ಷಗಳ ದೀರ್ಘ ಸಾರ್ವಜನಿಕ ಜೀವನದಿಂದ ದೇಶದ ಪುತ್ರರತ್ನರಲ್ಲೊಬ್ಬರೆನಿಸಿದ ಹನುಮಂತಯ್ಯನವರು ಭಾರತ ಕಂಡ ಅತ್ಯುತ್ತಮ ಸಂಸದೀಯ ಪಟುಗಳಲ್ಲಿ ಒಬ್ಬರಾಗಿದ್ದಾರೆ. ಅವರ ಪ್ರತಿಭಾಪೂರ್ಣ, ಪ್ರಾಮಾಣಿಕ ಮತ್ತು ದಕ್ಷತೆಯಿಂದ ಕೂಡಿದ್ದ ಆಡಳಿತವು 'ಮಾದರಿ ಮುಖ್ಯಮಂತ್ರಿ' ಎಂಬ ಹೆಗ್ಗಳಿಕೆಗೆ ಅವರು ಬಾಧ್ಯರಾಗುವಂತೆ ಮಾಡಿತು.

## ಆಧಾರಗಳು

1. ನವ ಮೈಸೂರು ಶಿಲ್ಪಿ ಕೆಂಗಲ್ ಹನುಮಂತಯ್ಯ - ಕೋಣಂದೂರು ವೆಂಕಪ್ಪಗೌಡ
2. ಕರ್ನಾಟಕ ದಿಗ್ಗಜ ಕೆಂಗಲ್ - ಸಿ. ಸಿದ್ದರಾಮಯ್ಯ
3. 'ರಾಷ್ಟ್ರರತ್ನ' - ಸಂ - ಹೆಚ್. ಜಿ. ಲಕ್ಕಪ್ಪಗೌಡ
4. 'ಪ್ರಜಾವಾಣಿ' ದೈನಿಕ 2-12-1980
5. ಕನ್ನಡ ವಿಷಯ ವಿಶ್ವಕೋಶ
6. Kengal Hanumanthaiya - A Document.
7. ವಿಧಾನಸಭೆ ಮತ್ತು ಲೋಕಸಭೆ ಕಲಾಪಗಳು

# 2. ಸಂದರ್ಶನ

('ರಾಷ್ಟ್ರ ರತ್ನ' (ಸಂಪಾದಕ : ಎಚ್.ಜಿ. ಲಕ್ಕಪ್ಪಗೌಡ) ಈ ಕೃತಿಯಿಂದ ಆಯ್ದುಕೊಳ್ಳಲಾಗಿದೆ)

* * *

ಪ್ರಶ್ನೆ : ಇಂತಹ ಪ್ರಶ್ನೆಗಳನ್ನು ಈಗಾಗಲೇ ಬಹಳ ಜನ ಕೇಳಿರಬಹುದು. ತಾವು ಉತ್ತರಿಸಿಯೂ ಇದ್ದೀರಿ. ಆದರೆ ತಮ್ಮ ಈಗಿನ ಮಾಗಿದ ಅನುಭವದ ಹಿನ್ನೆಲೆಯಲ್ಲಿ ನಾನು ಕೆಲವು ಪ್ರಶ್ನೆಗಳನ್ನು ತಮ್ಮಲ್ಲಿ ಪ್ರಸ್ತಾಪ ಮಾಡಬೇಕೆಂದಿದ್ದೇನೆ.

ಕೇಳಿ, ಕೇಳಿ, ಅವಶ್ಯವಾಗಿ.

ಪ್ರಶ್ನೆ : ಬಿಡುವಿಲ್ಲದ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದವರು ತಾವು. ಈಗ ಅಷ್ಟೊಂದು ಚುಟುವಟಿಕೆಗಳಿದ್ದಂತೆ ಕಾಣುವುದಿಲ್ಲ. ರಾಜಕೀಯ ನಿವೃತ್ತಿ ಎಂದು ತಿಳಿಯುವುದೇ?

ಬುದ್ದಿ ಬೆಳೆದ ಹಾಗೆಲ್ಲ ಮನೋವೃತ್ತಿಯಲ್ಲೂ ಬದಲಾವಣೆ ಉಂಟಾಗುತ್ತದೆ. ಆಗ ಯಾವುದೇ ಸಮಸ್ಯೆ ಗಳನ್ನು ವ್ಯಕ್ತಿಗಳನ್ನು ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಶೀಲಿಸುವ, ನೋಡುವ ದೃಷ್ಟಿ ಬೆಳೆಯುತ್ತದೆ. ಪಕ್ಷಪಾತ ದೃಷ್ಟಿಯಿತ್ತೆಂದರೆ ಉದ್ವೇಗಕ್ಕೆ ಒಳಗಾಗುತ್ತೇವೆ. ನಿಷ್ಪಕ್ಷಪಾತ ದೃಷ್ಟಿ ಆ ಉದ್ವೇಗವನ್ನು ನಿಯಂತ್ರಿಸಿ ಸಹನೆಯನ್ನು ಬೆಳೆಸುತ್ತದೆ. ಬಹುಶಃ ನನ್ನಲ್ಲಿ ಈಗ ಅಂತಹ ಸಹನೆ ಬೆಳೆದು ಬಂದಿರುವುದಕ್ಕೆ ನೀವು ನಿರ್ಲಿಪ್ತತೆ ಎನ್ನಬಹುದು. ನನ್ನ ಕಳೆದ ಐದಾರು ದಶಕಗಳ ಸಾರ್ವಜನಿಕ ಬದುಕೇ ನನಗೆ ಮಾರ್ಗದರ್ಶಕವಾಗಿದೆ. ನಿರುದ್ವೇಗ ಮತ್ತು ನಿಷ್ಪಕ್ಷಪಾತ ದೃಷ್ಟಿ ಜೀವನ ಸೂತ್ರಗಳಾಗಬೇಕು. ಅದರಿಂದ ವ್ಯಷ್ಟಿಸಮಷ್ಟಿ ಎರಡಕ್ಕೂ ನೆಮ್ಮದಿ.

ಪ್ರಶ್ನೆ : ಸಾಮಾನ್ಯವಾಗಿ ವಯಸ್ಸಾಗುತ್ತಾ ಬಂದಂತೆ ಇಂತಹ ಭಾವನೆಗಳು ಉಂಟಾಗುತ್ತವೆಂದು ಕಾಣುತ್ತದೆ.

ವಯಸ್ಸಿಗೂ ಬುದ್ಧಿಗೂ ಸಂಬಂಧವಿಲ್ಲ. ಇದು ಅನುಭವದಿಂದ, ಸಾಧನೆಯಿಂದ ಬರುವಂತಹದು. ಈಗ ನೀವು ಎಷ್ಟೋ ರಾಜಕಾರಣಿಗಳನ್ನು ನೋಡುತ್ತಿದ್ದೀರಿ. ಸಾರ್ವಜನಿಕ ಹೇಳಿಕೆಗಳನ್ನು ಕೊಡುವಾಗ ಅತ್ಯಂತ ಉದ್ವೇಗಗೊಳ್ಳುತ್ತಾರೆ. ವೃಥಾ ವೈಯಕ್ತಿಕ ಟೀಕೆ

ಮಾಡುತ್ತಾರೆ. ಅವರಲ್ಲಿ ವಯೋವೃದ್ಧರೂ ಇದ್ದಾರೆ. ಅಂತಹ ಉದ್ವೇಗದಿಂದ ಅವರು ತಮ್ಮ ಮನಸ್ಸಿನ ನೆಮ್ಮದಿಯನ್ನು ಹಾಳು ಮಾಡಿಕೊಳ್ಳುತ್ತಾರೆ., ಸಾರ್ವಜನಿಕ ಬದುಕಿನಲ್ಲೂ ಗೊಂದಲವುಂಟು ಮಾಡುತ್ತಾರೆ. ಈ ದೃಷ್ಟಿಯಿಂದಲೇ ನಾನು ಯಾರನ್ನು ನಿಂದಿಸುವುದನ್ನು ಅಥವಾ ಟೀಕಿಸುವುದನ್ನು ಬಿಟ್ಟುಬಿಟ್ಟಿದ್ದೇನೆ.

ನೀವು ಇನ್ನೊಂದು ಮಾತು ಹೇಳಿದಿರಿ-ರಾಜಕೀಯದಿಂದ ನಿವೃತ್ತಿ ಎಂಬ ಅರ್ಥದಲ್ಲಿ. ಖಂಡಿತ ನಾನು ರಾಜಕೀಯದಿಂದ ದೂರವಾಗಿಲ್ಲ. ನಾನು ಕಾಂಗ್ರೆಸ್ (ಐ) ನ ಕಾರ್ಯಕಾರಿ ಸಮಿತಿಯಲ್ಲಿದ್ದೇನೆ. ಅಂದಮೇಲೆ ನಿರ್ಲಿಪ್ತತೆಯೆಲ್ಲಿ ಬಂತು? ಆದರೆ, ನಾನು ಮೊದಲೇ ಹೇಳಿದಂತೆ ನಾನೀಗ ಯಾವುದಕ್ಕೂ ಭಾವೋದ್ರೇಕಕ್ಕೆ ಒಳಗಾಗುವುದಿಲ್ಲ. ಏರು-ಪೇರುಗಳನ್ನು ಸಮದೃಷ್ಟಿಯಿಂದ ಕಂಡುಕೊಳ್ಳುವ ಸಹನೆ ಬೆಳೆಸಿಕೊಂಡಿದ್ದೇನೆ. ಅದರಿಂದ ನನಗೆ ಸಮಾಧಾನವಿದೆ. ನನ್ನ ಎಲ್ಲ ಮಿತ್ರರಿಗೂ ಇಂತಹ ಸದ್ಭಾವನೆ ಬೆಳೆಯಲೆಂಬುದೇ ನನ್ನ ಆಶಯ.

ಪ್ರಶ್ನೆ : ಸ್ವಾತಂತ್ರ್ಯಪೂರ್ವ ಮತ್ತು ಪ್ರಸ್ತುತ ರಾಜಕಾರಣಿಗಳಲ್ಲಿ ಕಂಡು ಬರುವ ವ್ಯತ್ಯಾಸವೇನು? ಈ ಎರಡು ಅವಧಿಗಳ ಅನುಭವವೂ ತಮಗಿರುವುದರಿಂದ ನಾನು ಈ ಪ್ರಶ್ನೆ ಕೇಳುತ್ತಿದ್ದೇನೆ.

ಸ್ವಾತಂತ್ರ್ಯಪೂರ್ವದಲ್ಲಿ ರಾಜಕೀಯವು ಮುಖ್ಯವಾಗಿ ತ್ಯಾಗಮಯವಾಗಿತ್ತು. ರಾಷ್ಟ್ರಕ್ಕಾಗಿ ಯಾವುದೇ ಕಷ್ಟ-ನಷ್ಟಗಳನ್ನು ಅನುಭವಿಸುವ ಅಭ್ಯಾಸ ಅಂದಿನ ರಾಜಕಾರಣಿಗಳಲ್ಲಿ ಮೈಗೂಡಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ಸಂತೋಷದಿಂದಲೇ ಜೈಲುವಾಸ ಅನುಭವಿಸಿದ್ದರು; ಭಾರಿ ಏಟು ತಿಂದರು. ಮನೆಮಠಗಳನ್ನು ಕಳೆದುಕೊಂಡರು. ಆದರೂ ಅದೆಲ್ಲವೂ ಅವರಿಗೆ ಅಭಿಮಾನವುಂಟು ಮಾಡಿದ್ದವು. ಅಧಿಕಾರದ ಹುಚ್ಚು ಲಾಲಸೆ ಆಗ ಇರಲಿಲ್ಲ. ನಿಮಗೆ ಆಶ್ಚರ್ಯವಾಗಬಹುದು. ಅನೇಕ ವೇಳೆ ಶಾಸನ ಸಭೆ ಮೊದಲಾದುವುಗಳಿಗೆ ಉಮೇದುವಾರರನ್ನು ಹುಡುಕುವುದೇ ಕಷ್ಟವಾಗುತ್ತಿತ್ತು. ಅಂದಿನ ರಾಜಕಾರಣಕ್ಕೆ ಒಂದು ಆದರ್ಶವಿತ್ತು. ರಾಷ್ಟ್ರೀಯ ದೃಷ್ಟಿಯಿತ್ತು.

ಸ್ವಾತಂತ್ರ್ಯಾ ನಂತರವೂ ಆರಂಭದ ಹತ್ತು - ಹದಿನೈದು ವರ್ಷಗಳ ಕಾಲ ರಾಜಕೀಯ ಜೀವನ ಇದ್ದಷ್ಟು ಮಟ್ಟಿಗೆ ತನ್ನ ಉನ್ನತಿಯನ್ನು ಕಾಪಾಡಿಕೊಂಡಿತ್ತು. ಮಹಾತ್ಮಗಾಂಧಿಯವರು ಹಾಕಿಕೊಟ್ಟ ಮೇಲ್ಪಂಕ್ತಿ ಇನ್ನೂ ಅಳಿಸಿರಲಿಲ್ಲ. ಒಂದು ವೇಳೆ, ಯಾವುದಾದರೂ ಕ್ಷೇತ್ರದಲ್ಲಿ ಪೈಪೋಟಿ ನಡೆದರೂ ಅದು ಕ್ರಮದಲ್ಲಿ ನಡೆಯುತ್ತಿತ್ತು.

ಅಕ್ರಮವೆಸಗಲು ಮುಂದಾಳುಗಳು ಹಿಂಜರಿಯುತ್ತಿದ್ದರು. ಸಂದರ್ಭ ಬಂದರೆ ಸ್ಥಾನವನ್ನಾದರೂ ಬಿಟ್ಟುಕೊಡುತ್ತಿದ್ದರೇ ವಿನಃ ತತ್ವಗಳನ್ನು ಬಲಿಗೊಡುತ್ತಿರಲಿಲ್ಲ. ಆದರೆ, ಅನಂತರ ಪರಿಸ್ಥಿತಿ ಬದಲಾಯಿಸಿತು. ವಾಸ್ತವವಾಗಿ ಹೇಳುವುದಾದರೆ 1957ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯ ನಂತರ ನಮ್ಮ ಸಾರ್ವಜನಿಕ ಜೀವನದಲ್ಲಿ ಅಕ್ರಮ, ಅನೀತಿಗಳು ಅನಿಯಂತ್ರಿತವಾಗಿ ಬೆಳೆಯತೊಡಗಿದವು. ಅಲ್ಲಿಂದೀಚೆಗೆ ಪ್ರತಿಯೊಂದು ಚುನಾವಣೆಯೂ ನಮ್ಮ ರಾಜಕೀಯ ಹಾಗೂ ಸಾಮಾಜಿಕ ಜೀವನದ ನೈತಿಕ ಮಟ್ಟವನ್ನು ಕುಗ್ಗಿಸುತ್ತಾ ಬಂದಿವೆ.

ಪ್ರಶ್ನೆ : ಈ ಪರಿಸ್ಥಿತಿಯನ್ನು ಹೀಗೆಯೇ ಬೆಳೆಯ ಬಿಡುವುದೇ?

ಬಿಡಬಾರದು ನಿಜ. ಆದರೆ ಇಂದು ಅಧಿಕಾರಕ್ಕಾಗಿ ನಡೆದಿರುವ ಹೋರಾಟ ತತ್ವನಿಷ್ಠರನ್ನು ತಲೆತಗ್ಗಿಸುವಂತೆ ಮಾಡಿದೆ. ಇಂದು ಅಧಿಕಾರ ಗದ್ದುಗೆಗಳು ಸೇವೆಯ ಸ್ಥಾನಗಳಾಗದೆ ಲಾಭಗಳಿಕೆಯ ಸಿಂಹಾಸನಗಳಾಗಿವೆ. ಎಂತಲೇ ಈ ನೂಕು ನುಗ್ಗಲು, ಉದ್ವೇಗದ ಪೈಪೋಟಿ. ಅಧಿಕಾರಗಳಿಸುವ ಮತ್ತು ಉಳಿಸಿಕೊಳ್ಳುವ ಉನ್ಮಾದದಲ್ಲಿ ಇಂದಿನ ಕೆಲವು ರಾಜಕಾರಣಿಗಳು ಯಾರ ಮಾತನ್ನು ಕೇಳುವ ಸ್ಥಿತಿಯಲ್ಲಿಲ್ಲ. ಈ ಪರಿಸ್ಥಿತಿಯನ್ನು ಸರಿಪಡಿಸಲು ಸಾಧ್ಯವೆ ಇಲ್ಲವೆಂದು ಕೆಲವರು ಹೇಳುತ್ತಾರೆ. ಇದಕ್ಕೆ ನಿದರ್ಶನವೆಂದರೆ ಜಯಪ್ರಕಾಶ ನಾರಾಯಣರ ಸಮಗ್ರ ಆಂದೋಳನ. ಈ ರಾಷ್ಟ್ರಕ್ಕೆ ಸಭ್ಯತೆ, ಸಂಯಮ ಮತ್ತು ಶಿಸ್ತಿನ ಆಧಾರವನ್ನು ಒದಗಿಸಲು ಅವರು ಪಟ್ಟ ಶ್ರಮವೆಷ್ಟು? ಆದರೆ ಅವರ ಅನುಯಾಯಿಗಳಾದವರು ಮಾಡಿದ್ದೇನು. ಪದವಿ ಪೈಪೋಟಿಯಲ್ಲಿ ಇತಿಮಿತಿಗಳನ್ನು ಮರೆತು ಸಲ್ಲದ ಸ್ವಪ್ರತಿಷ್ಟೆಯಿಂದ ತಾವು ಕೆಟ್ಟರು : ದೇಶವನ್ನೂ ಕೆಡಿಸಿದರು. ರಾಷ್ಟ್ರನಾಯಕ ಜಯಪ್ರಕಾಶನಾರಾಯಣರಿಗಾದ ನಿರಾಸೆ ಅಷ್ಟಿಷ್ಟಲ್ಲ. ಭಾರತ ರಾಷ್ಟ್ರೀಯ ಜೀವನಕ್ಕೆ ಒದಗಿದ ದುಸ್ಥಿತಿ ಅವರ ಮನಸ್ಸಿನ ಮೇಲೆ ಅಗಾಧ ಪರಿಣಾಮ ಬೀರಿತು. ಕೊನೆಗೊಮ್ಮೆ ಆ ನೋವಿನಲ್ಲೇ ಕೊನೆಯುಸಿರೆಳೆದರು.

ಈ ದಿಸೆಯಲ್ಲಿ ನಮ್ಮ ಸಾರ್ವಜನಿಕ ಜೀವನಕ್ಕೆ ಒಂದು ಪ್ರಾಮಾಣಿಕತೆಯ ಸಂಹಿತೆಯನ್ನು ಒದಗಿಸಲು ನಾನೂ ಅಲ್ಪ ಪ್ರಯತ್ನ ನಡೆಸಿದೆ. ಆಡಳಿತ ಹಾಗೂ ಸಾರ್ವಜನಿಕ ಜೀವನ ಶುದ್ಧೀಕರಣವಾಗಬೇಕೆಂದು ಅನೇಕ ಭಾಷಣಗಳಲ್ಲಿ ಸಾರಿ ಸಾರಿ ಹೇಳಿದೆ. ಉನ್ನತ ರಾಜಕೀಯ ಆದರ್ಶ ಹಾಗೂ ಶ್ರೇಷ್ಠಮಟ್ಟದ ಆಡಳಿತಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸ್ವರಾಜ್ಯ ಪಕ್ಷದ ಕಲ್ಪನೆಯನ್ನು ಜನತೆಯ ಮುಂದಿಟ್ಟೆ. ಆದರೆ ಇಂದಿನ ರಾಜಕೀಯ ಗೊಂದಲದಲ್ಲಿ ಅದು ಫಲಿಸಲಿಲ್ಲ. ಆದರೂ ನಾನು ಹತಾಶನಾಗಿಲ್ಲ.

ಎಲ್ಲಕ್ಕೂ ಕಾಲವೇ ಉತ್ತರ. ಇಂದಲ್ಲ ನಾಳೆ ಕಾಲಚಕ್ರ ಪರಿಸ್ಥಿತಿಯನ್ನು ಸುಧಾರಿಸೀತೆಂಬ ದೃಢ ವಿಶ್ವಾಸ ನನ್ನದು.

**ಪ್ರಶ್ನೆ** : ನಾವು ಪ್ರಜಾಸತ್ತಾತ್ಮಕ ವ್ಯವಸ್ಥೆಯನ್ನು ಒಪ್ಪಿಕೊಂಡಿದ್ದೇವೆ. ಆದರೆ ವಾಸ್ತವವಾಗಿ ಆಡಳಿತದಲ್ಲಿ ಪ್ರಜೆಗಳ ಮಾತಿಗೆ ಬೆಲೆ ಎಂದು ಭಾವಿಸಿದ್ದೀರಾ ?

ಪ್ರಜೆಗಳ ಮಾತಿಗೆ ಬೆಲೆ ಇದ್ದೇ ಇದೆ. ಪ್ರಜೆಗಳು ಎಂದರೆ ಅವರ ಪ್ರತಿನಿಧಿಗಳು. ಪ್ರತಿಯೊಬ್ಬ ಪ್ರಜೆಯ ಮಾತಿನಂತೆ ಯಾವ ಸರ್ಕಾರವನ್ನೂ ನಡೆಸಲು ಸಾಧ್ಯವಿಲ್ಲ. ವಾಸ್ತವವಾಗಿ ಹೇಳುವುದಾದರೆ ಪ್ರಜೆಗಳ ಮಾತಿಗೆ ಬೆಲೆ ಇದ್ದರೆ ಅದು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಮಾತ್ರ. ಉಳಿದ ಯಾವ ರಾಜಕೀಯ ವ್ಯವಸ್ಥೆಯಲ್ಲೂ ಇಂತಹ ಅವಕಾಶವಿಲ್ಲ. ಆದರೆ ಮುಖ್ಯವಾದುದು ಧರ್ಮ. ಅದು ಎಲ್ಲರಿಗೂ ಬೇಕಾದದ್ದು; ಎಲ್ಲರಿಗೂ ಒಳ್ಳೆಯದನ್ನೇ ಮಾಡುವಂತಹುದು. ಜನತೆಯಿಂದ ಆರಿಸಿ ಬರುವ ಪ್ರತಿನಿಧಿಗಳು ಧರ್ಮಕ್ಕೆ ಅನುಸಾರವಾಗಿ ನಡೆದರೆ ಜನಕ್ಕೆ ಕ್ಷೇಮ ಆಡಳಿತಕ್ಕೂ ಯಶಸ್ಸು ; ನಡೆಸುವವರಿಗೂ ಕೀರ್ತಿ; ಆದ್ದರಿಂದ ಜನರ ಪ್ರತಿನಿಧಿಗಳು ಧರ್ಮನಿಷ್ಠರಾಗಿರಬೇಕು.

**ಪ್ರಶ್ನೆ** : ಧರ್ಮ ಎಂದರೆ ತಮ್ಮ ದೃಷ್ಟಿಯಲ್ಲಿ.

ನನ್ನ ದೃಷ್ಟಿಯಲ್ಲಿ ಧರ್ಮಕ್ಕೆ ಅಂತಹ ಕ್ಲಿಷ್ಟವಾದ ವ್ಯಾಖ್ಯೆಯೇನೂ ಇಲ್ಲ. ವೇದಾಂತ, ದರ್ಶನ, ಸಿದ್ಧಾಂತಗಳಲ್ಲಿ ಧರ್ಮದ ಬಗ್ಗೆ ಅನೇಕ ಭಾಷೆಯ ವಿವರಣೆಗಳಿವೆ: ವ್ಯಾಖ್ಯಾನಗಳಿವೆ. ಆದರೆ ನನ್ನ ದೃಷ್ಟಿಯಲ್ಲಿ ಅವನೆಲ್ಲ ಸಾರಗೊಳಿಸಿ ಹೇಳುವುದಾದರೆ ಧರ್ಮ ಎನ್ನುವುದು ಕೇವಲ ಜೀವನ ಸೂತ್ರ. ಜಗತ್ತಿನ ವ್ಯವಹಾರ ಕಾರಣವಾದ ಅಗೋಚರ ಶಕ್ತಿಯಾದ ದೈವದ ಬಗ್ಗೆ ಭಕ್ತಿ, ಜೀವನ ಶ್ರದ್ಧೆ, ಕಾಯಕ ನಿಷ್ಠೆ, ಸಕಲ ಜೀವರಿಗೆ ಲೇಸನ್ನೇ ಬಯಸುವ ಶರಣ ಮಾರ್ಗ - ಇದು ಧರ್ಮ.

**ಪ್ರಶ್ನೆ** : ಧರ್ಮದ ಹೆಸರಿನಲ್ಲಿ ಅಂಧಶ್ರದ್ಧೆ, ಮೂಢ ನಂಬಿಕೆಗಳು ಬಲಗೊಳ್ಳುವುದು ದೇವಾಲಯಗಳನ್ನು ಕಟ್ಟಿಸಿ, ಪೂಜಾರಿ ಧರ್ಮವನ್ನು ಪೋಷಿಸುವುದು ಇವೆಲ್ಲ ವೈಚಾರಿಕ ಪ್ರಜ್ಞೆಗೆ ವಿರೋಧವಲ್ಲವೆ?

ಶ್ರದ್ಧೆ ಮತ್ತು ನಂಬಿಕೆಗಳು ವ್ಯಕ್ತಿಯ ಭಾವನೆಗಳನ್ನು ಅವಲಂಬಿಸಿವೆಯೆಂದು ನನ್ನ ಅಭಿಪ್ರಾಯ. ದೇವಾಲಯಗಳನ್ನು ಕಟ್ಟಿಸುವುದು ಪೂಜಾರಿಧರ್ಮದ ಪೋಷಣೆಗಲ್ಲಚ ; ಜನ ಸಮುದಾಯದ ಸಾಂಸ್ಕೃತಿಕ ಕೇಂದ್ರಗಳಾಗಿ. ವೈಚಾರಿಕ ಪ್ರಜ್ಞೆ, ಎಂಬ ಶಬ್ದ

ಇತ್ತೀಚೆಗೆ ಬಹಳ ಕೇಳಿ ಬರುತ್ತಿದೆ. ಇಂತಹ ವೈಚಾರಿಕ ಪ್ರಜ್ಞಾವಂತರೂ ಸಹ ಅನೇಕ ಶ್ರದ್ಧೆ ಮತ್ತು ನಂಬಿಕೆಗಳಲ್ಲಿ ಬಂಧಿತರಾಗಿರುವ ಉದಾಹರಣೆಗಳು ಬೇಕಾದಷ್ಟಿವೆ.

ಈ ಜಗತ್ ಸೃಷ್ಟಿಯ ಕಲ್ಪನೆ ಸಾಮಾನ್ಯವಾದುದಲ್ಲ. ಅದರ ಆಳ ಅಗಲಗಳು ಅನಂತವಾದವು. ಆದರೂ ನಮ್ಮಲ್ಲಿ ಕೆಲವರು ಅಡಿಕಡ್ಡಿ ಇಟ್ಟುಕೊಂಡು ಇಡೀ ವಿಶ್ವವನ್ನೇ ಅಳೆಯಲು ಹೋಗುತ್ತಾರೆ. ದೇವರು-ಧರ್ಮ ಇವು ವ್ಯಕ್ತಿಯ ಶ್ರದ್ಧೆ-ನಂಬಿಕೆಗಳನ್ನು ಅವಲಂಬಿಸಿವೆ. ತನಗೆ ಅರ್ಥವಾಗದಿದ್ದುದೆಲ್ಲ ಅಂಧ ಶ್ರದ್ಧೆಯಾಗಬಹುದು; ಕೂಡಿ ಬರದಿರುವುದೆಲ್ಲ ಮೂಢ ನಂಬಿಕೆಯಾಗಬಹುದು!

ಇನ್ನು ನೀವು ಕೇಳಿದ ದೇವಾಲಯದ ವಿಷಯ, ಅದು ಪೂಜಾರಿ ಧರ್ಮಕ್ಕೆ ಎಡೆ ಕೊಡುತ್ತದೆನ್ನುವುದು ನಿಜ. ದೇವಸ್ಥಾನದ ಅಭ್ಯುದಯ ನೋಡಿಕೊಳ್ಳುವುದಕ್ಕಾಗಿ ಇದ್ದ ವ್ಯವಸ್ಥಾಪಕ ಪೂಜಾರಿ ಎನಿಸಿಕೊಂಡು ದೇವರ ಏಜೆಂಟ್ ಆಗಿ ಶೋಷಣೆ ನಡೆದಿರುವುದೂ ನಿಜ. ಧರ್ಮದ ಹೆಸರಿನಲ್ಲಿ ಶೋಷಣೆ ನಡೆಸುವ ಅಂತಹ ಪೂಜಾರಿ ತಕ್ಕ ಪಾಪ ಅನುಭವಿಸುತ್ತಾನೆ. ಆದರೆ ಶೋಷಣೆ ಎಲ್ಲಿ ನಡೆಯುತ್ತಿಲ್ಲ ಹೇಳಿ. ದೇವಾಲಯದ ಹೊರಗಡೆ ನಡೆಯುವ ಶೋಷಣೆಗೆ ಹೋಲಿಸಿದರೆ ಪೂಜಾರಿಯ ತಟ್ಟೆಗೆ ಹಾಕುವ ಕಾಣಿಕೆ ದೊಡ್ಡದೇನಲ್ಲ. ಅಂದ ಮಾತ್ರಕ್ಕೆ ದೇವಾಲಯಗಳು ಕೇವಲ ಪೂಜಾ ಕೇಂದ್ರಗಳಾಗಬೇಕೆಂಬುದು ನನ್ನ ವಿಚಾರವಲ್ಲ. ಜೊತೆಗೆ ದೇವಾಲಯಗಳ ಆಶ್ರಯದಲ್ಲಿ ಶೈಕ್ಷಣಿಕ ಮತ್ತು ಸಾಂಸತಿಕ ಸೇವಾ ಚಟುವಟಿಕೆಗಳೂ ನಡೆಯಬೇಕು.

**ಪ್ರಶ್ನೆ** : ಧಾರ್ಮಿಕ ಸಂಸ್ಥೆಗಳು ಮತ್ತು ಮಠಾಧೀಶರುಗಳು ಹಾಗೂ ಅವರ ಪಾತ್ರದ ಬಗ್ಗೆ ತಮ್ಮ ಅಭಿಪ್ರಾಯವೇನು?

ಇವು ಸಮಾಜಕ್ಕೂ ಅತ್ಯಂತ ಅಗತ್ಯವಾದ ಸಂಸ್ಥೆಗಳು ಮತ್ತು ಸ್ಥಾನಗಳು. ಆದರೆ ಮಠಗಳು ಮತ್ತು ಮಠಾಧಿಪತಿಗಳು ಕಾಲಕ್ಕೆ ಅನುಗುಣವಾಗಿ ಬದಲಾಯಿಸಬೇಕು. ಎಂದರೆ ಸಮಾಜದ ಅಗತ್ಯವನ್ನು ಕಂಡುಕೊಂಡು ಅದಕ್ಕೆ ತಕ್ಕಂತೆ ಸೇವೆ ಸಲ್ಲಿಸಬೇಕು. ಕೇವಲ ಪೂಜೆ, ಉತ್ಸವ ಮತ್ತು ಪ್ರಸಾದ-ಇವುಗಳಿಗೆ ಸೀಮಿತವಾಗಿರುವ ಕಾಲ ಇದಲ್ಲ. ಆದರೆ ನಮ್ಮಲ್ಲಿ ಎಷ್ಟೋ ಮಠಗಳು ಶ್ಲಾಘನೀಯವಾದಂತಹ ಸೇವೆ ಸಲ್ಲಿಸುತ್ತಿವೆ. ವಿದ್ಯಾಸಂಸ್ಥೆಗಳು, ವಿದ್ಯಾರ್ಥಿ ನಿಲಯಗಳು, ಆಸ್ಪತ್ರೆಗಳು ಮೊದಲಾದ ಅನೇಕ ಜನೋಪಯೋಗಿ ಸಂಸ್ಥೆಗಳನ್ನು ನಡೆಸುತ್ತಿವೆ. ಇದು ನಿಜಕ್ಕೂ ಅಭಿಮಾನದ ಸಂಗತಿ; ಅಭಿನಂದನಾರ್ಹ ವಿಷಯ. ಈ ದೃಷ್ಟಿಯಿಂದ ಧಾರ್ಮಿಕ ಪೀಠಗಳು ಸ್ವಾಗತಾರ್ಹ.

ಪ್ರಶ್ನೆ : ಈ ಧಾರ್ಮಿಕ ಸಂಸ್ಥೆಗಳನ್ನು ರಾಷ್ಟ್ರೀಕರಣ ಮಾಡಬೇಕೆಂಬ ಮಾತು ಈಗ ಕೇಳಿಬರುತ್ತಿದೆಯಲ್ಲ?

ತಪ್ಪು. ರಾಷ್ಟ್ರೀಕರಣ ಸೂತ್ರವನ್ನು ಮನಸ್ಸಿಗೆ ಬಂದಂತೆ ಎಲ್ಲದಕ್ಕೂ ಅನ್ವಯಿಸಬಾರದು. ಧಾರ್ಮಿಕ ಸಂಸ್ಥೆಗಳನ್ನು ನಮ್ಮ ದೇಶದ ಸಾಂಸತಿಕ ಪರಂಪರೆಯ ಹಿನ್ನೆಲೆಯಲ್ಲಿ ನೋಡಬೇಕು. ಈ ಸಂಸ್ಥೆಗಳು ತಮ್ಮಷ್ಟಕ್ಕೆ ತಾವು ಸಾರ್ವಜನಿಕ ಸೇವೆಯನ್ನು ಮಾಡಿಕೊಂಡು ಹೋಗಲು ಅವಕಾಶವನ್ನು ಹೆಚ್ಚಿಸಬೇಕು. ಯಾವ ಧಾರ್ಮಿಕ ಸಂಸ್ಥೆಗಳು ರಾಜಕೀಯ ಕೈವಾಡ ನಡೆಸಲು ಆರಂಭಿಸುತ್ತವೆಯೋ ಅಂತಹ ಸಂಸ್ಥೆಗಳು ಜನರ ಟೀಕೆಗೆ ಗುರಿಯಾಗುವುದು ಸಹಜ. ಆದ್ದರಿಂದ ಮಠಗಳು ಮತ್ತು ಮಠಾಧಿಪತಿಗಳು ಜನಸೇವೆಯೊಂದನ್ನೇ ಗುರಿಯಾಗಿಟ್ಟುಕೊಂಡು ಕೆಲಸ ಮಾಡಬೇಕು. ಅವು ಧರ್ಮ ರಕ್ಷಣೆಯ ಮತ್ತು ಧರ್ಮ ಪ್ರಸಾರದ ಪವಿತ್ರ ಕೇಂದ್ರಗಳಾಗಬೇಕು.

ಪ್ರಶ್ನೆ : ಕ್ಷಮಿಸಿ, ಮತ್ತೆ ರಾಜಕೀಯ ವಿಚಾರ ಪ್ರಸ್ತಾಪ ಮಾಡುತ್ತಿದ್ದೇನೆ. ಏಕೆಂದರೆ ಅದು ನಮ್ಮ ಜೀವನದ ಎಲ್ಲ ವ್ಯವಹಾರಗಳನ್ನು ಆವರಿಸಿಬಿಟ್ಟಿದೆ.. ಇಂದಿನ ಬಹುತೇಕ ಸಾಮಾಜಿಕ ಹಾಗೂ ಆರ್ಥಿಕ ಅನಿಷ್ಟಗಳಿಗೆ ರಾಜಕೀಯ ಅವ್ಯವಸ್ಥೆಯೇ ಕಾರಣವೆನಿಸುತ್ತದೆ. ಇದನ್ನು ತಾವು ಒಪ್ಪುವಿರೋ ಇಲ್ಲವೊ?

ಉಹುಂ. ಅದು ತಪ್ಪು ಕಲ್ಪನೆ. ಮನೆಯಲ್ಲಿ ರೋಗ ಪೀಡಿತ ಹಸು ಸತ್ತರೆ, ಮನೆಗೆ ಬಂದ ಸೊಸೆಯ ಕಾಲು ಗುಣ ಕೆಟ್ಟದೆಂದು ಆರೋಪಿಸಿದಂತಾಗುತ್ತದೆ. ಎಲ್ಲ ಕ್ಷೇತ್ರಗಳಲ್ಲೂ ರಾಜಕೀಯ ಚಟುವಟಿಕೆಗಳು ಪ್ರಧಾನವಾಗಿ ಕಾಣುವುದರಿಂದ ನಿಮಗೆ ಹಾಗೆನಿಸುತ್ತದೆ. ರಾಜಕೀಯ ರಾಷ್ಟ್ರಜೀವನದ ಒಂದು ರಂಗ ಮಾತ್ರ. ಈ ಅನಿಷ್ಟಗಳು ಯಾವಾಗ ಇರಲಿಲ್ಲ? ಮನುಷ್ಯನ ಸ್ವಭಾವದಿಂದ ಉಂಟಾಗುವ ಅನಿಷ್ಟಗಳನ್ನೆಲ್ಲ ರಾಜಕೀಯದ ಮೇಲೆ ಆರೋಪಿಸಿದರೆ ಹೇಗೆ? ಇತರ ರಂಗಗಳಲ್ಲಿ ಆಗಿರುವ ಪ್ರಗತಿಯೇನು ಕಡಿಮೆಯೇ? ಕೃಷಿ-ಕೈಗಾರಿಕೆ ಕ್ಷೇತ್ರಗಳಲ್ಲಿ ಆಗಿರುವ ಅಭಿವೃದ್ಧಿ ಅಭಿಮಾನ ಪಡುವಂತಹುದು. ಸಾಮಾಜಿಕ ಕ್ಷೇತ್ರದಲ್ಲೂ ಅಷ್ಟೆ. ಶತ ಶತಮಾನಗಳಿಂದ ತಮ್ಮತನವನ್ನೇ ಮರೆತು ಉಳ್ಳವರ ತುಳಿತಕ್ಕೆ ಒಳಗಾಗಿ ತಮ್ಮ ಬದುಕಿನ ಬಗ್ಗೆ ಭರವಸೆಯನ್ನೇ ಕಳೆದುಕೊಂಡಿದ್ದ ಹರಿಜನ ಗಿರಿಜನರಿಗೆ, ದೀನ ದುರ್ಬಲರಿಗೆ ಇಂದು ಹೊಸ ಆತ್ಮ ವಿಶ್ವಾಸ ಮೂಡಿದೆ; ಕೀಳರಿಮೆ ಮಾಯವಾಗಿದೆ.

ಆದ್ದರಿಂದ ಎಲ್ಲ ಅನಿಷ್ಟಗಳಿಗೂ ರಾಜಕೀಯ ಅವ್ಯವಸ್ಥೆ ಕಾರಣವಾಗಲಾರದು. ರಾಜಕೀಯ ರಂಗವೇ ಅಂತಹುದು. ಪೈಪೋಟಿ, ಭಿನ್ನಾಭಿಪ್ರಾಯ, ಪರ-ವಿರೋಧ ಇವೆಲ್ಲ ಸಹಜ. ಮಾನವ ಸಹಜ ದೌರ್ಬಲ್ಯಗಳು ರಾಜಕಾರಣಿಗಳನ್ನೇನೂ ಬಿಟ್ಟಿಲ್ಲ. ಆದರೂ ರಾಜಕೀಯ ದೃಢತೆ ಇರುವುದು ರಾಷ್ಟ್ರದೃಷ್ಟಿಯಿಂದ ಅಗತ್ಯವಾದುದು.

ಪ್ರಶ್ನೆ : ನಮ್ಮ ಚುನಾವಣಾ ಪದ್ಧತಿಯಲ್ಲಿ ಬದಲಾವಣೆ ಅಗತ್ಯವಿದೆ ಎನಿಸುವುದಿಲ್ಲವೆ?

ನೋಡಿ, ನಾನು ಭಾರತದ ರಾಜ್ಯಾಂಗ ಸಭೆಯ (Constituent Assembly of India) ಸದಸ್ಯನಾಗಿದ್ದೆ. ಅಂದಿನ ಕಾಲದಲ್ಲಿ ಬ್ರಿಟನ್ ಮಾದರಿಗಳು ಬಹಳ ಸೂಕ್ತವೆನಿಸಿದ್ದವು. ಅವುಗಳನ್ನು ನಾವು ಸಂವಿಧಾನದಲ್ಲಿ ಅಳವಡಿಸಿಕೊಂಡೆವು. ಆದರೂ ನನಗೆ ಅದು ಅಷ್ಟು ಸೂಕ್ತವಲ್ಲ ಅನ್ನಿಸುತ್ತಿತ್ತು. ಆ ಸಭೆಯಲ್ಲಿ ನಾನು ಮಾತನಾಡಿದಾಗ ಹೀಗೆ ಹೇಳಿದ್ದೆ. "What is wanted by India is the music of Veena and not the blaring sound of Jaz band"

ನಾವು ಅನುಸರಿಸುತ್ತಿರುವುದು ಪಾಶ್ಚಿಮಾತ್ಯ ಚುನಾವಣಾ ಪದ್ಧತಿ. ಇದು ನಮ್ಮ ರಾಜಕೀಯ ಗುಣಮಟ್ಟವನ್ನು ಬಹುಮಟ್ಟಿಗೆ ಅಧೋಗತಿಗೆ ತಳ್ಳುತ್ತದೆ. ಚುನಾವಣಾ ವೆಚ್ಚವನ್ನೇ ತೆಗೆದುಕೊಳ್ಳಿ. ಸಹಸ್ರ ರೂ.ಗಳಷ್ಟು ಇದ್ದದ್ದು ಈಗ ಲಕ್ಷಕ್ಕೇರಿದೆ. ಅದು ಕೋಟಿಯನ್ನು ದಾಟಿದರೂ ಆಶ್ಚರ್ಯವಿಲ್ಲ. ಚುನಾವಣೆಗಾಗಿ ಇಷ್ಟು ಪ್ರಮಾಣದ ಹಣ ವೆಚ್ಚ ಮಾಡಿದ ವ್ಯಕ್ತಿ ಅದನ್ನು ಗಳಿಸಿಕೊಳ್ಳಲು ಅಕ್ರಮ ಹಾದಿ ಹಿಡಿಯುತ್ತಾನೆ. ಇದು ಸಹಜವಾಗಿಯೇ ಭ್ರಷ್ಟಾಚಾರಕ್ಕೆ, ಮುಕ್ತ ದ್ವಾರವಾಗುತ್ತದೆ. ಆದುದರಿಂದ ಚುನಾವಣೆಗಳು ಸುಲಭ ವೆಚ್ಚದಲ್ಲಿ ಆಗುವಂತೆ ಮಾರ್ಪಾಟಾಗಬೇಕು. ಈ ಬಗ್ಗೆ ಬಹಳಷ್ಟು ಚರ್ಚೆ ನಡೆದಿದ್ದರೂ, ಇನ್ನೂ ಪರಿಹಾರ ಮಾರ್ಗ ಕಂಡಿಲ್ಲ. ಆದರೂ ಎಲ್ಲ ರಾಜಕೀಯ ಪಕ್ಷಗಳೂ ಕಲೆತು ಸಮಾಲೋಚಿಸಿ ಈ ಸಮಸ್ಯೆಯನ್ನು ಬಗೆಹರಿಸಬೇಕು.

ಪ್ರಶ್ನೆ : ಬ್ರಿಟಿಷ್ ಮಾದರಿ ಅನುಸರಿಸಿ ನಮ್ಮ ಪರಿಸ್ಥಿತಿ ಹೀಗಾಯಿತು ಎಂದಿರಿ. ಹಾಗಾದರೆ ಬ್ರಿಟನ್ನಿನಲ್ಲೂ ಹೀಗೇ ಹದಗೆಡಬೇಕಲ್ಲಾ?

ಆದರೆ ಬ್ರಿಟಿಷರು ರಾಜಕೀಯ ಪ್ರಬುದ್ಧತೆ ಬೆಳೆಸಿ ಕೊಂಡಿದ್ದಾರೆ. ಅವರು ಸಂಯಮ ಜೀವಿಗಳು. ಖಾಸಗಿ ಕೆಲಸಕ್ಕೆ ಸರಕಾರಿ ಕಾರು ಬಳಸಿದ ಸಣ್ಣ ಸಂದರ್ಭವೊಂದು ಬೆಳಕಿಗೆ ಬಂದಾಗ ಸಂಬಂಧಪಟ್ಟ ಸಚಿವರು ರಾಜೀನಾಮೆ ಕೊಟ್ಟ ಪ್ರಸಂಗ ಬ್ರಿಟನ್ನಿನಲ್ಲಿದೆ. ಸಾರ್ವಜನಿಕ ನೀತಿಗೆ ಅಲ್ಲಿ ಅಷ್ಟೊಂದು ಮಹತ್ವವಿದೆ. ಆದರೆ ನಮ್ಮಲ್ಲಿ? ಎಂತೆಂತಹ

ಆರ್ಥಿಕ ಅಪರಾಧಗಳನ್ನೆಸಗಿದರೂ ಅವರ ರಕ್ಷಣೆಯ ಪ್ರಯತ್ನ ನಡೆಯುತ್ತದೆ. ಸಾರ್ವಜನಿಕ ಜೀವನದ ಶೀಲ-ಚಾರಿತ್ರ್ಯಗಳಿಗೆ ಬೆಲೆಯೇ ಇಲ್ಲವಾಗುತ್ತಿದೆ. ಈ ಬಗ್ಗೆ ರಾಷ್ಟ್ರೀಯ ದೃಷ್ಟಿಯ ಎಲ್ಲರೂ ಗಂಭೀರವಾಗಿ ವಿಚಾರ ಮಾಡಬೇಕಾದ ಅವಸರವಿದೆ.

ಪ್ರಶ್ನೆ : ರಾಷ್ಟ್ರೀಯ ಸರಕಾರ ಅಥವಾ ಎರಡು ಪಕ್ಷಗಳ ವ್ಯವಸ್ಥೆ ಮೊದಲಾಗಿ ಕೆಲವು ವಿಚಾರವಂತರು ಮಾತನಾಡುತ್ತಾರೆ. ಅಂತಹ ಬದಲಾವಣೆ ಪರಿಣಾಮಕಾರಿಯಾಗುವುದಿಲ್ಲವೆ?

ಯಾವುದೇ ಪದ್ಧತಿಗಳಿಂದ ಸತ್ಪರಿಣಾಮವಾಗಲಾರದು. ಅವನ್ನು ಅನುಷ್ಠಾನಕ್ಕೆ ತರುರ ಜನರ ಪ್ರಾಮಾಣಿಕತೆ ಮುಖ್ಯವಾದುದು. ಅನ್ನ ಹಳಸಿದ್ದರೆ ಚಿನ್ನದ ತಟ್ಟೆಯಲ್ಲಿಟ್ಟರೂ ತ್ಯಾಜ್ಯ. ಬಿಸಿಯಾಗಿದ್ದರೆ ಮಣ್ಣಿನ ತಟ್ಟೆಯಲ್ಲಿಟ್ಟರೂ ಸ್ವೀಕಾರಾರ್ಹ ಮುಖ್ಯವಾದುದು ಅನ್ನ; ತಟ್ಟೆಯಲ್ಲ. ಅಂತೇ ಆಡಳಿತದಲ್ಲೂ ಸಹ ಪದ್ಧತಿಗಿಂತ ಅದನ್ನು ನಿರ್ವಹಿಸುವವರ ನಿಷ್ಠೆ ಮುಖ್ಯವಾದುದು. ಜನನಾಯಕರಾದವರು. ರಾಷ್ಟ್ರೀಯ ಪ್ರತಿನಿಧಿಗಳಾದವರು ಸಜ್ಜನರಾಗಿರಬೇಕು; ಸಭ್ಯರಾಗಿರಬೇಕು. ಸಹಕಾರ ಮನೋಭಾವವುಳ್ಳವರಾಗಿರಬೇಕು.

ಪದ್ಧತಿಯು ಕೂಡ ಪರಿಣಾಮ ಬೀರುತ್ತದೆ. ಆದರೆ ಅದಕ್ಕೆ ಎರಡನೆಯ ಸ್ಥಾನ. ಮೊದಲನೆಯದು ಮಾನವೀಯ ಗುಣ.

ಪ್ರಶ್ನೆ : ಇತ್ತೀಚೆಗೆ ನಮ್ಮ ದೇಶದಲ್ಲಿ ದುಡಿಯದೆಯೇ ತಿನ್ನಬೇಕೆನ್ನುವವರ ಸಂಖ್ಯೆ ಹೆಚ್ಚುತ್ತಿದೆ ಎಂದೆನಿಸುತ್ತದೆ. ಶ್ರಮದ ದುಡಿಮೆಯನ್ನು ಕಡ್ಡಾಯ ಮಾಡುವ ಅಗತ್ಯವಿಲ್ಲವೆ ?

ಇಂತಹವರ ಸಂಖ್ಯೆ ಎಲ್ಲಾ ಕಾಲದಲ್ಲೂ ಎಲ್ಲಾ ದೇಶದಲ್ಲೂ ಇರುತ್ತದೆ. ಆದರೆ ಅದಕ್ಕೆ ನಿಯಂತ್ರಣದ ಅಗತ್ಯವಿದೆ. ಶ್ರಮದ ದುಡಿಮೆ ಕಡ್ಡಾಯವಾಗಿರುವಂತಹ ಕಡೆಗಳಲ್ಲೂ ಸೋಮಾರಿಗಳಿದ್ದಾರೆ. ಬೆಳೆಯ ಮಧ್ಯೆ ಕಳೆ ಅನಿವಾರ್ಯ. ಆದರೆ ಅದನ್ನು ಆಗಾಗ ತೆಗೆದು ಹಾಕಿ ಬೆಳೆ ಹುಲುಸಾಗುವಂತೆ ಮಾಡಬೇಕು. ದುಡಿಮೆಯಾವಾಗಲೂ ಶ್ರದ್ಧಾಪೂರ್ಣವಾಗಬೇಕು. ಕಡ್ಡಾಯದ ದುಡಿಮೆ ಒಳ್ಳೆಯ ಫಲ ನೀಡಲಾರದು. ಶಕ್ತಿಯುಳ್ಳ ವ್ಯಕ್ತಿ ದುಡಿದೇ ತಿನ್ನಬೇಕು ನಿಜ. ಆದರೆ ಒತ್ತಾಯಕ್ಕಿಂತ ದುಡಿಯಲು ಪ್ರೇರಕವಾಗುವ ವಾತಾವರಣ ಮೂಡಿಸುವುದು ಹೆಚ್ಚು ಫಲಕಾರಿ ಎಂಬುದು ನನ್ನ ಭಾವನೆ.

ಪ್ರಶ್ನೆ : ಆಡಳಿತದಲ್ಲಿ ಭ್ರಷ್ಟಾಚಾರ ನಿವಾರಣೆ ಮತ್ತು ಸಾರ್ವಜನಿಕ ಶಿಸ್ತು-ಇವುಗಳ ಬಗ್ಗೆ ತಾವು ಆಗಿಂದಾಗ ಹೇಳುತ್ತಲೇ ಇದ್ದೀರಿ. ಆದರೆ ಪರಿಸ್ಥಿತಿಯಲ್ಲಿ ಏನಾದರೂ ಸುಧಾರಣೆಯಾಗಿದೆಯೆ?

ಸುಧಾರಣೆಯಾಗಿಲ್ಲ ಎನ್ನುವುದನ್ನು ಒಪ್ಪುತ್ತೇನೆ. ಆದರೆ ಪ್ರಯತ್ನ ನಿಲ್ಲಿಸಲಾಗದು. ಆಡಳಿತ ಯಂತ್ರವನ್ನು ದೊಡ್ಡದು ಮಾಡಿದಂತೆಲ್ಲಾ ಭ್ರಷ್ಟಾಚಾರ ನಿಯಂತ್ರಣ ಕಷ್ಟವಾಗುತ್ತದೆ. ನಮ್ಮಲ್ಲಿ ಪ್ರತಿಯೊಂದು ಚುನಾವಣೆ ನಡೆದಾಗಲೂ ಮಂತ್ರಿಗಳ ಸಂಖ್ಯೆ ಹೆಚ್ಚುತ್ತಲೇ ಬಂದಿದೆ. ಇದೊಂದು ರೀತಿಯ ಉದರ ರೋಗವಾಗಿ ಪರಿಣಮಿಸಿದೆ. ಸಚಿವ ಸಂಪುಟ ವಿಸ್ತಾರವಾದಂತೆ ಆಡಳಿತಮಟ್ಟ ಕುಸಿಯುತ್ತಾ ಬಂದಿದೆ. ಹಿಂದೆ ಮದ್ರಾಸ್ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ರಾಜಾಜಿ ಅವರು ಕೇವಲ 8 ಜನ ಸಚಿವರೊಂದಿಗೆ ಸಮರ್ಥ ಆಡಳಿತ ನಡೆಸಿದರು. ನಮ್ಮ ಮೈಸೂರಿನಲ್ಲಿ ನಾನು ಮುಖ್ಯಮಂತ್ರಿಯಾಗಿದ್ದಾಗ 6 ಜನ ಸಚಿವರು ಮಾತ್ರ ಇದ್ದರು.

ಏನೇ ಇದ್ದರೂ ಆಡಳಿತ ಭ್ರಷ್ಟಾಚಾರ ನಿವಾರಣೆಗೆ ಸಾರ್ವಜನಿಕರೂ ಸಹಕರಿಸಬೇಕು. ಆಡಳಿತ ನಡೆಸುವವರು ಧರ್ಮದ ದೃಷ್ಟಿಯಿಟ್ಟುಕೊಂಡು ನಡೆಯಬೇಕು.

ಪ್ರಶ್ನೆ : ಭ್ರಷ್ಟಾಚಾರಕ್ಕಿಂತ ಅಪಾಯಕರವಾದ ಇನ್ನೊಂದು ಪಿಡುಗು ಜಾತೀಯತೆ. ಅಶಿಕ್ಷಿತರಿಗಿಂತ ಶಿಕ್ಷಿತರಲ್ಲೇ ಈ ಭಾವನೆ ಹೆಚ್ಚಾಗಿದೆ. ಇದಕ್ಕೆ ಪರಿಹಾರವಿಲ್ಲವೆ?

ನೀವು ಹೇಳಿದ ಮಾತಿನಲ್ಲಿ ಸತ್ಯವಿದೆ. ರಾಜಕೀಯದ ಜನ ಓಟಿನ ಬೇಟೆಗಾಗಿ ಜಾತೀಯ ಭಾವನೆಯನ್ನು ಪ್ರಚೋದಿಸುತ್ತಾರೆ, ಸಾಮಾಜಿಕ ಶಾಂತಿಗೆ ಭಂಗ ತರುತ್ತಾರೆ, ಇದು ಕೇವಲ ಅಧಿಕಾರ ದಾಹದ ಫಲ. ಕೆಲವು ರಾಜಕೀಯ ಮುಖಂಡರು ಹೂಡಿರುವ ಸನ್ನಾಹ. ಜಾತೀಯ ಜ್ವಾಲೆ ಭುಗಿಲೇಳುವುದೇ ಚುನಾವಣೆಗಳ ಹಿಂದೆ ಮುಂದೆ. ಗ್ರಾಮೀಣ ಪ್ರದೇಶಗಳಲ್ಲಂತೂ ತಲೆಮಾರುಗಳಿಂದ ಯಾವ ಭಿನ್ನಭೇದವೂ ಇಲ್ಲದೆ ಬಾಳಿಕೊಂಡು ಬಂದ ಜನರಲ್ಲಿ ಇಲ್ಲಸಲ್ಲದ ಆಸೆ ಆಮಿಷಗಳನ್ನು ಹುಟ್ಟಿಸಿ, ಜಾತಿ-ಜಾತಿಗಳ ಮಧ್ಯೆ ಇದ್ದ ಸಾಮರಸ್ಯವನ್ನು ಹಾಳು ಮಾಡಿ ಸ್ವಾರ್ಥದ ಬೇಳೆ ಬೇಯಿಸಿಕೊಳ್ಳುವ ಕೆಲವು ರಾಜಕಾರಣಿಗಳು ಇಂದಿನ ಜಾತೀಯ ವಿಷಮತೆಗೆ ಕಾರಣವೆನ್ನುವುದು ಹಗಲಿನಷ್ಟೆ ಸತ್ಯ.

ಉತ್ತರ ಪ್ರದೇಶದಲ್ಲಿ ನಡೆಯುವ ಭೂ ಮಾಲಿಕ ಗುತ್ತಿಗೆದಾರರ ಕಲಹವಿರಲಿ, ದೇಶದ ಮತ್ಯಾವುದೇ ಭಾಗದಲ್ಲಿ ನಡೆಯುವ ಗೊಂದಲವಿರಲಿ, ಅದೆಲ್ಲ ಹೇಯವಾದುದು. ಕಿಚ್ಚನ್ನೇ ಹಚ್ಚಲಾಗುತ್ತಿದೆ. ಇದು ನಿಜಕ್ಕೂ ಹೇಯವಾದುದು. ಪ್ರಜಾಪ್ರಭುತ್ವದಲ್ಲಿ

ಪ್ರಜೆಗಳನ್ನು ಪ್ರತಿನಿಧಿಸುವ ಮುಂದಾಳುಗಳೇ ಜಾತೀಯ ಪ್ರಚೋದನೆಗೆ ಗಾಳಿ ಬೀಸಿದರೆ ಸಾಮಾನ್ಯ ಜನರ ಗತಿಯೇನು?

ಜನ ಸಮೂಹದ ಮಾತು ಹಾಗಿರಲಿ. ಮೊದಲು ನಮ್ಮ ಶಾಸಕರು, ಮಂತ್ರಿಗಳು ಪರಸ್ಪರ ಜಾತೀಯ ಭಾವನೆಯನ್ನು ಬಿಟ್ಟು ಮೇಲ್ಮಟ್ಟಕ್ಕೆ ಎದ್ದು ನಿಲ್ಲುವಂತಾದರೆ, ಉಳಿದ 65 ಕೋಟಿ ಜನ ತಾನೆ ಸರಿಹೋಗುತ್ತಾರೆ. ಆಡಳಿತ ನಡೆಸುವವರಲ್ಲಿ ಆದರ್ಶವಿದ್ದರೆ ಜನ ಅವರನ್ನು ಅನುಸರಿಸುವಲ್ಲಿ ಯಾವ ಅನುಮಾನವೂ ಇಲ್ಲ.

ಪ್ರಶ್ನೆ : ಒಂದಲ್ಲ ಒಂದು ಕಾರಣದಿಂದ ಈಗ ನಡೆಯುತ್ತಿರುವ ಚಳುವಳಿಗಳು, ಮುಷ್ಕರಗಳು, ಬೀಗ ಮುದ್ರೆ ಮೊದಲಾದುವನ್ನು ದೇಶದ ಪ್ರಗತಿಯ ದೃಷ್ಟಿಯಿಂದ ಹತ್ತು ವರ್ಷಗಳ ಕಾಲ ನಿಷೇಧಿಸಿದರೆ ಒಳಿತಲ್ಲವೆ?

ಅಂತಹ ನಿಷೇಧವನ್ನು, ನಾನು ಒಪ್ಪುವುದಿಲ್ಲ. ಅಮೇರಿಕಾದಂತಹ ಮುಂದುವರಿದ ರಾಷ್ಟ್ರಗಳಲ್ಲೂ ಇಂತಹ ಮುಷ್ಕರಗಳು ನಡೆಯುತ್ತವೆ. ಆದರೆ ಅಲ್ಲಿನ ಕಾರ್ಮಿಕ ದಳ ರಾಷ್ಟ್ರದ ಕಾನೂನಿನ ಚೌಕಟ್ಟನ್ನು ಮೀರುವುದಿಲ್ಲ. ಮುಷ್ಕರ ಅಥವಾ ಚಳುವಳಿಗಾರರಲ್ಲಿ ಅಂತಹ ಒಂದು ಶಿಸ್ತು ಅಗತ್ಯ. ಇನ್ನು ಆಡಳಿತವೂ ಅಷ್ಟೆ. ಕಾರ್ಮಿಕರ ಕಷ್ಟನಷ್ಟಗಳನ್ನು ಆಗಿಂದಾಗ್ಗೆ ನಿವಾರಿಸಿ ಸಕಾಲದಲ್ಲಿ ಸೂಕ್ತ ಪರಿಹಾರ ನೀಡಬೇಕು. ಕಾರ್ಮಿಕರು ಸಾಧ್ಯವಾದಷ್ಟು ಶ್ರಮಿಸಿ ದೇಶವನ್ನು ಸಮರ್ಥವಾಗಿ ಬೆಳೆಸಲು ನೆರವಾಗಬೇಕು.

ಚಳುವಳಿಗಳು ಮತ್ತು ಮುಷ್ಕರಗಳಲ್ಲಿ ದುಷ್ಟಶಕ್ತಿಗಳು ತಮ್ಮ ಕೈವಾಡ ನಡೆಸುವುದು ಸಹಜ. ಅಂತಹ ದುಷ್ಟಶಕ್ತಿಗಳು ಅತ್ಯಂತ ಅಪಾಯಕಾರಿಯೆಂಬುದನ್ನು, ಮುಷ್ಕರ ನಡೆಸುವವರು ಮನಗಾಣಬೇಕು. ಕಾರ್ಖಾನೆ ಅಥವಾ ಹೊಲದ ಒಡೆಯನಿರಲಿ, ದುಡಿಯುವ ಕಾರ್ಮಿಕನಿರಲಿ, ಇಬ್ಬರಿಗೂ ದೇಶದ ದೃಷ್ಟಿಯಿರಬೇಕು. ಬಂಡವಾಳಗಾರರಿಗೆ ಲಾಭ ಬದುಕತನವಿರಬಾರದು; ಕಾರ್ಮಿಕರಿಗೆ ಬೇಡುವುದೇ ಬದುಕಾಗಬಾರದು.

ಪ್ರಶ್ನೆ : ಸಾಮ್ಯವಾದಿ ರಾಷ್ಟ್ರಗಳಲ್ಲಿ ಹೇಗೆ ನಡೆಯುತ್ತದೆ ?

ಅಲ್ಲಿ, ಎಲ್ಲ ಸರಿಯಾಗಿರುತ್ತದೆ ಎನ್ನುವುದೊಂದು ಭ್ರಮೆ. ಭಾರತೀಯ ನಿಯೋಗವೊಂದರ ನಾಯಕನಾಗಿ ನಾನೇ ಮಾಸ್ಕೋಕ್ಕೆ ಹೋಗಿದ್ದೇನೆ. ಅಲ್ಲಿನ ಕಾರ್ಖಾನೆಗಳು ನಮ್ಮ ಕಾರ್ಖಾನೆಗಳಷ್ಟೇನೂ ಚೊಕ್ಕಟವಾಗಿರಲಿಲ್ಲ. ಜಪಾನ್, ಜರ್ಮನಿ, ಅಮೇರಿಕಾಗಳಲ್ಲಿ ಕೊಡುವಷ್ಟು ಸಂಬಳವನ್ನು ರಷ್ಯಾ ತನ್ನ ಕಾರ್ಮಿಕರಿಗೆ ಕೊಡುವುದಿಲ್ಲ.

ಆದರೆ ಅವರಿಗೆ ಕೆಲವೊಂದು ವಿಶೇಷ ಸವಲತ್ತುಗಳಿವೆ. ರಷ್ಯಾದಲ್ಲಿ ಕೈಗಾರಿಕಾ ಕಾರ್ಮಿಕರಿಗೆ ಕೊಟ್ಟಷ್ಟು ಗಮನವನ್ನು ಕೃಷಿ ಕಾರ್ಮಿಕರಿಗೆ ಕೊಟ್ಟಿಲ್ಲ. ಅವರು ಬಹಳ ಉದಾಸೀನಕ್ಕೊ ಒಳಗಾಗಿದ್ದಾರೆ. ಖಾಸಗಿ ಒಡೆತನ ಅಲ್ಲಿ ಇಲ್ಲದಿದ್ದರೂ ಪಕ್ಷದ ಪದಾಧಿಕಾರಿಗಳು ಉನ್ನತ ಜೀವನ ನಡೆಸುವುದನ್ನು ಯಾರಾದರೂ ಗಮನಿಸಬಹುದು. ಆದರೆ ದುಡಿಮೆಗಾರ ಯಾವುದನ್ನು ಪ್ರಶ್ನಿಸುವಂತಿಲ್ಲ. ನಮ್ಮಲ್ಲಿ ಪ್ರಶ್ನಿಸುವ ಸ್ವಾತಂತ್ರ್ಯವಿದೆ. ತಪ್ಪಾದಾಗ ಅದನ್ನು ಸರಿಪಡಿಸುವ ಪ್ರಜ್ಞೆ ಆಡಳಿತ ವರ್ಗಕ್ಕೆ ಇಲ್ಲವಾದಾಗ ಮುಷ್ಕರಗಳು ಅನಿವಾರ್ಯವಾಗುತ್ತವೆ. ದುಡಿಮೆಗಾರರಲ್ಲಿ ಅಸಮಾಧಾನದ ಹೊಗೆ ಆರಂಭವಾಗುವಷ್ಟರಲ್ಲೇ ಅದನ್ನು ಕಂಡುಕೊಂಡು ಸೂಕ್ತ ಮುನ್ನೆಚ್ಚರಿಕೆ ವಹಿಸಿದರೆ ಎಷ್ಟೋ ಮುಷ್ಕರಗಳನ್ನು ತಪ್ಪಿಸಬಹುದು.

ಪ್ರಶ್ನೆ : ಈ ಮುಷ್ಕರ ಮತ್ತು ಚಳುವಳಿಗಳ ಮಾತು ಬಂತೆಂದರೆ ಯುವಜನರು ಮತ್ತು ವಿದ್ಯಾರ್ಥಿಗಳ ಅಶಾಂತಿಯ ಮಾತೂ ಕೇಳಿಬರುತ್ತದೆ. ಇದಕ್ಕೆ ಕಾರಣವೇನು?

ನಮ್ಮ ರಾಜ್ಯದ ಮಟ್ಟಿಗೆ ಹೇಳುವುದಾದರೆ ಯುವ ಜನರು ಮತ್ತು ವಿದ್ಯಾರ್ಥಿಗಳಲ್ಲಿ ಅಂತಹ ಅಶಾಂತಿಯೇನೂ ಕಂಡುಬರುವುದಿಲ್ಲ. ಸಾವಿರಾರು ಕಾಲೇಜುಗಳು ಇರುವಾಗ ಅಲ್ಲೊಂದು ಇಲ್ಲೊಂದು ಘಟನೆ ನಡೆದರೆ ಅದೇನೂ ದೊಡ್ಡದಲ್ಲ. ಅದನ್ನೇ ಉತ್ಪ್ರೇಕ್ಷಿಸಿ ಸಮಸ್ಯೆಗೆ ಪರಿಹಾರ ಹುಡುಕುವುದನ್ನೇ ನಾವು ಮರೆತು ಬಿಡುತ್ತೇವೆ.

ಆದರೂ ವಿಶ್ವವಿದ್ಯಾನಿಲಯ ಮಟ್ಟದಲ್ಲಿ ಯುವ ಜನರಿಗೆ ಶಿಸ್ತಿನ ಶಿಕ್ಷಣ ಅಗತ್ಯವಿದೆ. ಏಕೆಂದರೆ, ರಾಷ್ಟ್ರರಥವನ್ನು ಎಳೆಯಲು ಸಿದ್ಧರಾಗಿರುವ ಸಮರ್ಥರು ಇರುವುದೇ ಈ ಹಂತದಲ್ಲಿ. ಯುವ ಜನರ ಧೈರ್ಯ, ಸಾಹಸ, ಪ್ರಯತ್ನಶೀಲತೆ, ಹೋರಾಟಗುಣ- ಇವುಗಳನ್ನು ನಾವು ಗುರುತಿಸಿ ಮನ್ನಣೆ ಯುಕ್ತವಾದರೆ ಖಂಡಿತವಾಗಿಯೂ ಅವರ ಸಹಕಾರ ಪಡೆಯುವುದು ಕಷ್ಟವಾಗಲಾರದು.

ಯೌವನ ಸಹಜವಾದ ಅವರ ಉತ್ಸಾಹ ಮತ್ತು ಉದ್ವೇಗಗಳಿಗೆ ಒಂದು ವ್ಯವಸ್ಥಿತ ಚೌಕಟ್ಟು ಒದಗಿಸಿ ಆ ಉತ್ಸಾಹ-ಉದ್ವೇಗಗಳು ರಚನಾತ್ಮಕ ಕಾರ್ಯಗಳಿಗೆ ಬಳಕೆಯಾಗುವಂತಹ ವೇದಿಕೆಗಳನ್ನು ಒದಗಿಸುವುದು ಹಿರಿಯರ ಕರ್ತವ್ಯ. ಅದನ್ನು ಬಿಟ್ಟು ನಾವು ತಾಳ್ಮೆಗೆಟ್ಟರೆ ಯುವಜನ ಸಹಜವಾಗಿಯೇ ಎಲ್ಲ ವಿಷಯಗಳಲ್ಲೂ ವಿರೋಧ ಭಾವನೆ ಬೆಳೆಸಿಕೊಳ್ಳುತ್ತದೆ. ಆಗ ಅವರ ಶಕ್ತಿ-ಸಾಮರ್ಥ್ಯಗಳು ವೃಥಾ ವ್ಯರ್ಥವಾಗುತ್ತವೆ.

ಪ್ರಶ್ನೆ : ಯುವ ಜನಾಂಗದಲ್ಲಿ ಅಸಮಾಧಾನವುಂಟಾಗುವುದು ಮತ್ತಿತರ ಪರಿಸ್ಥಿತಿಗಳಿಗೆ ನಮ್ಮ ಶಿಕ್ಷಣ ಪದ್ಧತಿಯ ಲೋಪದೋಷಗಳೇ ಕಾರಣವೆಂದು ಹೇಳುತ್ತಲೇ ಬರಲಾಗಿದೆ. ಆದರೂ ಈ ನೆಲಕ್ಕೆ ಅನುಗುಣವಾದ ಶಿಕ್ಷಣ ಪದ್ಧತಿ ಇನ್ನೂ ಜಾರಿಗೆ ಬರಲಿಲ್ಲ. ಇದಕ್ಕಿರುವ ಆತಂಕವೇನು ?

ನಮ್ಮ ಶಿಕ್ಷಣ ಪದ್ಧತಿಯಲ್ಲಿ ಲೋಪದೋಷಗಳು ಸಾಕಷ್ಟಿವೆ. ನಾನು ಮುಖ್ಯ ಮಂತ್ರಿಯಾಗಿದ್ದಾಗ ಶ್ರೀ ಜೆ.ಬಿ. ಮಲ್ಲಾರಾಧ್ಯರು ತಯಾರಿಸಿದ ವರದಿಯಲ್ಲಿ ಇದನ್ನೆಲ್ಲ ಪ್ರಸ್ತಾಪಿಸಲಾಗಿದೆ. ಈಚೆಗೆ ಬಂದ ಕೊಠಾರಿ ಆಯೋಗದ ವರದಿಯಲ್ಲಿ ಅದೇ ವಿಷಯಗಳನ್ನು ಪುನರುಚ್ಚರಿಸಲಾಗಿದೆ.

ಶಿಕ್ಷಣದಲ್ಲಿ ನಮ್ಮ ಸಂಸ್ಕೃತಿ ಮತ್ತು ಸರ್ವಧರ್ಮ ಸಾರಕ್ಕೆ ಸಂಬಂಧಿಸಿದ ಪಾಠವೇ ಇರಬೇಕೆಂಬುದು ನಮ್ಮ ಅಭಿಪ್ರಾಯ. ಪ್ರಾಥಮಿಕ ಹಂತದಲ್ಲೇ ಶಿಕ್ಷಣದ ಬಗ್ಗೆ ಹೆಚ್ಚು ಗಮನಕೊಡಬೇಕೆಂಬುದು ಅನೇಕರ ವಾದ. ಆದರೆ ಈ ವಿಷಯದಲ್ಲಿ ನನ್ನ ನಿಲುವೇ ಬೇರೆ. ಅವರ ವಾದ ಕೆಲಮಟ್ಟಿಗೆ ಸರಿಯೆನಿಸಿದರೂ, ವಿಶ್ವವಿದ್ಯಾನಿಲಯ ಹಂತದಲ್ಲಿ ಅತ್ಯಂತ ಹೆಚ್ಚು ಎಚ್ಚರ ವಹಿಸಬೇಕೆಂಬುದು ನನ್ನ ಅಭಿಮತ. ಏಕೆಂದರೆ ನಮಗೆ ಬೇಕಾದ ತಜ್ಞರು, ಪ್ರಾಜ್ಞರು,. ದೇಶಭಕ್ತರು, ಧರ್ಮನಿಷ್ಠರು, ಹೊರಬರಬೇಕಾದುದು ಇಲ್ಲಿಂದಲೇ. ಈ ದೃಷ್ಟಿಯಿಂದ ನಮ್ಮ ವಿಶ್ವವಿದ್ಯಾನಿಲಯಗಳು ಸಮಾಜದ ನಾಯಕರನ್ನು ತಯಾರು ಮಾಡುವ ಪ್ರಯೋಗಾಲಯಗಳಾಗಬೇಕು. ವಿಶ್ವವಿದ್ಯಾನಿಲಯಗಳಿಂದ ಹೊರಬಂದ ವ್ಯಕ್ತಿಗಳೇ ನೇರವಾಗಿ ಸರ್ಕಾರ ಮತ್ತು ಸಮಾಜದ ವಿವಿಧ ಸ್ಥಾನಗಳಲ್ಲಿ ಅಧಿಕಾರ ವಹಿಸಿಕೊಳ್ಳಬೇಕಾಗುತ್ತದೆಂಬುದನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕು.

ಆದರೆ ಇಂದಿನ ಕೆಲವು ವಿಶ್ವವಿದ್ಯಾನಿಲಯಗಳ ಆವರಣದಲ್ಲಿ ರಾಜಕೀಯ ವಿಷಗಾಳಿ ಬೀಸಿ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳ ಭವಿಷ್ಯವೇ ಹಾಳಾಗುವಂತಾಗಿದೆ. ಇದರ ಬಗ್ಗೆ ಎಷ್ಟು ಬೇಗ ಎಚ್ಚರ ವಹಿಸಿದರೆ ಅಷ್ಟು ಕ್ಷೇಮ.

ಪ್ರಶ್ನೆ : ಇಂದಿನ ಯುವ ಜನಾಂಗ'ವ್ಯವಸ್ಥೆ'ಯ ವಿರುದ್ಧ ಹೋರಾಡಿ ನವ ಸಮಾಜ ನಿರ್ಮಿಸಬೇಕೆನ್ನುತ್ತದೆ. ಇದಕ್ಕೆ ತಮ್ಮ ಅಭಿಪ್ರಾಯ ?

ಯುವಜನಾಂಗ ಹೋರಾಡಲಿ, ಬಿಡಲಿ ಅಥವಾ ನಾನು ಬೇಕೆನ್ನಲಿ, ಬಿಡಲಿ ಬದಲಾವಣೆ ಆಗುವುದಂತೂ ನಿಜ. ಬದಲಾವಣೆ ನಿಸರ್ಗ ಸೂತ್ರ. ಒಂದು ಕಾಲದಲ್ಲಿ ಚಾತುರ್ವರ್ಣ್ಯ ಧರ್ಮ, ಪವಿತ್ರವೆಂದು ಪರಿಗಣಿಸಲ್ಪಟ್ಟಿತ್ತು. ಆದರೆ ಈಗ ಅದು

ಪಾಪದ ಸೂತ್ರವಾಗಿದೆ. ಪ್ರಯತ್ನವಿಲ್ಲದೆಯೇ ಪರಿವರ್ತನೆಯಾಗುವುದು ಪ್ರಕೃತಿ ನಿಯಮ. ಆವುದೋ ಅಂತಃಪ್ರೇರಣೆ ಬದಲಾವಣೆಗೆ ಇಂಬು ಕೊಡುತ್ತದೆ. ಕಾಲಕಾಲಕ್ಕೆ ಸಮಾಜ ಹೊಸದಾಗುತ್ತಲೇ ಬಂದಿದೆ.

ಬದಲಾವಣೆಯೇ ಬದುಕು. ಅದನ್ನು ಯಾರೂ ಒಪ್ಪಬೇಕು. ಆದರೆ ಕೆಲವೊಂದು ಮೂಲ ಮೌಲ್ಯಗಳಿವೆ. ಪ್ರೀತಿ, ಸಹನೆ, ಸಹಕಾರ ಮೊದಲಾದ ಜೀವನ ಸೂತ್ರಗಳಿವೆ. ಬದಲಾವಣೆಯ ಹೆಸರಿನಲ್ಲಿ ಇಂತಹ ಸೂತ್ರಗಳನ್ನು ಮಣ್ಣುಪಾಲು ಮಾಡಬಾರದು.

ಪ್ರಶ್ನೆ : ಜನಸಮೂಹದಲ್ಲಿ ಇಂತಹ ಮೌಲ್ಯಗಳ ಅರಿವುಂಟಾಗಲೆಂದೇ ತಾವು ಮುಖ್ಯಮಂತ್ರಿಯಾಗಿದ್ದಾಗ ಸಂಸ್ಕೃತಿ ಪ್ರಸಾರ ಯೋಜನೆಯನ್ನು ಜಾರಿಗೆ ತಂದಿದ್ದಿರಿ. ಆದರೆ ಅದು ಯಶಸ್ವಿಯಾದಂತೆ ಕಾಣಲಿಲ್ಲ.

ಅದು ಯಶಸ್ವಿಯಾಗಲಿಲ್ಲವೆಂದು ಹೇಳಲಾರೆ. ಅದು ಹೆಚ್ಚುಕಾಲ ನಡೆಯುವಷ್ಟರಲ್ಲಿ ನನ್ನ ನಂತರದ ಆಡಳಿತಗಾರರು ಆ ಕಾರ್ಯಕ್ರಮವನ್ನೇ ನಿಲ್ಲಿಸಿದರು. ವಾಸ್ತವವಾಗಿ ಆ ಕಾರ್ಯಕ್ರಮದಲ್ಲಿ ನಮ್ಮ ನಾಡಿನ ಅನೇಕ ಪ್ರಸಿದ್ಧ ಸಾಹಿತಿಗಳೂ ಪಾಲುಗೊಂಡಿದ್ದರು. ಕ್ರಮೇಣ ಕೆಲವು ಅನರ್ಹ ವ್ಯಕ್ತಿಗಳು ಪ್ರಸಾರ ಕಾರ್ಯಕ್ಕೆ ಸೇರಿಕೊಂಡಿದ್ದು ನಿಜ. ಆದರೆ ಅಂತಹ ದೋಷಗಳನ್ನು ಸರಿಪಡಿಸಬಹುದಾಗಿತ್ತು.

ಏನೇ ಇದ್ದರೂ, ಇಂದಿನ ಪರಿಸರದಲ್ಲಿ ಅಂತಹ ಒಂದು ಕಾರ್ಯಕ್ರಮವನ್ನು ಸರ್ಕಾರ ನಡೆಸುವುದು ಕಷ್ಟ.

ಪ್ರಶ್ನೆ : ಧರ್ಮ ಪ್ರಸಾರಕ್ಕಾಗಿಯೇ ಇರುವ ಮಠ ಮಾನ್ಯಗಳು ಈ ಸಂಸ್ಕೃತಿ ಪ್ರಸಾರವನ್ನು ಕೈಗೆತ್ತಿಕೊಳ್ಳಬಹುದಲ್ಲವೆ?

ಅದು ನಿಜಕ್ಕೂ ಒಳ್ಳೆಯ ಸಲಹೆ. ಜನತೆಗೆ ನೈತಿಕ ಶಿಕ್ಷಣ ಒದಗಿಸುವ ಹೊಣೆಯನ್ನು ಮಠ ಮಾನ್ಯಗಳೇ ಹೊರಬೇಕಾದುದು ಅಗತ್ಯ. ಆದರೆ ಇದರಲ್ಲಿ ಒಂದು ಅಡ್ಡಿಯೆಂದರೆ ನಮ್ಮಲ್ಲಿರುವ ನಾನಾ ಬಗೆಯ ಸಿದ್ಧಾಂತಗಳು, ಧರ್ಮಗಳು. ಒಂದು ಧರ್ಮಕ್ಕೆ ಸೇರಿದ ವ್ಯಕ್ತಿ ಮಾತನಾಡುವ ಕಡೆ ಇನ್ನೊಂದು ಧರ್ಮದವರು ಸೇರುವುದು ಕಷ್ಟ. ಇದಕ್ಕಾಗಿ ಎಲ್ಲ ಮಠ ಮಾನ್ಯದವರೂ ಒಂದೆಡೆ ಸೇರಿ ಒಂದು ಸಮಿತಿ ರಚಿಸಿಕೊಂಡು ಯಾವುದೇ ಪಂಥ ಪಂಗಡದ ಕಟ್ಟು ಪಾಡಿಲ್ಲದ ಮತ್ತು ಎಲ್ಲ ಮಾನವರಿಗೂ ಅನ್ವಯಿಸುವಂತಹ ಕೇವಲ ಜೀವನ ಸಂಸ್ಕೃತಿಯನ್ನು ಪ್ರಸಾರ ಮಾಡುವ ಕಾರ್ಯಕ್ರಮ ಹಾಕಿಕೊಳ್ಳಬಹುದು.

760-4

ಇದಕ್ಕಾಗಿ ಪರಿಣಾಮಕಾರೀ ಸಂಸ್ಕೃತಿ ಪ್ರಚಾರಕರನ್ನು ತರಬೇತಿ ಮಾಡುವ ಒಂದು ಸಂಸ್ಥೆಯನ್ನೇ ತೆರೆಯಬಹುದು. ಅಂತಹ ಸಂಸ್ಥೆಯಲ್ಲಿ ತರಬೇತಿ ಪಡೆದ ವ್ಯಕ್ತಿಗಳು ಜನ ಸಮೂಹದಲ್ಲಿ ಜೀವನ ಪ್ರಜ್ಞೆ ಮೂಡಿಸಿ ರಾಷ್ಟ್ರೀಯ ದೃಷ್ಟಿ ಹಾಗೂ ಶ್ರಮದ ದುಡಿಮೆಯ ಮನೋಭಾವವನ್ನು ಬೆಳೆಸುವಂತಾಗಬೇಕು.

ಪ್ರಶ್ನೆ : ಸಂಸ್ಕೃತಿಯ ವಿಷಯ ಬಂದಾಗ ನಮ್ಮ ಪ್ರಸ್ತುತ ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ತಮ್ಮ ಅಭಿಪ್ರಾಯ ಕೇಳಬೇಕೆನಿಸುತ್ತದೆ.

ಈ ಬಗ್ಗೆ ನನಗೆ ಸಂತೋಷವಿದೆ. ನಮ್ಮ ಕನ್ನಡ ಸಾಹಿತ್ಯ ಚಟುವಟಿಕೆಗಳು ಬೃಹತ್ತಾಗಿ ಬೆಳೆಯುತ್ತಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯವಂತೂ ಅಭಿಮಾನ ತರುವಂತಹದು.

ಈ ಸಲ ಬೆಳಗಾವಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನಕ್ಕೆ ಬಸವರಾಜ ಕಟ್ಟೀಮನಿ ಅವರನ್ನು ಆರಿಸಿದುದು ನಿಜಕ್ಕೂ ಸ್ವಾಗತಾರ್ಹ ವಿಷಯ: ಹೊಸ ಆಯ್ಕೆ. ಕಟ್ಟೀಮನಿಯವರು ಕಡು ಬಡತನದ ಕುಟುಂಬದಲ್ಲಿ ಹುಟ್ಟಿ ಬಂದವರು. ಸ್ವಶಕ್ತಿಯಿಂದ ಮೇಲಕ್ಕೆ ಬಂದವರು. ಅಂತಹ ವ್ಯಕ್ತಿ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಆಯ್ಕೆಯಾದುದು ಯಾರಿಗಾದರೂ ಹರ್ಷವುಂಟುಮಾಡುವ ಸಂಗತಿ.

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇತ್ತೀಚೆಗೆ ಹೆಚ್ಚು ಹೆಚ್ಚು ವಿಚಾರ ಪ್ರಚೋದಕ ಕೃತಿಗಳು ಹೊರಬರುತ್ತಿವೆ. ಅನೇಕ ಯುವ ಬರೆಹಗಾರರು ಹೊಸ ಕ್ರಾಂತಿಯ ಹೆಜ್ಜೆ ಇಟ್ಟಿರುವುದು ಸಂತೋಷದಾಯಕ.

ಆದರೆ ಆಕಾಶವಾಣಿಯ ವಿಷಯದಲ್ಲಿ ನನ್ನ ಅಸಮಾಧಾನವಿದೆ. ಅದರಲ್ಲಿ ಬರುವ ಕಾರ್ಯಕ್ರಮಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಮಾಜದ ಎಲ್ಲ ವರ್ಗಗಳಿಗೂ ಪ್ರಾತಿನಿಧ್ಯವಿರುವಂತೆ ಕಂಡುಬರುತ್ತಿಲ್ಲ. ಆಕಾಶವಾಣಿ ಕಾರ್ಯಕ್ರಮಗಳು ಕೆಲವೇ ಜನರ ಸ್ವತ್ತಾಗಬಾರದು. ಹೊಸ ಹೊಸ ಪ್ರತಿಭೆಗಳನ್ನು ಗುರುತಿಸಿ ಅವರಿಗೆ ಅವಕಾಶ ಕೊಡಬೇಕು.

ಪ್ರಶ್ನೆ : ಸಮೂಹ ಮಾಧ್ಯಮಗಳಾದ ಈ ಆಕಾಶವಾಣಿ, ಚಲನಚಿತ್ರ, ದೂರದರ್ಶನ, ಪತ್ರಿಕೆಗಳು-ಇವುಗಳ ಒಡೆತನದ ಬಗ್ಗೆ ತಮ್ಮ ನಿಲುವೇನು?

ಬಹುಸಂಖ್ಯಾತ ಅನಕ್ಷರಸ್ಥರಿರುವ ನಮ್ಮ ದೇಶದಲ್ಲಿ ಆಕಾಶವಾಣಿ, ಚಲನಚಿತ್ರ, ದೂರದರ್ಶನ ಈ ಮಾಧ್ಯಮಗಳು ಅತ್ಯಂತ ಪರಿಣಾಮಕಾರಿ, ಜನರಲ್ಲಿ ನೀತಿಗುಣ ಬೆಳೆಯಲು ಮತ್ತು ಸಮಕಾಲೀನ ವಿಷಯಗಳ ಅರಿವು ಉಂಟಾಗಲು ಮತ್ತು ಮುಖ್ಯವಾದ ಮನರಂಜನೆ ಒದಗಿಸಲು ಈ ಮಾಧ್ಯಮಗಳನ್ನು ಮತ್ತಷ್ಟು ಬಲಪಡಿಸಬೇಕು. ಇನ್ನು ಓದು, ಬರಹ ಬಲ್ಲವರಿಗಾಗಿ ಪತ್ರಿಕೆಗಳ ಪ್ರಸಾರವೂ ಹೆಚ್ಚಬೇಕು. ಆದರೆ ಈ ಎಲ್ಲ ಮಾಧ್ಯಮಗಳ ಒಡೆತನ ಸರ್ಕಾರೀ ಹಿಡಿತದಲ್ಲಿರಬಾರದು. ಅವು ಸ್ವತಂತ್ರವಾಗಿದ್ದಷ್ಟೂ ವೈವಿಧ್ಯಪೂರ್ಣವಾಗಿ, ವಿಮರ್ಶಾತ್ಮಕವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತದೆ.

ಪ್ರಶ್ನೆ : ವಿಷಯಗಳು ಹೊಳೆದಂತೆ ಪ್ರಶ್ನೆ ಕೇಳುತ್ತಿದ್ದೇನೆ. ದಯವಿಟ್ಟು ಕ್ಷಮಿಸಬೇಕು.

ಪರವಾಗಿಲ್ಲ, ಕೇಳಿ.

ಪ್ರಶ್ನೆ : ಗ್ರಾಮಾಂತರ ಪ್ರದೇಶದ ಜನರ ಏಳಿಗೆ ಬಗ್ಗೆ ನಮ್ಮದು ಬರಿ ಬಾಯಿಮಾತಿನ ಸಹಾನುಭೂತಿಯೆನಿಸುತ್ತದೆ. ನಗರದ ಜನಕ್ಕೆ ಹೋಲಿಸಿದರೆ ಅವರ ಜೀವನ ಕಷ್ಟದಾಯಕವಲ್ಲವೆ?

ನಿಜ. ಹಳ್ಳಿಗರ ಬಡತನ ಅಸದಳವಾಗಿದೆ. ಬಡವರ ಸಂಖ್ಯೆ ಕೋಟಿ ಕೋಟಿ. ಇವರನ್ನೆಲ್ಲ ಉದ್ಧಾರಮಾಡುವ ಹಂಬಲ ಇರುವುದು ಅಗತ್ಯ. ಆದರೆ ಈ ಕಾರ್ಯ ಅಷ್ಟು ಸುಲಭವಲ್ಲವೆಂಬ ಮಾತು ಅಷ್ಟೇ ಸತ್ಯ. ಇದು ದಶಕಗಳಲ್ಲಿ ಆಗುವುದಲ್ಲ. ಕ್ರಮೇಣ ನಡೆಸುವಂತಹ ಕೆಲಸ. ಇಟ್ಟಿಗೆಯ ಮೇಲೆ ಮತ್ತೊಂದಿಟ್ಟಿಗೆಯಿಟ್ಟು ಮನೆ ಕಟ್ಟುವಂತೆ ಒಂದೊಂದೇ ಮೆಟ್ಟಿಲು ಹತ್ತಿಸಿ ಗುರಿ ಮುಟ್ಟಿಸಬೇಕಾಗುತ್ತದೆ.

ಅಮೇರಿಕಾದಂತಹ ದೇಶದಲ್ಲೇ ಜನ ಸಾಮಾನ್ಯರು ಬಡತನದ ಬೇನೆಯಿಂದ ದೂರವಾಗಲು ಒಂದು ಶತಮಾನವೇ ಹಿಡಿಯಿತು. ಇನ್ನು ಕೋಟ್ಯಂತರ ಜನಸಂಖ್ಯೆಯಿರುವ ನಮ್ಮ ದೇಶದಲ್ಲಿ ಇದು ಎಷ್ಟು ಕಷ್ಟ ಎಂದು ಹೇಳಬೇಕಾಗಿಲ್ಲ.

ಮುಖ್ಯವಾಗಿ ಬಡತನ ನಿವಾರಣೆ ಬಡವರಿಂದಲೇ ಆಗಬೇಕು. ಸ್ವಪ್ರಯತ್ನಕ್ಕಿಂತ ಮಿಗಿಲಾದುದು ಬೇರಾವುದೂ ಇಲ್ಲ. ಆದರೆ ಬಡವರ ಪ್ರಯತ್ನಕ್ಕೆ ಶ್ರೀಮಂತರು ಮತ್ತು ಸರ್ಕಾರ ಪೂರ್ಣವಾಗಿ ನೆರವಾಗಬೇಕು. ಬಡತನ ಹೋಗಬೇಕಾದರೆ ಹೊಲಗಳಲ್ಲಿ, ಕಾರ್ಖಾನೆಗಳಲ್ಲಿ ಉತ್ಪನ್ನ ಹೆಚ್ಚಬೇಕು. ಇದಕ್ಕೆ ಶ್ರಮದ ದುಡಿಮೆಯೊಂದೇ ದಾರಿ. ಆದರೆ ಇಂದು ನಮ್ಮ ಕೆಲವು ರಾಜಕಾರಣಿಗಳು ಆತುರದಲ್ಲಿ ಬಡತನ ನಿವಾರಣೆಯ

ಭಾಷಣ ಮಾಡುತ್ತಾರೆ; ನಿವಾರಣೆಯ ಭ್ರಾಂತಿ ಹುಟ್ಟಿಸುತ್ತಾರೆ ಮತ್ತು ಅದು ಬೇರೆ ಯಾರಿಂದಲೋ ಆಗ ಬೇಕೆಂದು ಸುಳ್ಳು ಆಸೆ ಸೃಷ್ಟಿಸುತ್ತಾರೆ. ಆದರೆ ವಾಸ್ತವವಾಗಿ ಆಗಬೇಕಾಗಿರುವುದು ದುಡಿಮೆ; ದುಡಿಮೆಯ ಮೂಲಕ ಸಂಪಾದನೆ.

ಪ್ರಶ್ನೆ : ಗ್ರಾಮೀಣರ ಬಗ್ಗೆ ಮತ್ತೊಂದು ಮಾತು. ನಾನಾ ಉದ್ಯೋಗಗಳಿಗಾಗಿ ಲೋಕಸೇವಾ ಆಯೋಗ ಅಥವಾ ಇತರ ಆಯ್ಕೆ ಸಮಿತಿಗಳು ನಡೆಸುವ ಪರೀಕ್ಷೆಗಳಲ್ಲಿ ಗ್ರಾಮಾಂತರ ಪ್ರದೇಶಗಳಿಂದ ಬರುವ ಅಭ್ಯರ್ಥಿಗಳು ನಗರ ಪ್ರದೇಶದ ಅಭ್ಯರ್ಥಿಗಳೊಂದಿಗೆ ಸ್ಪರ್ಧಿಸುವುದು ಕಷ್ಟವಲ್ಲವೆ? ಗ್ರಾಮೀಣ ಅಭ್ಯರ್ಥಿಗಳಿಗಾಗಿ ಕೆಲವೊಂದು ಭಾಗದ ಮೀಸಲು ವ್ಯವಸ್ಥೆ ಇರುವುದು ಅಗತ್ಯವಲ್ಲವೆ?

ಮಹತ್ವದ ಪ್ರಶ್ನೆಯನ್ನೇ ಕೇಳಿದಿರಿ. ನಾನೂ ಈ ವಿಷಯ ಹೇಳಬೇಕೆಂದಿದ್ದೆ. ಈ ಬಗ್ಗೆ ಬಹಳ ದಿನಗಳಿಂದಲೂ ವಿಚಾರ ನಡೆದಿದೆ. ಆದರೆ ಇನ್ನೂ ಪರಿಹಾರ ಕಂಡಿಲ್ಲ. ಇದರಲ್ಲಿ ವಿಚಿತ್ರವೆಂದರೆ ನಮ್ಮ ಶಾಸನ ಸಭೆಗಳಲ್ಲಿ, ಲೋಕಸಭೆಯಲ್ಲಿ, ಮಂತ್ರಿಗಳಲ್ಲಿ ಶೇಕಡ 90 ರಷ್ಟು ಭಾಗ ಗ್ರಾಮಾಂತರದಿಂದಲೇ ಬಂದವರು. ಆದರೂ ತಾವು ಆರಿಸಿಬಂದ ಪ್ರದೇಶದ ಜನರ ಹಿತರಕ್ಷಣೆಯ ಬಗ್ಗೆ ಅವರು ಚಿಂತನೆ ಮಾಡದಿದ್ದರೆ ಹೇಗೆ? ಅವರೆಲ್ಲ ಮನಸ್ಸು ಮಾಡಿದರೆ ಕೇವಲ ಒಂದು ವಾರದಲ್ಲಿ ಆಗುವ ಕೆಲಸ. ಆದರೂ ಅವರು ಸುಮ್ಮನಿರುವುದು ಎಂತಹ ವಿಪರ್ಯಾಸ? ಹಿಂದಿನಿಂದ ನಡೆದುಕೊಂಡು ಬಂದಿದ್ದನ್ನು ಬದಲಾಯಿಸುವುದೇಕೆ ಎಂದು ಸುಮ್ಮನಿರಬಹುದೆಂದು ಕಾಣುತ್ತದೆ. ವಾಸ್ತವವಾಗಿ, ಸಂಪ್ರದಾಯ ಶರಣರೆಂದರೆ ಇವರೇ ಎಂದು ಹೇಳಬೇಕು.

ಯಾವುದೇ ವ್ಯಕ್ತಿಗೆ ಉದ್ಯೋಗ ನೀಡುವಾಗ ಕೇವಲ ಪರೀಕ್ಷೆಯ ಅಂಕಿಗಳ ಮೇಲೆ ನಿರ್ಧರಿಸಿದರೆ ಆಗದು. ವ್ಯಕ್ತಿಯ ಆಸಕ್ತಿ, ಕಾರ್ಯನಿಷ್ಠೆ - ಇವುಗಳನ್ನು ಪರೀಕ್ಷಿಸಬೇಕು. ಸರ್ಕಾರಿ ಉದ್ಯೋಗ ನೀಡುವ ಮುನ್ನ ಒಂದು ವರ್ಷಕಾಲ ಸಾಮಾಜಿಕ ಸೇವೆ ಸಲ್ಲಿಸಬೇಕೆಂಬ ಕಡ್ಡಾಯವಿರಬೇಕು. ಕ್ಷೇತ್ರಸೇವೆಯಲ್ಲಿ ಆತ ಯಶಸ್ವಿಯಾದರೆ ಅದು ಉದ್ಯೋಗ ನೀಡಿಕೆಗೆ ಆಧಾರವಾಗಬೇಕು. ಆ ದೃಷ್ಟಿಯಿಂದಲೇ ಹಿಂದೆ ರಾಷ್ಟ್ರೀಯ ಸಾಮಾಜಿಕ ಸೇವಾ ಯೋಜನೆಯನ್ನು ಜಾರಿಗೆ ತಂದುದು. ಆದರೆ ಆ ಯೋಜನೆಯನ್ನು ಪರಿಣಾಮಕಾರಿಯಾಗಿ ಮುಂದುವರಿಸದಿದ್ದದು ಅನ್ಯಾಯ.

ಇನ್ನು ಲೋಕಸೇವಾ ಆಯೋಗದಲ್ಲಿ ಅಭ್ಯರ್ಥಿಗಳಿಗೆ ಹಾಕುವ ಪ್ರಶ್ನೆಗಳ ವಿಚಾರ. ನಗರ ಹಾಗೂ ಗ್ರಾಮಾಂತರ ಪ್ರದೇಶದಿಂದ ಬಂದ ಇಬ್ಬರು ವಿದ್ಯಾರ್ಥಿಗಳಿಗೂ ನಗರ ಸಂಬಂಧದ ಪ್ರಶ್ನೆಗಳನ್ನೇ ಹಾಕುವುದು ಕಂಡುಬರುತ್ತದೆ. ಆಗ ಸಹಜವಾಗಿಯೇ ಗ್ರಾಮೀಣ ಅಭ್ಯರ್ಥಿ ವಿಫಲನಾಗುತ್ತಾನೆ. ಆದ್ದರಿಂದ ಆಯೋಗದ ಸದಸ್ಯರಿಗೂ ಗ್ರಾಮೀಣ ಜೀವನದ ಹಿನ್ನೆಲೆ ತಿಳಿದಿರಬೇಕು. ಆಯಾ ಪರಿಸರದ ಅಭ್ಯರ್ಥಿಗೆ ಅವನ ಪರಿಸರಕ್ಕೂ ಹೊಂದಿಕೊಂಡ ಪ್ರಶ್ನೆಗಳನ್ನೇ ಕೇಳಬೇಕು. ಏನೇ ಇರಲಿ, ಇಂತಹ ಪರೀಕ್ಷೆಗಳಲ್ಲಿ ಗ್ರಾಮಾಂತರ ಅಭ್ಯರ್ಥಿಗಳ ಹಿತ ರಕ್ಷಣೆಯ ಬಗ್ಗೆ ನಮ್ಮ ಶಾಸಕರು ಗಂಭೀರವಾಗಿ ವಿಚಾರ ಮಾಡಬೇಕಾಗಿದೆ.

ಪ್ರಶ್ನೆ : ನಮ್ಮ ರಾಜ್ಯಕ್ಕೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಕೇಳಬೇಕೆಂದಿದ್ದೇನೆ. ರಾಷ್ಟ್ರದ ಇತರ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದ ಸ್ಥಿತಿಗತಿ ಏನು? ರಾಜ್ಯದ ಭವಿಷ್ಯದ ಬಗ್ಗೆ ತಮ್ಮ ಅನಿಸಿಕೆಗಳೇನು?

ನೋಡಿ, ಸಾಮಾನ್ಯವಾಗಿ ರಾಜಕಾರಣಿಗಳಲ್ಲಿ ಒಂದು ಹವ್ಯಾಸ. ತಾವು ಅಧಿಕಾರದಲ್ಲಿದ್ದಾಗ ಮಾತ್ರ ಆಡಳಿತ ಚೆನ್ನಾಗಿತ್ತು ಎಂದು ಇತರರನ್ನು ಹಳಿಯುವುದು. ಇದು ಸರಿಯಲ್ಲ. ನನ್ನಲ್ಲಿ ಅಂತಹ ಭಾವನೆಯೇ ಇಲ್ಲ. ಕಳೆದ ಮೂರು ದಶಕಗಳಲ್ಲಿ ನಮ್ಮ ಭಾರತ ಸಾಧಿಸಿರುವ ಪ್ರಗತಿ ಸಾಮಾನ್ಯವಾದುದಲ್ಲ. ಮಧ್ಯೆ ಮಧ್ಯೆ ಎಷ್ಟೇ ಅಡ್ಡಿ ಆತಂಕಗಳು ಒದಗಿ ಬಂದರೂ ಪ್ರಗತಿ ಕುಂಠಿತವಾಗಲಿಲ್ಲ. ಆದರೆ ಮಿತಿ ಮೀರಿ ಬೆಳೆಯುತ್ತಿರುವ ಜನಸಂಖ್ಯೆ ಪ್ರಗತಿಯ ಫಲವನ್ನೆಲ್ಲ ನುಂಗಿ ಹಾಕಿದೆ ಅಷ್ಟೆ. ನಮ್ಮ ಸಾಧನೆಯ ಬಗ್ಗೆ ಪರದೇಶಗಳು ಈಗ ಎಚ್ಚರಗೊಂಡಿವೆ: ಗೌರವದ ಭಾವನೆ ತಾಳಿವೆ. ವಿಶ್ವದ ರಾಷ್ಟ್ರಗಳ ಪ್ರಥಮ ಸಾಲಿನಲ್ಲಿ ಭಾರತ ಸೇರುತ್ತದೆ ಎಂಬ ಅರಿವು ಉಂಟಾಗಿದೆ.

ಕೃಷಿ-ಕೈಗಾರಿಕೆ ಕ್ಷೇತ್ರಗಳಲ್ಲಿ ಆಗಿರುವ ಸಾಧನೆ ಅದ್ಭುತವಾದುದು. ಈಗ ಅಷ್ಟಿಷ್ಟು ಕೊರತೆಯಿದ್ದರೆ ಅದು ಬೆಳವಣಿಗೆಯ ನೋವು (ಹೆರಿಗೆಯ ನೋವಿದ್ದಂತೆ). ನಮ್ಮ ಕರ್ನಾಟಕವಂತೂ ಅತ್ಯಂತ ಆಶಾದಾಯಕವಾಗಿ ಮುಂದುವರೆದಿದೆ. ನಿಮಗೆ ಒಂದು ಸ್ವಾರಸ್ಯದ ಸಂಗತಿ ಹೇಳುತ್ತೇನೆ. ಭದ್ರಾವತಿ ಸಿಮೆಂಟ್ ಕಾರ್ಖಾನೆಯಲ್ಲಿ ಬೇಡಿಕೆಯಿಲ್ಲದೆ ಬಹಳಷ್ಟು ಸಿಮೆಂಟ್ ದಾಸ್ತಾನು ಉಳಿದಾಗ ಕಾರ್ಖಾನೆಯ ಕೆಲಸವನ್ನೇ ನಿಲ್ಲಿಸಬೇಕೆಂಬ ಸಲಹೆ ಬಂತು. ಆಗ ನಾನು ಮುಖ್ಯಮಂತ್ರಿಯಾಗಿದ್ದೆ. ನಾನು ''ಉತ್ಪಾದನೆಯನ್ನೇಕೆ ನಿಲ್ಲಿಸುವುದು. ಇರುವ ದಾಸ್ತಾನನ್ನು ಬಳಸಿ ನಮ್ಮ ರಸ್ತೆಗಳಿಗೆ ಸಿಮೆಂಟ್ ಹಾಕಿ'' ಎಂದು ಹೇಳಿದೆ. ಆಗ ಸುಮಾರು 150 ಮೈಲಿಯಷ್ಟು ಸಿಮೆಂಟ್ ರಸ್ತೆಯಾಯಿತು. ಆದರೆ ಇಂದಿನ ಸ್ಥಿತಿಯೇ ಬೇರೆ. ಇನ್ನೆಷ್ಟು ಸಿಮೆಂಟ್ ಕಾರ್ಖಾನೆಗಳಾದರೂ ಬೇಕಾಗಿದೆ. ಎಲ್ಲ ಕ್ಷೇತ್ರದಲ್ಲೂ ಬಳಕೆ, ಬೇಡಿಕೆ ಹೆಚ್ಚಾಗಿದೆ. ಇದು ಪ್ರಗತಿಯ ಲಕ್ಷಣ.

ನಮ್ಮ ರಾಷ್ಟ್ರದಲ್ಲಿ ಪಂಜಾಬು, ಹರಿಯಾಣ ರಾಜ್ಯಗಳನ್ನು ಬಿಟ್ಟರೆ ನಮ್ಮ ಕರ್ನಾಟಕ ರಾಜ್ಯ ಉತ್ತಮಸ್ಥಿತಿಯಲ್ಲೇ ಇದೆ ಎಂದು ಹೇಳಬಹುದು.

**ಪ್ರಶ್ನೆ** : ನಮ್ಮ ರಾಜ್ಯದ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳಲು ತಮ್ಮ ಸಲಹೆಗಳೇನು?

ಹೊಸ ಸಲಹೆಯ ಅಗತ್ಯವೇ ಇಲ್ಲ. ಹೊಸ ತೆರಿಗೆಯ ಅಗತ್ಯವೂ ಇಲ್ಲ. ಈಗ ವಿಧಿಸಿರುವ ತೆರಿಗೆಗಳನ್ನು ಸಂಪೂರ್ಣವಾಗಿ ವಸೂಲು ಮಾಡಿದರೆ ಅಂದರೆ ಯಾವುದೇ ಲಂಚದ ಕೈವಾಡಕ್ಕೆ ಅವಕಾಶವಾಗದಂತೆ ಮಾರಾಟ ಹಾಗೂ ಅಬ್ಕಾರಿ ತೆರಿಗೆಗಳನ್ನು ಪ್ರಾಮಾಣಿಕವಾಗಿ ಸಂಗ್ರಹಿಸಿದರೆ ನಾನು ವಿಶ್ವಾಸದಿಂದ ಹೇಳುತ್ತೇನೆ ಈಗಿನ ಆದಾಯದ 3 ರಷ್ಟು ಹೆಚ್ಚು ಆದಾಯ ಬರುತ್ತದೆ. ನಮ್ಮ ಯೋಜನೆಗಳಿಗೆ ಬೇಕಾದ ಖರ್ಚು ಆಗಿ ಉಳಿಯುತ್ತದೆ. ಅದೇ ರೀತಿ ಅರಣ್ಯ ಸಂಪತ್ತಿನ ಆದಾಯದಲ್ಲಿ ಆಗುತ್ತಿರುವ ನಷ್ಟವನ್ನು ತಪ್ಪಿಸಬೇಕು.

**ಪ್ರಶ್ನೆ** : ಆಡಳಿತ ದಕ್ಷತೆ ದೃಷ್ಟಿಯಿಂದ ಸಣ್ಣ ಸಣ್ಣ ರಾಜ್ಯಗಳಿದ್ದರೆ ಸೂಕ್ತವೆಂದು ನನಗನಿಸುತ್ತದೆ. ತಮ್ಮ ಅಭಿಪ್ರಾಯವೇನು ?

ನಾನು ಆಡಳಿತ ಸುಧಾರಣಾ ಆಯೋಗದ ಅಧ್ಯಕ್ಷನಾಗಿ ತಯಾರಿಸಿದ ವರದಿಯಲ್ಲಿ ಈ ಬಗ್ಗೆ ಹೀಗೆ ಬರೆದಿದ್ದೇನೆ:

``No Chief Minister can administer a State efficiently, unless he knows the problems of the State and the officers administering the state".

ಅಂದರೆ ಸಮರ್ಥ ಆಡಳಿತ ನಡೆಸಲು ಅತಿ ವಿಸ್ತಾರವಾದ ಪ್ರದೇಶವಿದ್ದರೆ ಕಷ್ಟವಾಗುತ್ತದೆ. ಸಂಪನ್ಮೂಲಗಳ ದೃಷ್ಟಿಯಿಂದ ತೀರ ಚಿಕ್ಕದಿದ್ದರೂ ಅನುಕೂಲವಲ್ಲ. ವಿವಿಧ ಭಾಷೆ ಮತ್ತು ಸಂಸ್ಕೃತಿಗಳಿರುವ ನಮ್ಮ ದೇಶದಲ್ಲಿ ಒಂದು ರಾಜ್ಯದ ವಿಸ್ತಾರ ಇಷ್ಟೇ ಇರಬೇಕೆಂದು ಹೇಳುವುದು ಕಷ್ಟ. ಆದರೂ ಹೆಚ್ಚು ಭಾಷಾ ವೈವಿಧ್ಯತೆಯಿಲ್ಲದ ಉತ್ತರ ಭಾರತದ ಕೆಲವು ರಾಜ್ಯಗಳಿಗೆ ನೀವು ಹೇಳಿದ ಮಾತು ಅನ್ವಯಿಸುತ್ತದೆ.

**ಪ್ರಶ್ನೆ** : ತಮ್ಮ ವೈಯಕ್ತಿಕ ವಿಚಾರಕ್ಕೆ ಸಂಬಂಧಿಸಿದ ಪ್ರಶ್ನೆಯೊಂದಿಗೆ ಈ ಸಂದರ್ಶನ ಆರಂಭಿಸಿದೆ. ಕೊನೆಯಲ್ಲೂ ಕೆಲವು ಪ್ರಶ್ನೆಗಳನ್ನು ಕೇಳುತ್ತಿದ್ದೇನೆ.

ಅಗತ್ಯವಾಗಿ ಹೇಳಿ.

ಪ್ರಶ್ನೆ : ವಿಧಾನಸೌಧದ ಹೆಸರಿನೊಂದಿಗೆ ತಮ್ಮ ಹೆಸರು ಬೆರೆತು ಹೋಗಿದೆ. ಆ ಕಟ್ಟಡ ನಿರ್ಮಾಣದ ಬಗ್ಗೆ ತಾವು ಆಲೋಚಿಸಿದುದು ಹೇಗೆ?

ವಿದ್ಯಾರ್ಥಿಯಾಗಿದ್ದಾಗಲೇ ನನಗೆ ಭಾರತೀಯ ಸಂಸ್ಕೃತಿಯ ಬಗ್ಗೆ ಅಭಿಮಾನ ಬೆಳೆದಿತ್ತು. ನಮ್ಮಲ್ಲಿ ಅನೇಕರು ಸಾಹಿತ್ಯ, ಕಲೆ, ಶಿಲ್ಪ, ಸಂಗೀತ - ಎಲ್ಲದರಲ್ಲೂ ಪಾಶ್ಚಿಮಾತ್ಯ ಶೈಲಿಯನ್ನು ಅನುಸರಿಸುತ್ತಿದ್ದುದು ದೊಡ್ಡವನಾದಂತೆ ಕಂಡುಬಂದಿತು. ವಾಸ್ತುಶಿಲ್ಪದಲ್ಲಂತೂ ಪರಕೀಯ ಅನುಕರಣೆ ಎಲ್ಲ ಕಡೆಯೂ ಕಾಣುತ್ತಿತ್ತು.

ನಮ್ಮ ಬೇಲೂರು-ಹಳೆಬೀಡು ಕಟ್ಟಡಗಳನ್ನು ಕಂಡಾಗ ಆ ಸುಂದರ ದೃಶ್ಯ ನನಗೆ ನಿತ್ಯ ನೆನಪಾಯಿತು, ನಮ್ಮ ನೆಲದಲ್ಲೇ ಇಂತಹ ಸುಂದರ ವಾಸ್ತು ವಿಧಾನವಿರುವಾಗ ಪರಕೀಯ ಅನುಕರಣೆಯೇಕೆ ಎಂದೆನಿಸುತ್ತಿತ್ತು. ನಾನು ಮುಖ್ಯ ಮಂತ್ರಿಯಾದಾಗ ನನ್ನ ಆ ಯೋಚನೆಯನ್ನು ಕಾರ್ಯಗತಗೊಳಿಸುವ ಅವಕಾಶ ದೊರೆಯಿತು. ನಮ್ಮ ಶೈಲಿಯಲ್ಲೇ ಕರ್ನಾಟಕದ ರಾಜ್ಯಾಡಳಿತ ಕಾರ್ಯಾಲಯ ಕಟ್ಟಡವಿರಬೇಕೆಂಬ ಹಂಬಲ ತುಂಬಿ ಬಂದಿತು. ಆದರಿಂದ ನನಗೆ ಅಭಿಮಾನವೆನಿಸುತ್ತದೆ.

ಪ್ರಶ್ನೆ : ತಮ್ಮ ಜೀವನದಲ್ಲಿ ಇಟ್ಟುಕೊಂಡಿದ್ದ ಆದರ್ಶಗಳನ್ನೆಲ್ಲ ಈಡೇರಿಸಲು ಸಾಧ್ಯವಾಗಿದೆಯೇ?

ಪ್ರಾಥಮಿಕ ಶಾಲೆಯಲ್ಲಿದ್ದಾಗಲೇ ನನ್ನಲ್ಲಿ ಸ್ವಾತಂತ್ರ್ಯ ಹೋರಾಟದ ವಿಷಯ ಅಂಕುರಿಸಿತು. 1920ರಲ್ಲಿ ನಾನು ಲೋಯರ್ ಸೆಕೆಂಡರಿ ತರಗತಿಯಲ್ಲಿದ್ದಾಗ ರಾಜಾಜಿ ಅವರ ಉಪನ್ಯಾಸ ಕೇಳಿ ನಾನು ಸ್ಫೂರ್ತಿ ಪಡೆದೆ. 1921ರಲ್ಲಿ ಖಾದಿ ಧಾರಿಯಾಗಲು ನಿರ್ಧರಿಸಿದೆ. ಸೊಂಟಕ್ಕೆ ಹಾಕುವ ಬೆಲ್ಟು ಸಹ ಖಾದಿಯದೆ ಆಗಿತ್ತು. ಆ ಉತ್ಸಾಹದಲ್ಲೇ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಂಡೆ. ಸ್ವಾತಂತ್ರ್ಯ ಲಭಿಸಿದ ನಂತರ ರಾಜ್ಯ ಹಾಗೂ ರಾಷ್ಟ್ರಮಟ್ಟದ ಉನ್ನತ ಪದವಿಗಳು ಲಭಿಸಿದವು. ದಕ್ಷತೆ ಮತ್ತು ಪ್ರಾಮಾಣಿಕತೆಗಳನ್ನು ಗಮನದಲ್ಲಿಟ್ಟುಕೊಂಡು ಜನಸೇವೆ ಮಾಡಲು ಅವಕಾಶವಾಯಿತು. ಇದೊಂದು ಮಹತ್ತರ ಸಂತಸದ ಸಂಗತಿ.

ನಾನು ಹುಟ್ಟಿದ್ದು ಒಂದು ಸಾಮಾನ್ಯ ಬಡ ಕುಟುಂಬದಲ್ಲಿ. ಹುಟ್ಟಿದ ಹಳ್ಳಿ ನಗರ ಸಂಪರ್ಕಕ್ಕೆ ಬಹುದೂರವಾದ ಒಳನಾಡಿನ ಒಂದು ಚಿಕ್ಕ ಹಳ್ಳಿ. ತಂದೆ ಗ್ರಾಮ ಪಂಚಾಯಿತಿಯ ಮುಖವನ್ನು ನೋಡದಂತಹ ಓರ್ವ ಸಾಮಾನ್ಯ ರೈತ. ಅಂತಹ ಮನೆಯಲ್ಲಿ ಹುಟ್ಟಿ ಉನ್ನತ ಸ್ಥಾನಗಳಿಗೆ ಬಂದುದು ಆಶ್ಚರ್ಯಕರವೆನಿಸುತ್ತದೆ. ನಾನು ನನ್ನ ಜೀವನದಲ್ಲಿ ಸಂಕಲ್ಪಿಸಿದ ಕೆಲವು ಕಾರ್ಯಗಳು ಕೃತಿರೂಪವಾಗಿ ನಿಂತಿರುವುದು ನನಗೆ ಸಮಾಧಾನವುಂಟು ಮಾಡಿದೆ. ಎಲ್ಲಕ್ಕಿಂತ ಹೆಚ್ಚಾಗಿ ನಾನಾ ಕ್ಷೇತ್ರಗಳಲ್ಲಿ ದುಡಿದ ಬಗ್ಗೆ ನನ್ನ ಅಂತರಾತ್ಮಕ್ಕೆ ತೃಪ್ತಿ ತಂದಿದೆ.

'ಸ್ವರಾಜ್ಯ ಪಕ್ಷ' ನನ್ನ ಮತ್ತೊಂದು ವಿಚಾರಧಾರೆ. ಸಾರ್ವಜನಿಕ ಜೀವನದಲ್ಲಿ ಶಿಸ್ತು ಮತ್ತು ಪ್ರಾಮಾಣಿಕತೆ, ಆಡಳಿತ ನಿರ್ವಾಹಕರಲ್ಲಿ ದಕ್ಷತೆ ಮತ್ತು ನಿಷ್ಠೆ ಇವುಗಳನ್ನು ಮೈಗೂಡಿಸಬೇಕೆಂಬುದೇ ನನ್ನ ಹಂಬಲವಾಗಿತ್ತು. ಆದರೆ ಜನ ಅದನ್ನು ಗಮನಕ್ಕೆ ತೆಗೆದುಕೊಳ್ಳಲಿಲ್ಲ. ಮತ್ತೇನನ್ನೂ ಮಾಡಲಾಗದೆ ನಾನು ಸುಮ್ಮನಿದ್ದೇನೆ. ಮಲಿನವಾಗಿರುವ ರಾಜಕೀಯ ಜೀವನ ಸ್ವಚ್ಛವಾಗಬೇಕಾದರೆ ಜನಸಾಮಾನ್ಯರ ಪ್ರಯತ್ನವೂ ಬೇಕು. ದೇವರ ದಯೆಯಾಗಬೇಕು. ಕಾಲ ಚಕ್ರ ಉರುಳುವುದು ಪ್ರಕೃತಿ ನಿಯಮ, ಬದಲಾವಣೆ ಆಗೇ ಆಗುತ್ತದೆ. ಸ್ವಚ್ಛ ರಾಜಕೀಯ ಬರುವಲ್ಲಿ ಸಂಶಯವಿಲ್ಲ.

ಪ್ರಶ್ನೆ : ಇಷ್ಟೆಲ್ಲ ಹೇಳಿದರೂ ತಾವು ಅನೇಕ ವಿಷಯಗಳಲ್ಲಿ ರಾಜೀ ಮನೋಭಾವದವರಲ್ಲವೆಂದು ಜನ ಹೇಳುತ್ತಾರೆ. ವಿರಸ ತಪ್ಪಿಸುವ ಸಂದರ್ಭದಲ್ಲೂ ರಾಜಿ ಮಾಡಿಕೊಳ್ಳಬಾರದೇಕೆ?

ನೋಡಿ, ನನ್ನ ಮನಸ್ಸಿಗೆ ಮಾರ್ಗದರ್ಶನ ಧರ್ಮದ ಬೆಳಕು. ಎಂತಲೇ ವಿಧಾನಸೌಧದ ಮುಂಭಾಗದಲ್ಲಿ ''ಸರ್ಕಾರದ ಕೆಲಸ ದೇವರ ಕೆಲಸ'', ''ಧರ್ಮೋ ರಕ್ಷತಿ ರಕ್ಷಿತಃ'' ಎಂದು ಬರೆಸಿದೆ. ಯಾವುದೇ ಕಾರಣಕ್ಕೆ ಅಧರ್ಮದೊಡನೆ ರಾಜಿಯಾಗಲಾರೆ. ಎಪ್ಪತ್ತೆರಡು ವರ್ಷ ಅಂತಹ ಹೋರಾಟದಲ್ಲೇ ಕಳೆದಿರುವೆ. ಈಗೇಕೆ ಬದಲಾಯಿಸಬೇಕು.?

ಪ್ರಶ್ನೆ : ಸಮಕಾಲಿನ ಹಿರಿಯ ರಾಜಕಾರಣಿಗಳಲ್ಲಿ ತಮಗೆ ಆದರ್ಶವಾಗಿ ಕಂಡವರು ಯಾರೆಂದು ಕೇಳಬಹುದೇ?

ಮಹಾತ್ಮಗಾಂಧಿ, ಜವಾಹರಲಾಲ್ ನೆಹರೂ, ರಾಜಗೋಪಾಲಾಚಾರಿ, ಬಾಬು ರಾಜೇಂದ್ರ ಪ್ರಸಾದ್, ಸರ್ದಾರ್ ವಲ್ಲಭಭಾಯಿ ಪಟೇಲ್. ಮಹಾತ್ಮಗಾಂಧೀ ಮಹಾ ಮಾನವತಾವಾದಿಯಾದರೆ, ಜವಾಹರಲಾಲರು ಮಹಾ ಪ್ರಜಾಪ್ರಭುತ್ವವಾದಿ. ರಾಜಾಜಿ ಓರ್ವ ಮಹಾನ್ ವ್ಯಕ್ತಿ. ರಾಜೇಂದ್ರ ಪ್ರಸಾದ್ ಅವರು ಔದಾರ್ಯದ ಮೂರ್ತಿ. ಸರ್ದಾರ್ ಪಟೇಲ್ ಅವರದು ಉಕ್ಕಿನ ವ್ಯಕ್ತಿತ್ವ.

ಬಹುಶಃ ನನ್ನ ಜೀವನದಲ್ಲಿ ಜವಾಹರ್‌ಲಾಲ್ ನೆಹರೂ ಅವರಂತಹ ಪ್ರಜಾಪ್ರಭುತ್ವನಿಷ್ಠರನ್ನು ಕಂಡಿಲ್ಲವೆಂದೇ ಹೇಳಬಹುದು. ನಿಮಗೆ ಒಂದೆರಡು ಉದಾಹರಣೆಗಳನ್ನು ಕೊಡುವುದು ಸೂಕ್ತವೆಂದು ಭಾವಿಸಿದ್ದೇನೆ.

ನೋಡಿ, ನಾನು ಮುಖ್ಯಮಂತ್ರಿಯಾಗಿ ಆಯ್ಕೆಯಾದಾಗ ಮಂತ್ರಿ ಮಂಡಲ ರಚನೆಯ ಬಗ್ಗೆ ಪ್ರಧಾನಿಯಾಗಿದ್ದ ನೆಹರೂ ಅವರ ಸಲಹೆ ಕೇಳಲು ಹೋಗಿದ್ದೆ. ಆಗ ಅವರು ಹೇಳಿದ ಮಾತು ಇನ್ನೂ ನನಗೆ ನೆನಪಿದೆ:

``Mr Hanumanthaiah, you are a strong man on yourself. I don't adivse you. you form your own cabinet". ಅಧಿಕಾರ ದೃಷ್ಟಿಯಿಂದ ಅವರು ಎಷ್ಟೇ ಪ್ರಬಲರಾಗಿದ್ದರೂ ರಾಜ್ಯಗಳ ವ್ಯವಹಾರದಲ್ಲಿ ಮಧ್ಯೆ ಪ್ರವೇಶಿಸುತ್ತಿರಲಿಲ್ಲ. ಎಂತಹ ಆದರ್ಶ ಅದು.

ಇನ್ನೊಮ್ಮೆ ಬೆಂಗಳೂರಿನಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆದಿತ್ತು. ಆ ಸಂದರ್ಭದಲ್ಲಿ ಚೈನಾದೊಡನೆ ನಡೆದ ಯುದ್ಧದಲ್ಲಿ ಭಾರತಕ್ಕಾದ ಪರಾಭವದ ಬಗ್ಗೆ ಚರ್ಚೆ ಬಂದಾಗ ನಾನೂ ನೆಹರೂ ಅವರ ನೀತಿಯನ್ನು ಅತ್ಯಂತ ತೀವ್ರವಾಗಿ ಟೀಕಿಸಿ ಮಾಡನಾಡಿದೆ. ನಾನು ಮಾತನಾಡಿದ ರೀತಿಯನ್ನು ಕಂಡ ಅನೇಕ ಸದಸ್ಯರು ನೆಹರೂ ಕೋಪಕ್ಕೆ ತುತ್ತಾಗಿ ಪಕ್ಷದಲ್ಲಿ ಮುಂದುವರಿಯುವುದೇ ಕಷ್ಟವಾಗಬಹುದೆಂದು ಭಾವಿಸಿದ್ದರು. ನಾನು ಅದಾವುದನ್ನು ಗಮನಿಸದೆ ಸಭೆ ಮುಗಿದ ನಂತರ ಬಳ್ಳಾರಿ ರಸ್ತೆಯಲ್ಲಿ ನಡೆದುಕೊಂಡು ಬರುತ್ತಿದ್ದಾಗ ಹಿಂದಿನಿಂದ ಬಂದ ನೆಹರೂ ಅವರ ಕಾರು ನನ್ನ ಬಳಿ ನಿಂತಿತು. ಆಗ ನೆಹರೂ ಅವರು ``Mr Hanumanthaiah, why are you walking, come on" ಎಂದು ಬಾಗಿಲು ತೆರೆದು ಜೊತೆಯಲ್ಲಿ ಕೂರಿಸಿಕೊಂಡು ಹೋದರು. ಟೀಕೆ ಟಿಪ್ಪಣಿಗಳು ನ್ಯಾಯವಾಗಿದ್ದರೆ ಅವನ್ನು ಎಂತಹ ಮನೋಭಾವನೆಯಿಂದ ಸ್ವೀಕರಿಸುತ್ತಿದ್ದರೆಂಬುದಕ್ಕೆ ನಾನು ಈ ನಿದರ್ಶನ ಹೇಳಿದೆ.

ನೆಹರೂ ಅವರ ಬಗ್ಗೆ ಅನೇಕ ವಿಷಯಗಳಲ್ಲಿ ನನಗೆ ಭಿನ್ನಾಭಿಪ್ರಯಾಗಳಿದ್ದರೂ, ಅವರನ್ನು ನಾನು ಅತ್ಯಂತ ಗೌರವದಿಂದ ಕಾಣುತ್ತೇನೆ. ಅಂತಹ ಒಬ್ಬ ಮಹಾ ಪ್ರಜಾಪ್ರಭುತ್ವವಾದಿ ಅವರು.

ಪ್ರಶ್ನೆ : ಸಂದರ್ಶನದ ಕೊನೆಯ ಪ್ರಶ್ನೆಗೆ ಮುನ್ನ ಒಂದು ಪ್ರಶ್ನೆ. ತಮ್ಮ ಮುಂದಿನ ಜೀವನದ ಆಲೋಚನೆಗಳೇನು?

ಅಂತಹ ಯಾವುದೇ ವೈಯಕ್ತಿಕ ಆಸೆಯನ್ನು ನಾನು ಇಟ್ಟುಕೊಂಡಿಲ್ಲ. ಈಗಲೂ ನನ್ನ ಕೈಲಾದ ಸೇವೆಸಲ್ಲಿಸುತ್ತಲೇ ಇದ್ದೇನೆ. ಸುಮ್ಮನೆ ಕುಳಿತಿಲ್ಲ. ಈಗ ಆಚರಿಸಲಾಗುತ್ತಿರುವ ನನ್ನ 72ನೆಯ ಹುಟ್ಟುಹಬ್ಬದ ನೆನಪಿಗಾಗಿ 100 ಕೊಠಡಿಗಳ ಒಂದು ವಿದ್ಯಾರ್ಥಿನಿಲಯ ನಿರ್ಮಿಸಬೇಕೆಂದು ಸಂಕಲ್ಪಿಸಿದ್ದೇನೆ. ಅದು ಯಾವುದೇ ಜಾತಿಬೇಧವಿಲ್ಲದೆ ಒಂದು ಆಶ್ರಯವಾಗಬೇಕೆಂಬುದು ನನ್ನ ಆಶಯ.

ವಿಧಾನಸೌಧ ಕಟ್ಟಿಸಿದ ತೃಪ್ತಿ ಇದ್ದರೂ. ವೀರಸೌಧ ನಿರ್ಮಿಸುವ ಹಂಬಲ ತುಂಬಿ ಬಂದಿಲ್ಲ. ಒಂದು ದೇವಾಲಯ ನಿರ್ಮಾಣದ ಸೇವೆ ನನ್ನಿಂದ ಸಂದಿದೆ. ಅಂತಹ ಇನ್ನೊಂದು ದೇವಾಲಯ ನಿರ್ಮಿಸುವ ಮನಸ್ಸು. ಸಮಷ್ಟಿಯ ನೆಮ್ಮದಿಗಾಗಿ ಏನಾದರೂ ಮಾಡುತ್ತಿರಬೇಕೆಂದು ಮನಸ್ಸು ಹಾತೊರೆಯುತ್ತಲೇ ಇದೆ.

ಇನ್ನು ಸರ್ಕಾರದ ಮೂಲಕ ಸೇವೆ. ಈಗಿನ ರಾಜಕೀಯ ಸನ್ನಿವೇಶದಲ್ಲಿ ಸಾಮರಸ್ಯ ಕಾಣುತ್ತಿಲ್ಲ. ಆಡಳಿತ ರಂಗದಲ್ಲಿ ಪುನಃ ಪದವಿ ಒದಗಿ ಬರುವುದೋ ಇಲ್ಲವೋ ಹೇಳಲಾರೆ. ಆ ಬಗ್ಗೆ ಅಪೇಕ್ಷೆಯೇನೂ ಇಲ್ಲ. ಆದರೆ ಒದಗಿ ಬಂದರೆ ಹಿಂಜರಿಯದೆ ದುಡಿಯುವ ವಿಶ್ವಾಸವಿದೆ.

ನನ್ನ ಜೀವನದ 72 ವರ್ಷಗಳ ಹಿಂದಿನ ಹಾಳೆಗಳನ್ನು ತಿರುವಿ ನೋಡಿದರೆ ನನಗೆ ತೃಪ್ತಿಯೆನಿಸುತ್ತದೆ. ಅದು ಒಂದು ರೀತಿಯ ಶಾಂತಿ ತಂದುಕೊಟ್ಟಿದೆ. ಈಗ ನನಗೆ ಯಾವ ಮಾನಸಿಕ ಹೊಯ್ದಾಟವೂ ಇಲ್ಲ. ಆದದೆಲ್ಲಾ ಆಗಲಿ, ದೇವರ ದಯೆಯೊಂದಿರಲಿ' ಎಂದು ನಂಬಿಕೊಂಡಿದ್ದೇನೆ. ಶರಣ ಬಸವಣ್ಣನವರು ಹೇಳುವಂತೆ ''ಬಾರದು ತಪ್ಪದು; ಬಪ್ಪದು ತಪ್ಪದು'' ಈ ಸತ್ಯ ನನ್ನ ಮನಸ್ಸಿಗೆ ಪೂರ್ಣವಾಗಿ ಹಿಡಿಸಿದೆ. ನನ್ನ ಅನುಭವವೂ ಅಷ್ಟೆ. ನಾನು ಮುಖ್ಯಮಂತ್ರಿಯಾಗಿ ಮತ್ತು ಕೇಂದ್ರ ರೈಲ್ವೆ ಸಚಿವನಾಗಿ ರಾಜೀನಾಮೆ ಕೊಟ್ಟಾಗಲೂ ಸಹ ಒಂದು ತಾಸು ನಿದ್ದೆ ಕೆಡಿಸಿಕೊಂಡವನಲ್ಲ.

ಪ್ರಶ್ನೆ : ಕೊನೆಯದಾಗಿ ಒಂದು ಮಾತು. ತಮ್ಮ ಕಲ್ಪನೆಯ ಕರ್ನಾಟಕ ಹೇಗಿರಬೇಕು? ಈ ಸಲದ ಹುಟ್ಟು ಹಬ್ಬದ ಸಂದರ್ಭದಲ್ಲಿ ನಾಡಿನ ಜನಕ್ಕೆ ತಾವು ನೀಡಬಯಸುವ ಸಂದೇಶವೇನು?

ನೀವು ಈ ಮಾತು ಕೇಳಿದ್ದಕ್ಕೆ ನೆನಪಿಗೆ ಬಂದಿತು. ನಾನು ಹಿಂದೊಮ್ಮೆ ಸ್ವಯಂ ಸ್ಫೂರ್ತಿಯಿಂದ ನಮ್ಮ ನಾಡನ್ನು ಕುರಿತು ಬರೆದ ನಾಲ್ಕು ಸಾಲಿನ ಹಾಡೊಂದನ್ನು ನಿಮ್ಮ ಕಡೆ ಕೊಡುತ್ತಿದ್ದೇನೆ. ಇದು ನನ್ನ ಕಲ್ಪನೆಯ ಕರ್ನಾಟಕ! ಕನ್ನಡಿಗರಿಗೆ ನೀಡುವ ಕರೆ!

''ಹನುಮನುದಿಸಿದ ನಾಡು ಬಸವ ಬಾಳಿದ ಬೀಡು; ಆಚಾರ್ಯತ್ರಯರು ಬೆಳಗಿದ ಶ್ರೀ ನಾಡು; ಟೀಪುಸುಲ್ತಾನನ ಶೌರ್ಯ ಪರಾಕ್ರಮದ ನಾಡು ; ವೀರ ಪರಂಪರೆಯ ಈ ನಾಡು; ಧರ್ಮ ದಕ್ಷತೆಗಳ ನೆಲೆವೀಡು ಮಾಡಲು ದುಡಿಯಬೇಕೆಲ್ಲರು ; ಕನ್ನಡ ನೆಲದ ಕಡುಗಲಿಗಳು ನಾವು''.

# I - ಪ್ರಜಾಪ್ರತಿನಿಧಿ ಸಭೆ

## 1. ಅಂಕಿಅಂಶಗಳ ಇಲಾಖೆ ಸ್ಥಾಪಿಸಲು ಸಲಹೆ

ನನ್ನ ಮಿತ್ರರಾದ ಮತ್ತು ನ್ಯಾಷನಲಿಸ್ಟ್ ಪಾರ್ಟಿಯ ಮುಖಂಡರಾದ ಶ್ರೀ ಎಸ್.ಸಿ. ಮಲ್ಲಯ್ಯನವರು ಈ ನಿರ್ಣಯದ ಉದ್ದೇಶವು ಸ್ಪಷ್ಟವಾಗಿಲ್ಲವೆಂದು ತಿಳಿಸಿ, ಹಲವು ಇಲಾಖೆಗಳವರು ಈಗಾಗಲೇ ತಮಗೆ ಸಂಬಂಧಪಟ್ಟ ಅಂಕಿಅಂಶಗಳನ್ನು ಸಂಗ್ರಹಿಸಿರುವುದರಿಂದ ಹೊಸದಾಗಿ ಒಂದು ಇಲಾಖೆಯನ್ನು ಸ್ಥಾಪಿಸುವುದು ಅನವಶ್ಯಕವೆಂದು ಸೂಚಿಸಿದರು. ಯಾವ ದೇಶವೇ ಆಗಲಿ ತನ್ನ ಪುರೋಭಿವೃದ್ಧಿಯನ್ನು ಸಾಧಿಸಬೇಕಾದರೆ ಸದ್ಯದಲ್ಲಿ ತಾನು ಇರುವ ಸ್ಥಿತಿಯನ್ನು ನಿರ್ದಿಷ್ಟವಾಗಿ ಕಂಡು ಹಿಡಿದುಕೊಳ್ಳಬೇಕಾದುದು ಅಗತ್ಯ. ಒಬ್ಬ ಮನುಷ್ಯನಿಗೆ ಖಾಯಿಲೆಯಾದಾಗ ಆ ಖಾಯಿಲೆಯು ಯಾವುದೆಂಬುದನ್ನು ತಿಳಿದುಕೊಂಡರೆ ರೋಗವನ್ನೇ ಅರ್ಧದಷ್ಟು ವಾಸಿ ಮಾಡಿದ ಹಾಗಾಯಿತು ಎಂಬುದಾಗಿ ಒಂದು ಗಾದೆ ಇದೆ. ಹಾಗೆಯೇ ನಮ್ಮ ಪುರೋಭಿವೃದ್ಧಿಯ ವಿಷಯದಲ್ಲಿ ಯೋಚನೆ ಮಾಡುವವರಿಗೆ ದೇಶದ ಸ್ಥಿತಿಯು ನಿರ್ದಿಷ್ಟವಾಗಿ ತಿಳಿಯಬೇಕಾದುದು ಅತ್ಯಗತ್ಯ. ನಮ್ಮ ದೇಶದ ಜನರಲ್ಲಿ ವಿದ್ಯಾಭ್ಯಾಸವು ಬಹಳ ಕಡಿಮೆ. ಆರ್ಥಿಕ ಜೀವನದ ಮಟ್ಟವು ಬಹಳ ಕೆಳಗಿದೆ. ಸಾಧಾರಣವಾಗಿ ಜನರ ಸರಾಸರಿ ಆಯಸ್ಸು 23 ವರ್ಷಗಳು ಮಾತ್ರವೇ ಆಗಿದೆ.

ಪಾಶ್ಚಿಮಾತ್ಯ ದೇಶಗಳಲ್ಲಿ ಜನರು 60-70 ವರ್ಷಗಳು ಜೀವಿಸುತ್ತ ಇರುವುದು ನಮಗೆ ಗೊತ್ತಿರುವ ವಿಷಯವೇ ಆಗಿದೆ. ಪ್ರಪಂಚದ ಪ್ರತಿಯೊಂದು ನಾಗರೀಕ ದೇಶದಲ್ಲಿ ಆಯಾ ದೇಶದ ಜನಜೀವನದ ಸ್ಥಿತಿಯನ್ನು ತಿಳಿದುಕೊಳ್ಳಲು ಅಂಕಿಅಂಶಗಳನ್ನು ಶೇಖರಿಸಿರುತ್ತಾರೆ. ಹಾಗೆ ಶೇಖರಿಸಿದ ಅಂಕಿಅಂಶಗಳ ಆಧಾರದ ಮೇಲೆ ತಮ್ಮಲ್ಲಿದ್ದ ಕೊರತೆಗಳನ್ನು ಗ್ರಹಿಸಿ ತಮ್ಮ ಪುರೋಭಿವೃದ್ಧಿಯನ್ನು ಸಾಧಿಸಲು ಸೂಕ್ತವಾದ ಕಾರ್ಯಕ್ರಮವನ್ನು ಕೈಗೊಳ್ಳುತ್ತಾರೆ. ತಾವು ಯುದ್ಧಾನಂತರ ಪುನರ್ವ್ಯವಸ್ಥೆ ವಿಷಯವಾಗಿ ಮಾತನಾಡುತ್ತಿದ್ದೀರಿ. ಪುನರ್ವ್ಯವಸ್ಥೆ ಆಗಬೇಕಾದರೆ ಜನಜೀವನದ ಕುಂದುಕೊರತೆಗಳೂ ಮತ್ತು ಲೋಪಗಳೂ ತಮಗೆ ತಿಳಿಯಬೇಕಾದುದು ಅತ್ಯಗತ್ಯ. ಅಷ್ಟೇ ಅಲ್ಲ ನಾನು ಒಂದು ಹೆಜ್ಜೆ ಮುಂದೆ ಹೋಗಿ ಈ ಅಂಕಿಅಂಶಗಳೇ ತಾವು ಉದ್ದೇಶಿಸಿರುವ ಪುನರ್ವ್ಯವಸ್ಥೆಯ ಅಸ್ತಿಭಾರವೆಂದೇ ಹೇಳುತ್ತೇನೆ. ಆಯಾ

ಇಲಾಖೆಗೆ ಸಂಬಂಧಪಟ್ಟ ಅಂಕಿಅಂಶಗಳು, ಈಗಲೂ ದೊರೆಯುತ್ತವೆ ಎಂದು ತಾವು ಹೇಳಬಹುದು. ಆದರೆ ಅಷ್ಟೇ ಸಾಲದು. ಶಾಸ್ತ್ರೀಯವಾದ ರೀತಿಯಲ್ಲಿ ಅಂಕಿಅಂಶಗಳನ್ನು ಕ್ರೋಢೀಕರಿಸಿ ಪರೀಕ್ಷಿಸಿ ಮುಂದಕ್ಕೆ ಅದನ್ನು ಮಾರ್ಗಸೂಚಕವಾದ ರೀತಿಯಲ್ಲಿ ಸಂಯೋಜನೆಗೊಳಿಸಬೇಕಾದುದು ಅವಶ್ಯಕ. ತಾವು ಎಲ್ಲಾ ಇಲಾಖೆಗಳಿಂದಲೂ ತರಿಸಿದ ಅಂಕಿಅಂಶಗಳನ್ನು ಕ್ರೋಢೀಕರಿಸಿ, ಪರೀಕ್ಷಿಸಿ ಯಾವ ಕುಂದು ಕೊರತೆಗಳಿವೆ ಎಂಬುದನ್ನು ಗ್ರಹಿಸಿ ತಮಗೆ ಸೂಕ್ತವಾದ ಸಲಹೆಗಳನ್ನು ಕೊಡಲು ಒಂದು ಪ್ರತ್ಯೇಕವಾದ ಇಲಾಖೆ ಇದ್ದರೆ ಬಹಳ ಸಹಾಯವಾಗುತ್ತದೆ. ಮುಂದುವರಿದ ಪ್ರತಿಯೊಂದು ದೇಶದಲ್ಲಿಯೂ ಒಂದು ಸ್ಟ್ಯಾಟಿಸ್ಟಿಕ್ ಇಲಾಖೆ ಇದ್ದೇ ಇದೆ. ಮೈಸೂರು ದೇಶದಲ್ಲಿಯೂ ಈ ರೀತಿ ಒಂದು ಇಲಾಖೆಯನ್ನು ಏರ್ಪಡಿಸಬೇಕೆಂದು ಪ್ರಾರ್ಥಿಸುತ್ತೇನೆ. ಸರ್ಕಾರದವರು ಈ ನಿರ್ಣಯವನ್ನು ಒಪ್ಪಿಕೊಳ್ಳುತ್ತಾರೆಂದು ನಂಬಿದ್ದೇನೆ.

(ಪ್ರಜಾಪ್ರತಿನಿಧಿ ಸಭೆಯ ನಡವಳಿಕೆಗಳು, ದಿ: 8-6-1944)

## 2. ಕಡ್ಡಾಯ ಶಿಕ್ಷಣ ಕುರಿತು

ಈ ನಿರ್ಣಯವನ್ನು ಸೂಚಿಸಿರುವವರು ವಿದ್ಯಾಭ್ಯಾಸವನ್ನು ಮಾತ್ರ ಬಲತ್ಕಾರವಾಗಿ ಮಾಡಿಸಬೇಕೆಂದು ಸೂಚಿಸಿದ್ದಾರೆಯೇ ಹೊರತು ಎಲ್ಲಿಯವರೆಗೆ ಬಲತ್ಕಾರದ ಶಿಕ್ಷಣವನ್ನು ಕೊಡಬೇಕೆಂದು ನಿರ್ದಿಷ್ಟವಾಗಿ ಸೂಚಿಸಿಲ್ಲ. ಒಂದು ವೇಳೆ ಇರುವಂತೆಯೇ ಈ ನಿರ್ಣಯುವನ್ನು ಅಂಗೀಕರಿಸುವುದಾದರೆ ವಿಶ್ವವಿದ್ಯಾನಿಲಯದವರೆಗೂ ಪ್ರತಿಯೊಬ್ಬ ಮನುಷ್ಯನಿಗೂ ಬಲತ್ಕಾರವಾಗಿಯೇ ವಿದ್ಯಾಭ್ಯಾಸವನ್ನು ಕೊಡಬೇಕೆಂದು ಅರ್ಥಮಾಡಬೇಕಾಗಿದೆ. ಆದ್ದರಿಂದ ನಾನು ಈ ನಿರ್ಣಯದ ವ್ಯಾಪ್ತಿಯನ್ನು ನಿರ್ದಿಷ್ಟಗೊಳಿಸುವ ಉದ್ದೇಶದಿಂದ ಒಂದು ತಿದ್ದುಪಡಿಯನ್ನು ಸೂಚಿಸಿರುತ್ತೇನೆ. ನನ್ನ ತಿದ್ದುಪಡಿಯು ಈ ರೀತಿ ಇರುತ್ತದೆ.

''ನಿರ್ಬಂಧ ವಿದ್ಯಾಭ್ಯಾಸ ಕ್ರಮವನ್ನು'' ''ಜಾರಿಗೆ ತರಬೇಕೆಂದು'', ಎಂಬುದಕ್ಕೆ ನಡುವೆ ''ಪ್ರತಿಯೊಬ್ಬ ಹುಡುಗನೂ ಮತ್ತು ಹುಡುಗಿಯೂ ಉಚಿತವಾಗಿ ಮತ್ತು ಒಂದು ಗೊತ್ತಾದ ಕ್ರಮದಲ್ಲಿ ಎಸ್.ಎಸ್.ಎಲ್.ಸಿ. ಮಟ್ಟವನ್ನು ದಾಟುವವರೆಗೂ ಪಡೆಯುವ ಏರ್ಪಾಟನ್ನು'', ಎಂಬುದನ್ನು ಸೇರಿಸಿರತಕ್ಕದ್ದು. ಪ್ರೈಮರಿ ವಿದ್ಯಾಭ್ಯಾಸವನ್ನು ಮಾತ್ರ ಬಲಾತ್ಕಾರವಾಗಿ ಕೊಡಬೇಕೆಂದರೆ ನಾನು

ಒಪ್ಪತಕ್ಕವನಲ್ಲ. ಆದರೆ ವಿದ್ಯಾಭಿವೃದ್ಧಿಗೆ ನಾನು ಪ್ರತಿಬಂಧಕವನ್ನು ತಂದೊಡ್ಡುತ್ತಿರುವೆನೆಂದು ತಾವು ಖಂಡಿತವಾಗಿಯೂ ಭಾವಿಸಬಾರದು. ತಾವು ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ವೆಚ್ಚ ಮಾಡುವ ಹಣವು ಸಾರ್ಥಕವಾಗಿ ಜನರ ವಿದ್ಯಾಭ್ಯಾಸವು ಮುಂದುವರಿಯಬೇಕೆಂಬ ಆಸೆಯಿಂದ ಈ ತಿದ್ದುಪಡಿಯನ್ನು ಸೂಚಿಸುತ್ತಿದ್ದೇನೆ. ಸಂಸ್ಥಾನದ ಜನರು ವಿದ್ಯಾವಂತರಾಗಬೇಕೆಂಬುದೇ ತಮ್ಮ ಧ್ಯೇಯವಾಗಿದ್ದಲ್ಲಿ ತಾವು ಕಡೆಯ ಪಕ್ಷ ಎಸ್.ಎಸ್.ಎಲ್.ಸಿ. ದರ್ಜೆ ಮುಗಿಯುವವರೆಗಾದರೂ ಪ್ರತಿಯೊಬ್ಬನಿಗೂ ಕಡ್ಡಾಯ ವಿದ್ಯಾಭ್ಯಾಸ ಮಾಡಿಸಲೇಬೇಕು. ಇಷ್ಟು ಹೊತ್ತು ಶ್ರೀ ಪಿ.ಎಚ್. ಕೃಷ್ಣರಾಯರು ಯುದ್ಧಾನಂತರ ಪುನರ್ರಚನೆಯ ವಿಚಾರವಾಗಿ ಮಾತನಾಡಿರುತ್ತಾರೆ. ಅದರಲ್ಲಿ ವಿದ್ಯಾಭ್ಯಾಸದ ವಿಷಯವನ್ನು ಸಹ ಪ್ರಸ್ತಾಪಿಸಿರುತ್ತಾರೆ. ಮುಖ್ಯವಾಗಿ ವಿದ್ಯಾಭ್ಯಾಸದ ವಿಚಾರದಲ್ಲಿ ''ಸಾರ್ಜೆಂಟ್ ಸ್ಕೀಮ್'' ಮತ್ತು ''ಸೆಂಟ್ರಲ್ ಅಡ್ವೈಸರಿ ಬೋರ್ಡ್ ಆಫ್ ಎಜುಕೇಷನ್'' ಇವುಗಳ ಸಲಹೆಗಳನ್ನು ಮುಂದಿಟ್ಟುಕೊಂಡು ನಮ್ಮ ದೇಶದ ವಿದ್ಯಾಭ್ಯಾಸದ ರೀತಿಯನ್ನು ಹೇಗೆ ಬದಲಾವಣೆ ಮಾಡಬೇಕು, ವಿದ್ಯಾರ್ಥಿಗಳ ಸಂಖ್ಯೆಯನ್ನು ಅತ್ಯಲ್ಪ ಕಾಲದಲ್ಲಿ ಅಭಿವೃದ್ಧಿಪಡಿಸಲು ಯಾವ ಕಾರ್ಯಗಳನ್ನು ಕೈಗೊಳ್ಳಬೇಕು ಮತ್ತು ಇವಕ್ಕೆ ತಗಲುವ ಖರ್ಚುಗಳೆಷ್ಟು ಅವುಗಳನ್ನು ಒದಗಿಸುವ ಬಗೆ ಹೇಗೆ ಇವೆ ಮೊದಲಾದ ವಿಷಯಗಳನ್ನು ಆಲೋಚಿಸಲು ಎಜುಕೇಷನ್ ಬೋರ್ಡಿನವರೇ ಹದಿನಾಲ್ಕು ಉಪ ಸಮಿತಿಗಳನ್ನು ರಚಿಸಿದ್ದಾರೆ. ನಾಲ್ಕು ಐದು ಉಪ ಸಮಿತಿಗಳ ವರದಿಗಳು ಈಗಾಗಲೇ ಬಂದಿವೆ. ಇತರ ಕಮಿಟಿಗಳ ವರದಿಗಳೂ ಸಹ ಶೀಘ್ರದಲ್ಲಿಯೇ ಬರುವ ನಿರೀಕ್ಷಣೆಯಿದೆ. ಸಂಪದಭಿವೃದ್ಧಿ ಸಮ್ಮೇಳನದವರು ಈ ಸಂಬಂಧದಲ್ಲಿ ಕೆಲಸ ಮಾಡುತ್ತಿದ್ದಾರೆ ಎಂಬುದಾಗಿ ಸೂಚಿಸಿದ್ದಾರೆ. ನಾಲ್ಕು ವರ್ಷಗಳಲ್ಲಿ ಒಂದು ಸಾವಿರ ಪ್ರೈಮರೀ ಸ್ಕೂಲುಗಳನ್ನು ಹೊಸದಾಗಿ ತೆಗೆಯಲು ಮಾಡಿದ್ದ ಯೋಜನೆ ಮೇರೆಗೆ ಮೂರೇ ವರ್ಷದಲ್ಲಿ ಒಂದು ಸಾವಿರ ಸ್ಕೂಲುಗಳನ್ನು ತೆಗೆದಿರುತ್ತೀರಿ, ಸಂತೋಷ. ಇಷ್ಟೆಲ್ಲಾ ಮಾಡಿದರೂ ಸ್ಕೂಲಿಗೆ ಹೋಗುವುದಕ್ಕೆ ಅರ್ಹರಾದ ಮಕ್ಕಳ ಪೈಕಿ ಶೇಕಡ 33ರಷ್ಟು ಮಂದಿ ಮಾತ್ರ ಸ್ಕೂಲಿಗೆ ಹೋಗುತ್ತಿದ್ದಾರೆ. ಮೇರೆಗೆ ತಾವು ಸಂಸ್ಥಾನದ ಪ್ರತಿಯೊಂದು ಮಗುವಿಗೂ ವಿದ್ಯಾಭ್ಯಾಸದ ಸೌಲಭ್ಯವನ್ನು ಕಲ್ಪಿಸಬೇಕಾದರೆ ಎಷ್ಟು ಕಾಲಬೇಕು, ಎಷ್ಟು ಹಣಬೇಕು; ಎಂಬುದನ್ನಾದರೂ ಗಮನಿಸಿ ಯಾವಾಗ ಮಾಡುತ್ತೀರಿ ಎಂದು ನಾವು ಕೇಳಿದರೆ ನಾವು ಪ್ರಯತ್ನ ಮಾಡುತ್ತಲೇ ಇದ್ದೇವೆ ಎಂಬುದಾಗಿ ತಿಳಿಸುತ್ತಲೇ

760-5

ಇದ್ದೀರಿ. ಈ ಸಂಬಂಧದಲ್ಲಿ ಏನು ಮಾಡಬೇಕೆಂಬುದನ್ನು ಯಾರು ನಿರ್ದಿಷ್ಟವಾಗಿ ಮನಸ್ಸಿಗೆ ತೆಗೆದುಕೊಂಡಂತೆ ಕಾಣಲಿಲ್ಲ. ವಿದ್ಯಾಭ್ಯಾಸವು ಮುಂದುವರಿಯುವುದಕ್ಕೆ ಏನು ಮಾಡಬೇಕೆಂದು ಮಾಡಿರುತ್ತೀರಿ ಎಂಬುದಾಗಿ ನಾವು ಪ್ರಶ್ನಿಸಿದರೇ ಹಿಂದೆ ಈ ರೀತಿ ಮಾಡಿಸಿದ್ದೇವೆ ಇಷ್ಟು ಸಭೆಗಳನ್ನೇರ್ಪಡಿಸಿದ್ದೇವೆ ಎಂಬುದಾಗಿ ನಾವು ಕೇಳುವುದಕ್ಕೆ ಮುಂಚೆ ನೆರವೇರಿಸಿದ ಕಾರ್ಯಗಳನ್ನೂ ಮಾತ್ರ ಸೂಚಿಸುತ್ತಿದ್ದೀರಿ, ಭವಿಷ್ಯದಲ್ಲಿ ನಿಮ್ಮ ಕಾರ್ಯಕ್ರಮವೇನೆಂಬುದು ನಮಗಂತೂ ಸ್ಪಷ್ಟವಾಗುವುದಿಲ್ಲ. ನಿಮ್ಮ ದೃಷ್ಟಿ ನೀವು ಹಿಂದೆ ಮಾಡಿರುವ ಕೆಲಸಗಳ ಮೇಲೆ, ಮುಂದೆ ಮಾಡಬೇಕಾದ ಕೆಲಸಗಳ ಕಡೆಗಲ್ಲ ನೀವು ಮುಂದುವರಿಯುತ್ತಿರುವುದು ಮುಖ ಮುಂದಿಟ್ಟುಕೊಂಡಲ್ಲ, ಬೆನ್ನು ಮುಂದಿಟ್ಟುಕೊಂಡು; ಹೀಗೇನೋ ಮುಂದಕ್ಕೆ ಹೋಗಬಹುದು. ಆದರೆ ಬಹಳ ಸಾಮಾನ್ಯವಾಗುತ್ತದೆ.

ಮೋಟಾರು ಗಾಡಿಯನ್ನು ರಿವರ್ಸ್ ಗುರಿಯನ್ನು ತಲುಫಲು ಹೊರಟ ಡ್ರೈವರಂತೆ ನೀವು ವಿದ್ಯಾಭಿವೃದ್ಧಿಯನ್ನು ಹಿಮ್ಮುಖವಾಗಿ ನಡೆಸಿಕೊಂಡು ಮುಂದೆ ಸಾಗಿಸುತ್ತಿದ್ದೀರಿ. ದೃಷ್ಟಿ ಮುಂದೆ ಇರಬೇಕು, ಸುಗಮವಾದ ಓಟ ಬೇಕು, ಹಿಂದುಮುಂದಾಗಿ ನಡೆಯುವ ವಿಧಾನ ಬೇಡ, ತಾವು ಈಗ ಇಲ್ಲಿಯವರೆಗೂ ನಡೆಸಿರುವ ಕಾರ್ಯಕಲಾಪಗಳ ಮೇರೆಗೆ ಲೆಕ್ಕ ಹಾಕಿದರೆ ಸಂಸ್ಥಾನದ ಪ್ರಜೆಗಳೆಲ್ಲರಿಗೂ ವಿದ್ಯಾಭ್ಯಾಸವನ್ನು ಕೊಡಲು 320 ವರ್ಷಗಳಾಗುತ್ತವೆ. ಇಂತಹ ವಿಷಯದಲ್ಲೂ ಸಹ ತಾವು ಒಂದು ನಿರ್ದಿಷ್ಟವಾದ ಕಾರ್ಯಕ್ರಮಗಳನ್ನು ಏರ್ಪಡಿಸಿಕೊಳ್ಳದೆ ಇರುವುದು ಪ್ರತಿಯೊಬ್ಬ ದೇಶಾಭಿಮಾನಿಗೂ ವಿಷಾದಕರವಾಗಿದೆ, ಸಾರ್ಜೆಂಟ್ ಯೋಜನೆಯನ್ನು ತಾವು ಯಾವ ದೃಷ್ಟಿಯಿಂದಲೂ ಪರಿಗಣನೆಗೆ ತೆಗೆದುಕೊಂಡಂತೆ ತೋರಲಿಲ್ಲ. ತಾವು ಈ ವಿಷಯವು ಬಂದಾಗಲೆಲ್ಲಾ, ನಿನ್ನೆ ಮೊನ್ನೆಯ ಮಾತುಗಳನ್ನು ಮಾತ್ರ ಆಡುತ್ತಿರುವಿರೇ ಹೊರತು ನಾಳೆಯ ಮಾತುಗಳನ್ನಾಡುತ್ತಿಲ್ಲ. ವಿದ್ಯಾಭ್ಯಾಸವನ್ನು ಮುಂದುವರಿಸಲು ನಿರ್ದಿಷ್ಟವಾದ ಕಾರ್ಯಕ್ರಮವನ್ನು ತಾವು ಇನ್ನೂ ಏರ್ಪಡಿಸಿಕೊಳ್ಳದಿರುವುದು ಬಹಳ ವ್ಯಸನಕರವಾದ ಅಂಶವಾಗಿದೆ. ದೇಶಾಭಿಪ್ರಾಯವು ಈ ವಿಷಯದಲ್ಲಿ ಏನಿದೆ ಎಂಬುದನ್ನು ತಾವು ಗಮನಿಸಬೇಕು. ಯುದ್ಧಾನಂತರ ಪುನರ್ರಚನೆಯನ್ನು ಸಾಧಿಸಲು ಕೈಗೊಳ್ಳುವ ಕಾರ್ಯಕ್ರಮವನ್ನು ತಾವು ಎರಡೇ ಪುಟಗಳಲ್ಲಿ ಮುದ್ರಿಸಿರುತ್ತೀರಿ. ಇದಕ್ಕಿಂತ ಹೆಚ್ಚಿನ ಟೀಕೆಯು ಅನವಶ್ಯಕವೆಂದು ತೋರುತ್ತದೆ. ಇಂಡಿಯಾ ಸರ್ಕಾರವು ನಮ್ಮ ದೇಶದ ಸರ್ಕಾರವಲ್ಲ ಹೊರಗಿನವರ ಸರ್ಕಾರ ಶ್ರೀ ಸಾರ್ಜೆಂಟ್‌ರವರು ಭಾರತೀಯರಲ್ಲ, ಅವರು

ಬಹಳ ಶ್ರಮಪಟ್ಟು ಎಲ್ಲಾ ವಿವರಗಳನ್ನು ಸಂಗ್ರಹಿಸಿ ತಯಾರಿಸಿರುವ ವರದಿಯಲ್ಲಿ ಭಾರತದಲ್ಲಿ ಪ್ರತಿಯೊಂದು ಮಗುವಿಗೂ 14 ವರ್ಷದವರೆಗಾದರೂ ಶಿಕ್ಷಣವನ್ನು ಕೊಡಬೇಕೆಂದು ಸೂಚಿಸಿರುತ್ತಾರೆ. ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ತಯಾರಾದ ವಾರ್ಧ ವಿದ್ಯಾಭ್ಯಾಸ ಪದ್ಧತಿಯನ್ನು ಬಹಳ ಸಹಾನುಭೂತಿಯಿಂದ ಪರಿಶೀಲಿಸಿ ಅದರ ಮುಖ್ಯಾಂಶಗಳನ್ನು ತಮ್ಮ ಯೋಜನೆಯಲ್ಲಿ ಸೇರಿಸಿದ್ದಾರೆ. ಸಮ್ಮ ಯೋಜನೆಯನ್ನು ಇಂಗ್ಲೆಂಡಿನಲ್ಲಿ ವಿಚಾರ ಮಾಡುತ್ತಿದ್ದಾರೆ. ಭಾರತದಲ್ಲಿ ಇನ್ನು ಮುಂದೆ ವಿದ್ಯಾಭ್ಯಾಸದ ಕ್ರಮವು ಹೇಗಿರಬೇಕೆಂಬ ವಿಷಯದಲ್ಲಿ ಭಾರತೀಯರಲ್ಲದ ಶ್ರೀ ಸಾರ್ಜೆಂಟ್‌ರವರು ಇಂಗ್ಲೆಂಡಿನಲ್ಲು ಸಹ ಪ್ರಚಾರ ಮಾಡುತ್ತಿರುವಾಗ ಮುಂದಿನ ವಿದ್ಯಾಭ್ಯಾಸ ಕ್ರಮವು ಹೀಗೆಯೇ ಇರಬೇಕೆಂದು ಮೈಸೂರು ಸರ್ಕಾರವರು ಇನ್ನು ನಿರ್ಧರಿಸದೇ ಇರುವುದು ಆಶ್ಚರ್ಯಕರವಾಗಿದೆ. ತಾವು ಈ ವಿಷಯದಲ್ಲಿ ಖಂಡಿತವಾಗಿಯೂ ಮನಸ್ಸು ಮಾಡಿ ಒಂದು ನಿರ್ದಿಷ್ಟವಾದ ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕು. ಅದರ ಸತ್ಯತೆಯ ವಿಷಯದಲ್ಲಿ ಜನರಲ್ಲಿ ನಂಬಿಕೆ ಹುಟ್ಟಬೇಕು. ಹಾಗೆ ನಂಬಿಕೆ ಹುಟ್ಟಲು ತಾವು ಇದಕ್ಕೆ ಮುಂಚೆ ಯೋಚಿಸಿರುವ ಕೆಲಸ ಕಾರ್ಯವನ್ನು ಕಾರ್ಯರೂಪಕ್ಕೆ ತರುತ್ತೀರಿ ಎಂಬುದನ್ನು ತಿಳಿಸಬೇಕು. ತಾವು ಈಗ ನಮಗೆ ಒದಗಿಸಿರುವ ಪುನರ್ರಚನೆಯ ವ್ಯವಸ್ಥೆಯಲ್ಲಿ ಇಂತಹ ಯೋಜನೆಗಳಾವುವೂ ಇಲ್ಲ. ಯೋಜನೆಗಳನ್ನು ತಯಾರಿಸಿದ ಮಾತ್ರಕ್ಕೆ ನಿಮ್ಮ ಕೆಲಸ ಮುಗಿದಂತಾಗಲಿಲ್ಲ. ಆ ಸ್ಕೀಮುಗಳನ್ನು ಆಚರಣೆಗೆ ತರಲು ನಿರ್ದಿಷ್ಟವಾದ ಕಾಲಾವಧಿಯು ಇರಬೇಕು, ಆದರೆ ಒಂದು ಹೊಸ ಸ್ಕೀಮನ್ನು ಜಾರಿಗೆ ತರಲು ಹಣವನ್ನು ಹೇಗೆ ಒದಗಿಸಬೇಕು ಎಂಬ ವಿಷಯವು ನಿಮ್ಮ ಮನಸ್ಸನ್ನು ಬಾಧಿಸುತ್ತಿರಬಹುದು. ಈ ಸಂಬಂಧದಲ್ಲಿ ನಾನು ಒಂದು ಸಲಹೆಯನ್ನು ಕೊಡುತ್ತೇನೆ. ಸಂಸ್ಥಾನದಲ್ಲಿ ಪ್ರತಿವರ್ಷವೂ ಸುಮಾರು ಒಂದು ಸಾವಿರದಷ್ಟು ಮಂದಿ ಬಿ.ಎ., ಎಂ.ಎ, ಮುಂತಾದ ಡಿಗ್ರಿಗಳನ್ನು ಪಡೆಯುತ್ತಿದ್ದಾರೆ. ಇತರರೆಲ್ಲರೂ ತಮ್ಮ ವ್ಯಾಸಂಗವು ಮುಗಿದ ನಂತರ ಒಂದು ವರ್ಷದ ಕಾಲ ಉಪಾಧ್ಯಾಯರಾಗಿ ಕೆಲಸ ಮಾಡಿದ ಹೊರತೂ ಅವರಿಗೆ ಪ್ರಶಸ್ತಿಗಳನ್ನು ಕೊಡುವುದಿಲ್ಲವೆಂದು ತೀರ್ಮಾನಿಸುವುದು ಸೂಕ್ತವೆಂದು ಸೂಚಿಸುತ್ತೇನೆ. ನಮ್ಮ ಯುವಕರಲ್ಲಿರುವ ದೇಶಾಭಿಮಾನವನ್ನು ಈ ರೀತಿ ಸಮಾಜ ಸೇವೆಗೆ ತಾವು ಉಪಯೋಗಿಸಿ ಕೊಳ್ಳಬೇಕು. ಅವರು ಉತ್ಸಾಹದಿಂದ ಕೆಲಸ ಮಾಡುತ್ತಾರೆ. ಎಂಜಿನಿಯರಿಂಗ್ ಅಥವಾ ಮೆಡಿಕಲ್ ಡಿಗ್ರಿಯನ್ನು ಪಡೆಯುವವರು ಒಂದು ವರ್ಷದ ಕಾಲ

ಪ್ರಾಕ್ಟಿಕಲ್ ಶಿಕ್ಷಣವನ್ನು ಪಡೆಯಲೇಬೇಕೆಂಬ ನಿಯಮವಿದೆ. ಈ ರೀತಿ ಪ್ರತಿಪದವೀಧರನೂ ವಿದ್ಯಾ ಪ್ರಸಾರ ಕೆಲಸಕ್ಕಾಗಿ ಒಂದು ವರ್ಷ ಉಚಿತವಾಗಿ ದುಡಿಯಲಿ, ಅದಕ್ಕಾಗಿ ಕಾನೂನು ರೀತ್ಯಾ ಒಂದು ವ್ಯವಸ್ಥೆಯನ್ನು ಮಾಡಿ, ಈ ಸೂಚನೆಯನ್ನು ಕಾರ್ಯರೂಪಕ್ಕೆ ತಂದರೆ ಹಣದ ಆತಂಕ ಅಷ್ಟಾಗಿ ಅಡ್ಡಿ ಬರುವುದಿಲ್ಲ. ಉತ್ಸಾಹ ವಿನಿಯೋಗಕ್ಕೂ ಅವಕಾಶವಾಗುತ್ತದೆ. ಇನ್ನು ಪ್ಲಾನ್ಡ್ ಬೇಸಿಸ್ ವಿಚಾರದಲ್ಲಿ ಒಂದೆರಡು ಮಾತುಗಳನ್ನು ಹೇಳುತ್ತೇನೆ. ನಾನು ವಿದ್ಯಾರ್ಥಿಯಾಗಿದ್ದಾಗ ಶ್ರೀ ಕೆ. ಮ್ಯಾತನ್‌ರವರು ವಿದ್ಯಾಭ್ಯಾಸದ ಇಲಾಖೆಯ ಡೈರೆಕ್ಟರಾಗಿದ್ದರು. ಅವರು ಆಗಲೇ ಈಗಿರತಕ್ಕ ವಿದ್ಯಾಭ್ಯಾಸ ಕ್ರಮವು ಚೆನ್ನಾಗಿಲ್ಲವೆಂದು ಹೇಳಿರುವುದು ನನ್ನ ಜ್ಞಾಪಕದಲ್ಲಿದೆ. ಈ ರೀತಿ ಪ್ರತಿಯೊಬ್ಬನ ವಿದ್ಯಾಭ್ಯಾಸದ ವಿಚಾರದಲ್ಲಿ ಅನುಭವವನ್ನು ಹೊಂದಿದ ನಿಪುಣರೂ ವಿದ್ಯಾ ಕ್ರಮವು ಮಾರ್ಪಾಡಾಗಬೇಕೆಂಬ ತತ್ವವನ್ನು ಒಪ್ಪಿಕೊಂಡಿದ್ದಾರೆ. ಆದರೆ ಇದುವರೆಗೂ ಕೂಡ ಆ ರೀತಿ ಮಾರ್ಪಾಡು ಮಾಡಿ ಜನರಿಗೆ ಪ್ರಯೋಜನ ಮಾಡಿದ ಮಹನೀಯರನ್ನು ನಾವು ಮೈಸೂರು ಸಂಸ್ಥಾನದಲ್ಲಿ ಇದುವರೆಗೆ ನೋಡಿಲ್ಲ. ಈಗಲೂ ಕೂಡ ಜನಜೀವನಕ್ಕನುಕೂಲವಾಗುವ ವಿದ್ಯಾಭ್ಯಾಸವನ್ನು ಜಾರಿಗೆ ತನ್ನಿ. ಈ ಹೊಸ ಕ್ರಮವು ಈಗಿನ ರೈತನಿಗಿಂತಲೂ ಉತ್ತಮವಾದ ರೈತ, ಈಗಿನ ಕಮ್ಮಾರನಿಗಿಂತಲೂ ಉತ್ತಮ ಬಡಗಿ – ಇತ್ಯಾದಿಯಾಗಿ ಆಗುವಂತೆ ಜನರನ್ನು ತರಪೇತು ಮಾಡುವ ಏರ್ಪಾಡಾಗಬೇಕು. ಹೀಗೆ ಪ್ರತಿಯೊಂದು ಕಸಬಿಗೂ ಪ್ರತಿಯೊಂದು ಕಲೆಗೂ ಪ್ರೋಷಣೆ ಕೊಡಬೇಕು. ಇನ್ನು ಅನೇಕ ಯೋಜನೆಗಳಿವೆ. ಇದನ್ನೆಲ್ಲಾ ತೆಗೆದುಕೊಂಡು ನಮ್ಮ ದೇಶ ಮತ್ತು ನಮ್ಮ ಜನಗಳಿಗನುಗುಣವಾಗಿ ವಿದ್ಯಾಭ್ಯಾಸ ಕ್ರಮವನ್ನು ಗೊತ್ತು ಮಾಡಬೇಕು ಎಸ್.ಎಸ್.ಎಲ್.ಸಿ. ಪರೀಕ್ಷೆಯಾದವರಿಗೆ ತಾವು "ಎಲಿಜಿಬಲ್ ಫಾರ್ ಪಬ್ಲಿಕ್ ಸರ್ವಿಸ್" ಎಂದು ಕೊಡುತ್ತೀರಿ. ಇದರ ಅರ್ಥವೇನು? ಸರ್ಕಾರಿ ಕೆಲಸಕ್ಕೆ ಮಾತ್ರ ಅರ್ಹರೆಂತಲೇ ಅಥವಾ ಪ್ರಜಾ ಸೇವೆಗೆಂತಲೇ? ಇದಕ್ಕೆ ಏನೂ ಸಂಪೂರ್ಣ ಅರ್ಥವಿದೆಯೋ ಅದನ್ನು ಗ್ರಹಿಸಿಕೊಂಡು ಪ್ರತಿಯೊಬ್ಬ ವಿದ್ಯಾರ್ಥಿಯೂ ಪ್ರಜಾ ಸೇವೆ ಮಾಡಲು, ಸತ್ಪ್ರಜೆಯಾಗಲು ಅರ್ಹನಾಗುವಂತೆ ಮಾಡುವ ವಿದ್ಯಾಭ್ಯಾಸ ಪದ್ಧತಿಬೇಕು. ಆದುದರಿಂದ ನಿರ್ಣಯವನ್ನು ತಾವು ಒಪ್ಪಿಕೊಳ್ಳಬೇಕೆಂದು ನಾನು ಸೂಚಿಸುತ್ತೇನೆ.

(ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು ದಿನಾಂಕ : 10-6-1944)

## 3. ಬ್ರಿಟಿಷ್ ಕ್ಯಾಬಿನೆಟ್ ನೀಡಿದ ಸಲಹೆಗಳ ವಿಚಾರದಲ್ಲಿ ಸಭೆಯಲ್ಲಿ ಚರ್ಚೆಗೆ ಅವಕಾಶ ಕಲ್ಪಿಸಲು ಕೋರಿಕೆ.

ಈಗ ತಾವು ಈ ನಿಲುವಳಿ ಸೂಚನೆಯನ್ನು ತಳ್ಳಿ ಹಾಕುವುದಕ್ಕೆ ಮೊದಲು ಒಂದು ವಿಷಯವನ್ನು ತಮ್ಮ ಗಮನಕ್ಕೆ ತರಲು ಇಚ್ಛಿಸುತ್ತೇನೆ. ಈ ಸಲದ ತಮ್ಮ ಅಧ್ಯಕ್ಷ ಭಾಷಣದ ಕೊನೆಯ ಎರಡು ಪ್ಯಾರಾಗಳಲ್ಲಿ ಇದೇ ವಿಷಯ ಪ್ರಸ್ತಾಪಿಸಿರುವುದು ತಮ್ಮ ಗಮನದಲ್ಲಿದೆ. ಈ ಸಭೆಯಲ್ಲಿ ತಾವು ಆ ವಿಷಯವಾಗಿ ಭಾಷಣ ಮಾಡಿದರೆ ಶಾಸನಕ್ಕೆ ವಿರುದ್ಧವಲ್ಲ; ನಾವು ಅದೇ ವಿಷಯವಾಗಿ ಮಾತನಾಡಿದರೆ ಶಾಸನಕ್ಕೆ ವಿರುದ್ಧವಾಗುತ್ತದೆ ಎಂದು ನೀವು ತೀರ್ಪು ಹೇಳಿದರೆ ಅದು ಸಮಂಜಸವಾದ ತೀರ್ಪೆಂದು ಒಪ್ಪುವುದಕ್ಕಾಗುವುದಿಲ್ಲ. ತಾವು ಅನುಸರಿಸುವ ನೀತಿಯನ್ನು ನಾವು ಅನುಸರಿಸುವುದಕ್ಕೆ ಅವಕಾಶ ಕೊಡಬೇಕು. ಇದು ಸಭೆಯ ಸಂಪ್ರದಾಯ. ಆದ್ದರಿಂದ ಅದನ್ನು ಬೆಳೆಸಿಕೊಂಡು ಬರಬೇಕು ಮತ್ತು ಅದನ್ನು ಪಾಲಿಸಿಕೊಂಡು ಬರಬೇಕು. ಅಷ್ಟೇ ಅಲ್ಲದೆ ಈ ಮುಖ್ಯ ವಿಷಯದಲ್ಲಿ ಸರ್ಕಾರದವರಿಗೂ ಪ್ರಜೆಗಳಿಗೂ ಭಿನ್ನಾಭಿಪ್ರಾಯವಿಲ್ಲ. ಸರ್ಕಾರಕ್ಕೂ ಪ್ರಜಾಭಿಪ್ರಾಯಕ್ಕೂ ಸಾಮರಸ್ಯವಿರುವ ವಿಷಯ ಇದು. ಈ ಸಾಮರಸ್ಯತೆ ಇರುವ ಸನ್ನಿವೇಶವನ್ನು ನೀವು ಉತ್ಸಾಹಿತರಾಗಿ ಬೆಳಸಬೇಕೇ ಹೊರತು ಅದನ್ನು ಕುಂಠಿತಗೊಳಿಸುವುದು ರಾಜನೀತಿಗೆ ಯೋಗ್ಯವಾದುದಲ್ಲ, ಅಲ್ಲದೆ ನ್ಯಾಯವೂ ಅಲ್ಲ. ಈ ವಿಷಯವನ್ನು ಪ್ರಸ್ತಾಪಿಸುವುದಕ್ಕೆ ಅವಕಾಶಕೊಡಬೇಕು. ಅದರಿಂದ ಸರ್ಕಾರಕ್ಕೂ ಪ್ರಜಾ ವರ್ಗಕ್ಕೂ ಸಾಮರಸ್ಯತೆ ಹೆಚ್ಚುತ್ತದೆ. ನಮಗೂ ನಿಮಗೂ ಈ ವಿಷಯದಲ್ಲಿ ಭಿನ್ನಾಭಿಪ್ರಾಯವಿರುವುದಿಲ್ಲ. ಒಂದು ವೇಳೆ ಈ ಚರ್ಚೆಗೆ ಅವಕಾಶಕೊಟ್ಟರೆ ಅಲ್ಪಸ್ವಲ್ಪವಿರುವ ವೈಮನಸ್ಸೂ ಹೋಗಿ ಸಾಮರಸ್ಯತೆಯು ಉಂಟಾಗುತ್ತದೆಂದು ಸಾರಿ, ಒತ್ತಿಒತ್ತಿ ಹೇಳುತ್ತೇನೆ.

(ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು, ದಿನಾಂಕ : 31-5-1946)

## 4. ರಾಜ್ಯಾಂಗ ರಚನಾ ಸಮಿತಿಗೆ ಸದಸ್ಯರನ್ನು ಚುನಾಯಿಸುವುದು

ಶ್ರೀ ಕೃಷ್ಣಮೂರ್ತಿಯವರು ಹೇಳಿದ ವಾದವನ್ನೇ ಸಮರ್ಥಿಸಿ ಒಂದೆರಡು ಅಂಶಗಳನ್ನು ಮಾತ್ರ ತಮ್ಮ ಗಮನಕ್ಕೆ ತರಲಿಚ್ಛಿಸುತ್ತೇನೆ. ಇದುವರೆಗೆ ತಾವು ಕೆಲವು ಅವಸರದ ಠರಾವುಗಳ ವಿಷಯದಲ್ಲಿ ತಮ್ಮ ರೂಲಿಂಗ್ ಕೊಟ್ಟಿದ್ದೀರಿ.

ಅವುಗಳ ವಿಚಾರದಲ್ಲಿ ನಾವು ಇದುವರೆಗೆ ಯಾವ ರೀತಿಯಲ್ಲಿಯೂ ನಮ್ಮ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ. ಆದರೆ ಈ ವಿಷಯದಲ್ಲಿ ಮಾತ್ರ ತಾವು ಇದನ್ನು ಬಹಳ ಗಹನವಾಗಿ ಯೋಚಿಸಬೇಕೆಂಬ ತೀವ್ರಾಭಿಲಾಷೆ ನಮಗಿದೆ. ಇದನ್ನು ವಿಶಾಲ ದೃಷ್ಟಿಯಿಂದಲೂ ಮತ್ತು ಉದಾರ ದೃಷ್ಟಿಯಿಂದಲೂ ಪರಿಶೀಲಿಸಿ ಇದರ ಚರ್ಚೆಗೆ ಅವಕಾಶ ಕೊಡಬೇಕೆಂದು ಶ್ರೀಮನ್ಮಹಾರಾಜರವರ ಸರ್ಕಾರದವರಲ್ಲಿ ಚರ್ಚಿಸುವ ತತ್ಸಂಬಂಧದಲ್ಲಿ, ನಿಯಮವನ್ನು ಇಂಟರ್‌ಪ್ರಿಟ್ (interpret) ಮಾಡಿ ಅದು ನಿಯಮದ ಬಳಿಗೆ ಬರುತ್ತದೆಯೇ ಅಥವಾ ಇಲ್ಲವೇ ಎಂಬುದನ್ನು ಪರಿಶೀಲನೆ ಮಾಡುವಾಗ ಸಭೆಯ ಹಕ್ಕುಬಾಧ್ಯತೆಗಳ ದೃಷ್ಟಿಯಿಂದ ನಿಯಮಕ್ಕೆ ಉದಾರವಾದ ಅರ್ಥವನ್ನು ಕಲ್ಪಿಸಬೇಕು. ಬ್ರಿಟಿಷ್ ಕ್ಯಾಬಿನೆಟ್ ಮಿಷನ್‌ನವರು ''ಸ್ಟೇಟ್ಸ್ ರೆಪ್ರೆಸೆಂಟೆಟೀವ್ಸ್'' ಎಂದು ಹೇಳಿದ್ದಾರೆ. ''ಪ್ರಿನ್ಸ್‌ಸ್ ರೆಪ್ರಸೆಂಟೆಟೀವ್ಸ್'' ಎಂದು ಹೇಳಿಲ್ಲ. ಆದುದರಿಂದ ಶ್ರೀ ಕೃಷ್ಣಮೂರ್ತಿಗಳವರು ಹೇಳಿದ ಹಾಗೆ ಈ ವಿಷಯದ ಚರ್ಚೆಯು ಯಾವ ಕಾನೂನಿಗೂ ವಿರೋಧವಾಗುವುದಿಲ್ಲ. ಒಂದು ವೇಳೆ 'ಪ್ರಿನ್‌ಸಸ್ ನಾಮಿನೀಸ್' ಎಂದು ಹೇಳಿದ್ದರೆ ಆಗ ಇದು ಶ್ರೀಮಾನ್ ಮಹಾರಾಜರವರಿಗೆ ಸಂಬಂಧಪಟ್ಟದ್ದು ಎಂದೂ, ಆದುದರಿಂದ ಇದರ ಚರ್ಚೆಗೆ ಅವಕಾಶವಿಲ್ಲವೆಂದೂ ವಾದಿಸಬಹುದಾಗಿತ್ತು. 'ಸ್ಟೇಟ್ಸ್ ರೆಪ್ರಸೆಂಟೇಟೀವ್ಸ್' ಎಂದು ಇದೆ. ಆದುದರಿಂದ ನನಗೆ ತಿಳಿದ ಮಟ್ಟಿಗೆ ಬ್ರಿಟಿಷ್ ಕ್ಯಾಬಿನೆಟ್‌ನವರು ಈ ವಿಷಯದಲ್ಲಿ ಉದಾರ ಹೃದಯದಿಂದ ವರ್ತಿಸುವುದಕ್ಕೆ ಸಂಸ್ಥಾನಾಧೀಶರಿಗೆ ಅವಕಾಶವನ್ನು ಕಲ್ಪಿಸಿದ್ದಾರೆ. ಅವರೇ ಇಷ್ಟು ಉದಾರತ್ವವನ್ನು ತೋರಿಸಿರುವಾಗ, ನಮ್ಮವರಾದ ನೀವು ನಮ್ಮೊಡನೆ ಹುಟ್ಟಿ ಬೆಳೆದು ಏಕದೇಶೀಯರಾದ ನೀವು ಇನ್ನೂ ಹೆಚ್ಚು ಸೌಹಾರ್ದದಿಂದ ಮತ್ತು ಉದಾರತೆಯಿಂದ ವರ್ತಿಸಬೇಕಾದುದು ತಮ್ಮ ಅಗತ್ಯ ಕರ್ತವ್ಯವೆಂದು ತಿಳಿಸುತ್ತೇನೆ.

**Mr. President :** The member is speaking on the merits of the motion and not on the question of admissibility.

**Mr. K. Hanumanthaiah :** There is scope for admitting this matter for dicussion. ಆದುದರಿಂದ ಇದನ್ನು ಅಂಗೀಕರಿಸಬಹುದು. ಈ ವಿಷಯವನ್ನು ಚರ್ಚಿಸುವುದಕ್ಕೆ ಅವಕಾಶ ಇದೆ ಎಂದು ಮನಃಪೂರ್ವಕವಾಗಿ ನಂಬಿದ್ದೇನೆ. ಒಂದು ವೇಳೆ ಕಾಲಹರಣವಾಗುವ ಪ್ರಮೇಯವೇನಾದರೂ ಬಂದರೆ

ಇದಕ್ಕೆ ತಾವು ಸರಿಯಾದ ರೀತಿಯ ಉತ್ತರ ಹೇಳಿದರೆ ನಾವು ಈ ನಿಲುವಳಿ ಸೂಚನೆಯನ್ನು ಒತ್ತಾಯಪಡಿಸುವುದಿಲ್ಲ. ಈ ಎರಡು ಮಾರ್ಗಗಳನ್ನು ಸೂಚಿಸಿದ್ದೇನೆ ಯೋಚನೆ ಮಾಡಿ.

**Mr. President :** Let us not go into the merits. ಇದು ಕಾನೂನು ಪ್ರಕಾರ ಒಪ್ಪತಕ್ಕ ವಿಷಯವೇ ಎಂಬುದನ್ನು ನೋಡಬೇಕು ಅಷ್ಟೆ.

**ಶ್ರೀ ಕೆ. ಹನುಮಂತಯ್ಯನವರು :** ಪ್ರಾಂತೀಯ ಸರ್ಕಾರಗಳವರು ಬ್ರಿಟಿಷ್ ಸರ್ಕಾರದವರ ಸಲಹೆಗಳಿಗನುಗುಣವಾಗಿ ಕೆಲಸಕಾರ್ಯಗಳನ್ನು ಮಾಡುತ್ತಿರುವಾಗ ನೀವುಗಳೂ ಕೂಡ ಹಾಗೆಯೇ ಮಾಡಬೇಕಾದದ್ದು ನಿಮ್ಮ ಕರ್ತವ್ಯ. ಬ್ರಿಟಿಷ್ ಸಲಹೆಗಳಿಗನುಗುಣವಾಗಿ ನೀವು ನಡೆಯದೆ ಹೋದರೆ ಅದು ಒಂದು ಕರ್ತವ್ಯ ಲೋಪ. ಅಲ್ಲದೆ ಇದು ಸಾರ್ವಜನಿಕ ಪ್ರಾಮುಖ್ಯತೆಗೆ ಸಂಬಂಧಪಟ್ಟ ವಿಷಯ.

**ಶ್ರೀ ಭೂಪಾಳಂ ಆರ್. ಚಂದ್ರಶೇಖರಯ್ಯನವರು :** ಇದೇ ವಿಷಯವಾಗಿ ನಾನು ಕಳುಹಿಸಿರತಕ್ಕ ನಿಲುವಳಿ ಸೂಚನೆಯು ಕನ್ನಡದಲ್ಲೇ ಇದೆ. ಇದು ಸರ್ಕಾರದವರು ಕನ್ನಡಕ್ಕೆ ಪ್ರಾಶಸ್ತ್ಯ ಕೊಡಲಿ ಎಂಬ ಉದ್ದೇಶದಿಂದ ಕನ್ನಡದಲ್ಲಿ ಈ ನಿಲುವಳಿ ಸೂಚನೆಯನ್ನು ಕಳುಹಿಸಿದ್ದೇನೆ.

(ಪ್ರಜಾಪ್ರತಿನಿಧಿ ಸಭೆ ನಡೆವಳಿಕೆಗಳು, ದಿನಾಂಕ : 1-6-1946)

## 5. ತಾತ್ಕಾಲಿಕ ಭಾರತ ಸರ್ಕಾರಕ್ಕೆ ಅಭಿನಂದನಾ ನಿರ್ಣಯ.

ಮಾನ್ಯ ಅಧ್ಯಕ್ಷರೆ, ಈ ದಿವಸ ನಾನು ಈ ಸಭೆಯ ಮುಂದೆ ಸೂಚಿಸಬೇಕೆಂದಿರುವ ನಿರ್ಣಯವು ಈ ರೀತಿ ಇದೆ.

''ಭಾರತವು ಪೂರ್ಣ ಸ್ವಾತಂತ್ರ್ಯ ಸಾಧನೆಗಾಗಿ ದೀರ್ಘಕಾಲದಿಂದ ಅಪೂರ್ವ ಸಾಹಸ, ತ್ಯಾಗ ಸತ್ಪಾರಾಕ್ರಮ ತೋರಿಸಿ ಅನೇಕ ಘಟ್ಟಗಳನ್ನು ಮುಟ್ಟಿತು. ಇಂದಾದರೋ ಸ್ವತಂತ್ರ ಭಾರತವು ರಾಷ್ಟ್ರ ಸೂತ್ರಗಳನ್ನು ವಹಿಸಿಕೊಂಡಿದೆ. ನವದೆಹಲಿಯ ಆಡಳಿತ ಭವನದಲ್ಲಿಂದು ಕಾಂಗ್ರೆಸ್ ಮಹಾನಾಯಕ ಪಂಡಿತ ಜವಾಹರಲಾಲ್ ನೆಹರು ಮುಂತಾದ ರಾಷ್ಟ್ರೀಯ ನಾಯಕರು ಮಂತ್ರಿಗಳಾಗಿ ಕುಳಿತು ತಾತ್ಕಾಲಿಕ ಸರ್ಕಾರ ನಿರ್ಮಾಣ ಮಾಡಿರುವುದು ಮಹದಾನಂದ ದಾಯಕವಾದ ಪವಿತ್ರ ಸನ್ನಿವೇಶವಿದು. ಈ ಸಂತೋಷ ಸಮಯದಲ್ಲಿ ತಾತ್ಕಾಲಿಕ

ರಾಷ್ಟ್ರೀಯ ಸರ್ಕಾರವನ್ನು ಈ ಸಭೆಯು ತ್ರಿಕರಣಪೂರ್ವಕವಾಗಿ ಸ್ವಾಗತಿಸುತ್ತದೆ ಮತ್ತು ನಾಯಕರನ್ನೆಲ್ಲಾ ಅಭಿನಂದಿಸುತ್ತದೆ."

ಈ ನಿರ್ಣಯದಲ್ಲಿ ಅಡಗಿರುವ ಭಾವನೆಯು ಪ್ರತಿಯೊಬ್ಬ ಭಾರತೀಯನ ಮನಸ್ಸಿನಲ್ಲೂ ನಲಿದಾಡುತ್ತಿದೆ. ಇದು ಸ್ವಾತಂತ್ರ್ಯ ಸೂರ್ಯೋದಯ ಕಾಲ. ನಾವು ದೇಶದ ಸ್ವಾತಂತ್ರ್ಯಕ್ಕಾಗಿ ನೂರಾರು ವರ್ಷಗಳಿಂದಲೂ ಹೋರಾಡುತ್ತಿದ್ದು ಈಗ ಈ ರಾಜಕೀಯ ಸ್ವಾತಂತ್ರ್ಯವು ದೊರಕಿ ನಮಗೆಲ್ಲ ಮಹದಾನಂದವಾಗಿದೆ. ಈ ನಿರ್ಣಯವನ್ನು ಸರ್ಕಾರದವರು ತಾತ್ಕಾಲಿಕ ಸರ್ಕಾರದವರಿಗೆ ಕಳುಹಿಸಿಕೊಡಬೇಕೆಂದು ಸೂಚಿಸಿ ಈ ನಿರ್ಣಯವನ್ನು ಮಂಡಿಸುತ್ತೇನೆ.

(ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು, ದಿನಾಂಕ : 30-9-1946)

## 6. ಅಲ್ಪಸಂಖ್ಯಾತರು

ಅಧ್ಯಕ್ಷರೆ, ತಾವು ನಿನ್ನೆ ದಿವಸ ತಮ್ಮ ಉದ್ದೇಶವು ಈ ವಿಚಾರದಲ್ಲಿ ಸದುದ್ದೇಶವಾಗಿತ್ತು ಎಂದು ಹೇಳಿದಿರಿ. ಅದೇ ರೀತಿ ನಮ್ಮ ಉದ್ದೇಶವೂ ಸದುದ್ದೇಶವಾಗಿದೆ ಎಂಬುದನ್ನು ತಾವು ಗಮನದಲ್ಲಿಟ್ಟುಕೊಳ್ಳಬೇಕು. ನಮ್ಮ ಕಾಂಗ್ರೆಸ್ ಪಾರ್ಟಿಯವರ ಉದ್ದೇಶ ಮುಸ್ಲಿಂಲೀಗಿನವರನ್ನು ಚುಚ್ಚಿ ಕೆಣಕಬೇಕೆಂದಿಲ್ಲ, ಅವರಿಗೆ ನ್ಯಾಯವಾಗಿ ದೊರೆಯಬೇಕಾದ ಸೌಲಭ್ಯಗಳನ್ನು ಅಡ್ಡಗಟ್ಟಬೇಕೆಂದಿಲ್ಲ, ನೀವು ಒಂದು ಒಳ್ಳೆ ಉದ್ದೇಶವನ್ನಿಟ್ಟುಕೊಂಡು ಕಾರ್ಯವನ್ನು ಕೈಗೊಂಡರೆ ಅದು ನಮ್ಮ ಮನಸ್ಸಿನಲ್ಲಿ ಯಾವ ಪ್ರತಿಕ್ರಿಯೆಯನ್ನು ಉಂಟು ಮಾಡುತ್ತದೆಂಬುದನ್ನು ನೀವು ಯೋಚಿಸಬೇಕು. ಕೋಮುವಾರು ಸೌಹಾರ್ದ ಬರಲಿ ಎಂಬ ಉದ್ದೇಶದಿಂದ ತಾವು ಆ ರೀತಿ ಮಾಡಿರಬಹುದು. ಆದರೆ ತಾವು ಮಾಡಿರುವುದು ಆ ಸೌಹಾರ್ದವನ್ನು ಕೆಡಿಸಿದೆ. ಸಭೆಯನ್ನು ಕೇಳದೆ, ನೀವು ಮುಸಲ್ಮಾನ ಸದಸ್ಯರಿಗೆ ಕೊಟ್ಟಿರುವ ಸೌಲಭ್ಯದಿಂದ ಹಿಂದೂಗಳಿಗೂ ಮುಸಲ್ಮಾನರಿಗೂ ಇನ್ನೂ ವ್ಯಾಜ್ಯ ಹೆಚ್ಚು ಆಗಲು ಅವಕಾಶ ಆಯಿತೇ ಹೊರತು ಕಡಿಮೆ ಆಗಲು ಅವಕಾಶವಾಗಲಿಲ್ಲ. ಕಾರಣ ಇಷ್ಟೆ. ಹಿಂದೆ ಈ ಸೌಲಭ್ಯವು ಮುಸ್ಲಿಂ ಸದಸ್ಯರಿಗೆ ಸಿಕ್ಕಿರಲಿಲ್ಲ. ನಿಮ್ಮಿಂದ ದೊರೆಯಿತು. ಅದರಿಂದ ನಿಮ್ಮ ಅವರ ಸ್ನೇಹ ಬೆಳೆಯಿತು. ಇದು ಭೇದೋಪಾಯ (Question). ನೀವು ಯಾವ ರೀತಿ ಸದುದ್ದೇಶದ ಮೇಲೆ (ಹೇಳುತ್ತಾ ಇದ್ದೀರೋ ನಾನು ಅದೇ ಸದುದ್ದೇಶದಿಂದಲೇ ಹೇಳುತ್ತಿದ್ದೇನೆ. ನಿಮ್ಮ ಸದುದ್ದೇಶದ ಮೇಲೆ) ನಾನು ಆರೋಪಣೆ ಮಾಡುತ್ತಿಲ್ಲ. ಉಂಟಾಗಿರುವ ಪರಿಸ್ಥಿತಿ ಹೇಗಾಗಿದೆ ಎಂದು

ಮಾತ್ರ ಹೇಳುತ್ತಿದ್ದೇನೆ. ಹೋದ ಸಲ ಇದೇ ಸಭೆಯಲ್ಲಿ ಈ ವಿಚಾರವು ಚರ್ಚೆಗೆ ಬಂದಾಗ ಅನೇಕ ಮಹನೀಯರು ಇದಕ್ಕೆ ಒಪ್ಪಲಿಲ್ಲ. ಈಗ ಇರುವ ಮಂತ್ರಿಗಳಲ್ಲಿ ಆಗಲೂ ಇದ್ದವರು ಕೆಲವರು ಇಲ್ಲಿ ಇದ್ದಾರೆ. ಅವರನ್ನು ಕೇಳಿ, ಆಗಿದ್ದ ದಿವಾನ್‌ರವರು ಹಿಂದಿನಿಂದ ಈ ಸಭೆಯು ಯಾವ ರೀತಿ ನಡೆದುಕೊಂಡು ಬಂದಿತ್ತೋ ಅದನ್ನು ಬದಲಾಯಿಸಲು ಒಪ್ಪಲಿಲ್ಲ. ಅದನ್ನು ರೂಲಿಂಗ್ ಎಂದು ಬೇಕಾದರೂ ಭಾವಿಸಬಹುದು. ಅಥವಾ ಅಧ್ಯಕ್ಷರ ವಿವೇಚನೆ (President's discretion) ಎಂದು ಅರ್ಥ ಮಾಡಿದರೂ ಮಾಡಬಹುದು, ಹೀಗಿರುವುದರಿಂದ ಅದು ಒಂದು ರೂಲಿಂಗೇ ಅಥವಾ ಅಧ್ಯಕ್ಷರ ವಿವೇಚನೆಯೇ ಎಂಬುದನ್ನು ತೀರ್ಮಾನ ಮಾಡುವುದಕ್ಕೆ ತಾವು ಈ ವಿಷಯದಲ್ಲಿ ಒಂದು ಪಾರ್ಟಿ ಆಗಿರುವುದರಿಂದ ಬೇರೆ ಒಂದು ಸಮಿತಿಯು, ಎಂದರೆ ಪ್ರಿವಿಲೆಜ್ ಸಮಿತಿಯು ತೀರ್ಮಾನ ಕೊಡಬೇಕಾದ್ದು ನ್ಯಾಯವಾದ ಸಂಪ್ರದಾಯ ಪದ್ಧತಿ.

ನಾವು ಸಭೆಯಲ್ಲಿರತಕ್ಕವರು ಹಿಂದೂ ಮುಸಲ್ಮಾನರೂ ಬ್ರಾಹ್ಮಣ ಬ್ರಾಹ್ಮಣೇತರರೂ, ನಾವು ಸಮಾಲೋಚನೆ ಮಾಡಿ ಸ್ನೇಹ ಬೆಳಸಬೇಕೇ ಹೊರತು ಮೂರನೆಯವರಿಗೆ ಆ ಸ್ನೇಹ ಬೆಳಸಲು ಅಸಾಧ್ಯ. ಬ್ರಿಟಿಷ್ ಇಂಡಿಯಾ ದೇಶದ ಹಿಂದೂ-ಮುಸ್ಲಿಂ, ವ್ಯಾಜ್ಯವು ಇದಕ್ಕೆ ಸಾಕ್ಷಿ. ನೀವು ಹೊರಗಿನವರು, ಇದರ ಮೇಲೆ ದಿವಾನರು. ನಿಮ್ಮಿಂದ ಒಗ್ಗಟ್ಟು ತರಲು ಆಗಲಾರದು. ಹಿಂದೆ ಈ ಒಗ್ಗಟ್ಟನ್ನು ತರಲು ಲಾರ್ಡ್ ಇರ್ವಿನ್‌ರವರು.........

Mr. President : I am also a Hindu.

Mr. M. V. Krishnappa : You are a madrasi.

Mr. President : I am proud to be a Madrasi Hindu.

ಶ್ರೀ ಕೆ. ಹನುಮಂತಯ್ಯನವರು : ಲಾರ್ಡ್ ಲಿನ್‌ಲಿತ್‌ಗೋರವರೂ ಮತ್ತು ಲಾರ್ಡ್ ಇರ್ವಿನ್‌ರವರೂ ಹಿಂದೂಗಳು, ಮುಸಲ್ಮಾನವರು ಒಗ್ಗಟ್ಟಾಗಬೇಕೆಂದು ಮಾಡಿದ ಭಾಷಣಗಳಿಗಿಂತ ಹೆಚ್ಚು ಹೃದಯಂಗಮವಾಗಿ ಇನ್ನಾರೂ ಮಾಡಲಿಲ್ಲ. ಆದರೆ ಭಾಷಣ ಬೇರೆ, ಕಾರ್ಯ ಬೇರೆ ಆಗುತ್ತಿತ್ತು.

ಹೊರಗಿನವರು ಈ ರೀತಿ ಎಷ್ಟು ಭಾಷಣ ಮಾಡಿದರೂ ಕಾರ್ಯ ಬೇರೆ ಆಗಿ ಫಲ ವಿಪರೀತವಾಯಿತು. ಪಾಕಿಸ್ಥಾನದ ಕೂಗಿನಲ್ಲಿ ಪರ್ಯವಸನವಾಯಿತು. ಈ ದಿನ ಹಿಂದೂ ಮುಸ್ಲೀಮರ ಸೌಹಾರ್ದ ಎಲ್ಲಿದೆ? ಅವರೇ ಬೇರೆ ಜನಾಂಗ ನಾವೇ ಬೇರೆ ಜನಾಂಗ ಎನ್ನುವ ಪರಿಸ್ಥಿತಿ ಬಂದಿದೆ.

Mr. President : I am afraid the Honourable Member is traversing beyond what need be covered on this motion. There is no question of Hindu-Muslim politics here.

ಶ್ರೀ ಕೆ. ಹನುಮಂತಯ್ಯನವರು : ಈ ದಿನ ನಾವು ಕೊಟ್ಟ ತೀರ್ಮಾನದಿಂದ ಏನಾಯಿತೆಂದರೆ ನಮ್ಮ ಕಾಂಗ್ರೆಸ್ ಪಕ್ಷದವರಾಗಲೀ ಅಥವಾ ಇಲ್ಲಿರತಕ್ಕ ಇತರ ಪಾರ್ಟಿಗಳಾದ ಹಿಂದೂ ಮಹಾ ಸಭೆ, ನ್ಯಾಷನಲಿಸ್ಟ್ ಪಕ್ಷ, ಪ್ರಜಾಪಕ್ಷ ಮತ್ತು ಸ್ವತಂತ್ರರು ಇವರಾಗಲೀ ಮುಸಲ್ಮಾನ ಸದಸ್ಯರಿಗೆ ರಿಯಾಯಿತಿ ತೋರಿಸಿದಂತಾಗಲಿಲ್ಲ. ಆದುದರಿಂದ ನಮ್ಮ ಅವರ ಸ್ನೇಹ ಬೆಳೆಯಲಿಲ್ಲ. ರಿಯಾಯಿತಿಯನ್ನು ಕೊಟ್ಟವರು ನೀವು ಪಡೆದವರು ಮುಸ್ಲಿಂ ಲೀಗಿನವರು. ಆದುದರಿಂದ ನಿಮ್ಮ ಅವರ ಸ್ನೇಹ ಸ್ಥಾಪನೆಯಾಯಿತು. ಹಿಂದೆ ನೀವುಗಳು ಈ ರಿಯಾಯಿತಿಯನ್ನು ತೋರಿಸಲಿಲ್ಲವೆಂಬ ಕಹಿ ಭಾವನೆಯು ಮುಸ್ಲಿಂ ಸದಸ್ಯರ ಮನಸ್ಸಿನಲ್ಲಿ ಉಳಿದುಕೊಂಡಿತು.

Mr. President : That is political friendship. But I am telling of friendship of individuals, human beings. I quite realised what you mean. But that is political friendship.

ಶ್ರೀ ಕೆ. ಹನುಮಂತಯ್ಯನವರು : ಎಲ್ಲಾ ಸ್ನೇಹವೂ ಒಂದೇ ನೀವು ಎಷ್ಟು ಆತ್ಮ ಸಾಕ್ಷಿಯಾಗಿ ಹೇಳುತ್ತೀರೋ ಅಷ್ಟೇ ಆತ್ಮಸಾಕ್ಷಿಯಾಗಿ ನಾನು ಹೇಳುತ್ತೇನೆ. Not that I accuse anybody. Accusation does not bring any benefit. ಈಗ ಏನಾಯಿತು ಎಂದರೆ ತಾವು ನಮ್ಮಗಳಲ್ಲಿ ಯಾರನ್ನೂ ಪೂರ್ವಭಾವಿಯಾಗಿ ಕೇಳದೆ ತಾವು ಒಂದು ತೀರ್ಮಾನವನ್ನು ಕೊಟ್ಟಿದ್ದರಿಂದ ನಿಮಗೂ ಅವರಿಗೂ ಸ್ನೇಹ ಬೆಳೆಯುವುದಕ್ಕೆ ಅವಕಾಶವಾಯಿತೇ ಹೊರತು ನಮಗೂ ಮುಸ್ಲಿಂ ಲೀಗಿನವರಿಗೂ ಸ್ನೇಹ ಬೆಳೆದಂತಾಗಲಿಲ್ಲ. ಅಲ್ಲದೆ ನಮಗೂ ನಿಮಗೂ ಸ್ನೇಹ ಬೆಳೆಯಲೂ ಅವಕಾಶವಾಗಲಿಲ್ಲ.

Mr. President : You please wait and see.

ಶ್ರೀ ಕೆ. ಹನುಮಂತಯ್ಯನವರು : ಯಾವ ರೀತಿ ನಾವೆಲ್ಲರೂ ಸ್ನೇಹವನ್ನು ಸ್ಥಾಪಿಸಬೇಕೆಂದು ಪ್ರಯತ್ನ ಪಡುತ್ತಿದ್ದೆವೋ ಅದಕ್ಕೆ ಅಡ್ಡಿ ಮಾಡಿದಿರಿ. ಈ ಮುಸಲ್ಮಾನ ಸೋದರರ ಮನಸ್ಸಿನಲ್ಲಿ ಇಲ್ಲಿನ ಹಿಂದೂ ಸದಸ್ಯರಿಂದ ಏನೂ ಆಗಲಿಲ್ಲ. ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್‌ರವರು ಬಂದು ಉಪಕಾರ ಮಾಡಿದರು ಎಂಬ ಮನೋಭಾವನೆ ಉಂಟಾದ ಹಾಗೆ ಆಯಿತು. ನಾನು ಈ ದಿನ ನಿಮ್ಮಲ್ಲಿಯೂ ಮತ್ತು ಮೈಸೂರು ಸರ್ಕಾರದವರಲ್ಲಿಯೂ ಪ್ರಾರ್ಥನೆ ಮಾಡಿ ಹೇಳುತ್ತಿದ್ದೇನೆ. ಈ ಹಿಂದೂ ಮುಸಲ್ಮಾನರ ಬಾಂಧವ್ಯ ಬರಬೇಕಾದರೆ ಅಥವಾ ನಮ್ಮ ದೇಶದಲ್ಲಿ ಇರುವ ಬೇರೆ ಬೇರೆ ಕೋಮುಗಳ ಸೌಹಾರ್ದ ಬರಬೇಕಾದರೆ ನಾವು ನಾವುಗಳು ಒಂದಾಗಬೇಕೇ ಹೊರತು ನೀವು ಎಷ್ಟೇ ಪ್ರಯತ್ನಪಟ್ಟರೂ ಆಗುವುದಿಲ್ಲ. ಆದುದರಿಂದ ಇಂಥ ಪ್ರಶ್ನೆಗಳನ್ನು ದೂರದೃಷ್ಟಿಯಿಂದ ತಾವು ನಮಗೇ ಬಿಡಬೇಕಾಗಿತ್ತು. ಹಾಗೆ ಮಾಡಿದ್ದರೆ ಬಹುಶಃ ನಾವು ಒಪ್ಪಿಕೊಳ್ಳುತ್ತಿದ್ದೆವೋ ಏನೋ, ಅದು ಬೇರೆ ಪ್ರಶ್ನೆ. ಆದುದರಿಂದ ತಾವು ಅನುಸರಿಸಿದ ರೀತಿ ಈ ದಿನ ಆ ಭಾವನೆಗೆ ಅನುಕೂಲವಾಗಿಲ್ಲ ಅದೂ ಅಲ್ಲದೆ ಶುಕ್ರವಾರದ ದಿನ ನಾನು ತೀರ್ಮಾನ ಮಾಡಿ ಬಿಟ್ಟಿದ್ದೇನೆ ಎಂದು ತಾವೇ ಹೇಳಿದಿರಿ. ಒಂದು ಗಂಟೆ ಅವಕಾಶ ಕೊಡಬೇಕೇ ಅಥವಾ ಮುಕ್ಕಾಲು ಗಂಟೆ ಕೊಡಬೇಕೇ ಎಂಬುದನ್ನು ಮಾತ್ರ ಮಾತನಾಡಲು ನಮ್ಮ ಸಹಕಾರವನ್ನು ಕೇಳಿದ್ದೀರಿ. ಇದನ್ನು ನಾವು ಹೇಗೆ ಒಪ್ಪುವುದು? ನಿಮ್ಮದಾದ ತೀರ್ಮಾನಕ್ಕೆ ನಮ್ಮ ಒಪ್ಪಿಗೆ ಮುದ್ರೆಯನ್ನು ಪಡೆಯುವ ಪ್ರಯತ್ನಕ್ಕೆ ನಾವು ಮಣಿಯುವುದಿಲ್ಲ. ನಿಮ್ಮ ತೀರ್ಮಾನದಿಂದ ನಮ್ಮ ಸಭೆಯ ಹಕ್ಕಿಗೆ ಲೋಪ ಬಂದಿದೆ. ನಿಮ್ಮಷ್ಟೇ ಹೃತ್ಪೂರ್ವಕವಾಗಿ ಹೇಳಿ ಒಂದು ಅಂಶವನ್ನು ಸ್ಪಷ್ಟಪಡಿಸುತ್ತೇನೆ. ಅದು ಏನೆಂದರೆ ನೀವು ಈ ದಿನ ಬಿತ್ತಿರತಕ್ಕ ಬೀಜ ಹಿಂದೂಗಳನ್ನೂ ಮುಸಲ್ಮಾನರನ್ನೂ ಅಗಲಿಸುವ ವಿಷ ಬೀಜ. (A muslim Member, question) ಇಷ್ಟು ಹೇಳಿ ಈ ವಿಚಾರದಲ್ಲಿ ತಮ್ಮ ವರ್ತನೆಯನ್ನು ಪ್ರತಿಭಟಿಸುವ ಸಲುವಾಗಿ ನಾವು ಈಗ ಸಭಾಪರಿತ್ಯಾಗ ಮಾಡುತ್ತೇವೆ.

(ಅಷ್ಟು ಹೊತ್ತಿಗೆ ಅಂದರೆ 2 ಗಂಟೆ 30 ನಿಮಿಷದ ಹೊತ್ತಿಗೆ ಕಾಂಗ್ರೆಸ್ ಸದಸ್ಯರು ಸಭಾಪರಿತ್ಯಾಗ ಮಾಡಿದರು)

(ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು, ದಿ: 4-10-1946)

# II - ವಿಧಾನ ಸಭೆ

## 1. ಸಭಾಧ್ಯಕ್ಷರಿಗೆ ಅಭಿನಂದನೆ

(ಶ್ರೀ ಎಚ್. ಸಿದ್ದಯ್ಯನವರು ಸಭಾಧ್ಯಕ್ಷರಾಗಿ ಆಯ್ಕೆಯಾದ ಸಂದರ್ಭ)

ಸ್ವಾಮಿ, ಈ ಸಭೆಯಲ್ಲಿ ಮೊಟ್ಟ ಮೊದಲನೆಯ ಭಾಷಣ ನನ್ನದು, ಹಾಗೂ ನನ್ನ ಮೊಟ್ಟ ಮೊದಲನೆಯ ಭಾಷಣ ತಮ್ಮನ್ನು ಅಭಿನಂದಿಸುವುದು. ಇದು ನನಗೆ ಬಹಳ ಸಂತೋಷಕರವಾದ ವಿಷಯ. ತಮ್ಮ ಜೀವಮಾನ ದೇಶ ಸೇವೆಗಾಗಿ ಮುಡುಪಾಗಿದೆ. ಈ ರೀತಿ ದೇಶ ಸೇವೆಗಾಗಿ ತಮ್ಮ ಜೀವಮಾನವನ್ನು ಮುಡುಪಾಗಿಡುವ ಕೆಲ ಮಂದಿ ಮೈಸೂರಿನ ಮಹನೀಯರಿದ್ದಾರೆ. ಆ ಮಹನೀಯರಲ್ಲಿ ತಾವು ಶ್ರೇಷ್ಠತಮ ವರ್ಗಕ್ಕೆ ಸೇರಿದವರು. ಮೊದಲು ತಾವು ವಕೀಲಿ ವೃತ್ತಿಯಲ್ಲಿದ್ದಿರಿ. ಆ ವೃತ್ತಿಯಲ್ಲಿದ್ದಾಗಲೇ ತಾವು ದೇಶ ಸೇವಾ ರಂಗಕ್ಕಿಳಿದಿರಿ, ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಬೋರ್ಡು ಅಧ್ಯಕ್ಷರಾಗಿ ಕೆಲಸ ಮಾಡಿದ್ದೀರಿ. ನ್ಯಾಯ ವಿಧಾಯಕ ಸಭೆಯ ಸದಸ್ಯರಾಗಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಎದೆಗಾರಿಕೆಯಿಂದ ನುಗ್ಗಿದ ವೀರರಲ್ಲಿ ತಾವು ಬಹಳ ಕಷ್ಟ ಕಾಲದಲ್ಲಿ ಕಾಂಗ್ರೆಸ್ ಅಧ್ಯಕ್ಷ ಪೀಠವನ್ನಲಂಕರಿಸಿದ್ದೀರಿ. ಕಾಂಗ್ರೆಸ್ ಸೇವೆಯಲ್ಲಿ ತಮಗಿಂತಲೂ ಹೆಚ್ಚಾಗಿ ಕಷ್ಟಪಟ್ಟಿರತಕ್ಕವರು ಬಹುಶಃ ನಮ್ಮಲ್ಲಿಲ್ಲವೆಂದರೆ ಉತ್ಪ್ರೇಕ್ಷೆಯಲ್ಲ. ಸ್ವಾತಂತ್ರ್ಯ ಬಂದ ಹೊಸದರಲ್ಲಿ ತಾವು ಮಂತ್ರಿಮಂಡಲದಲ್ಲಿ ಸೇರಿ ರೆವಿನ್ಯೂ ಮಂತ್ರಿಯಾಗಿ ಕೆಲಸ ಮಾಡಿದಿರಿ. ಈಗ ಅತ್ಯಂತ ಗೌರವಯುತವಾದುದೂ ಮರ್ಯಾದೆಯಿಂದ ಕೂಡಿದುದೂ ಮತ್ತು ಎಲ್ಲಾ ಪಕ್ಷಗಳಲ್ಲಿಯೂ ವಿಶ್ವಾಸವನ್ನು ಸಂಪಾದಿಸಿ ಕೆಲಸ ಕಾರ್ಯಗಳನ್ನು ನಡೆಸಬೇಕಾದ ಗುರುತರ ಜವಾಬ್ದಾರಿಯುತವೂ ಆದ ಸ್ಪೀಕರ್ ಕೆಲಸವನ್ನು ಈ ಸಭೆಯವರು ತಮಗೆ ವಹಿಸಿದ್ದಾರೆ. ಈ ರೀತಿ ಬಹು ಕಾಲದಿಂದಲೂ ಜವಾಬ್ದಾರಿಯುತ ಸ್ಥಾನಗಳಲ್ಲಿದ್ದುಕೊಂಡು ಸಮರ್ಪಕವಾಗಿ ಕೆಲಸ ಮಾಡಿದ ತಮ್ಮನ್ನು ಈ ಸ್ಥಾನಕ್ಕೆ ಚುನಾಯಿಸಿದುದು ಸರ್ವ ವಿಧದಲ್ಲೂ ಸೂಕ್ತವಾಗಿದೆಯೆಂಬುದು ನನ್ನ ಅಭಿಪ್ರಾಯ. ಶಾಸನ ಸಂಪ್ರದಾಯದ ಪ್ರಕಾರ ನಾಯಕನಾಗಿದ್ದೇನೆ, ಈ ಉಭಯ ಸ್ಥಾನಗಳಿಂದಲೂ ಹೃತ್ಪೂರ್ವಕವಾದ ಅಭಿನಂದನೆಗಳನ್ನು ತಮ್ಮಲ್ಲಿ ಸಲ್ಲಿಸಿ ತಮ್ಮ ಕೆಲಸಕಾರ್ಯಗಳಲ್ಲಿ ಸಂಪೂರ್ಣ ಸಹಕಾರವನ್ನು ನೀಡುತ್ತೇನೆಂಬ ಭರವಸೆಯನ್ನು ತಮಗೆ ಕೊಡುತ್ತೇನೆ.

ತಾವು ಕಾಂಗ್ರೆಸ್ ಪಕ್ಷದ ಸದಸ್ಯರೇನೋ ಹೌದು, ಕಾಂಗ್ರೆಸ್ ಪಕ್ಷದಲ್ಲಿರತಕ್ಕ ಒಬ್ಬ ಸದಸ್ಯರಿಗೆ ಈ .ರೀತಿ ಒಂದು ಜವಾಬ್ದಾರಿ ಸ್ಥಾನ ದೊರತಿರುವುದು ನಮಗೇನೋ ಹೆಮ್ಮೆಯ ವಿಷಯ. ಆದರೂ ಕಾಂಗ್ರೆಸ್ ಪಕ್ಷಕ್ಕೆ ಸೇರದೆ ಇರತಕ್ಕವರಲ್ಲಿ ಬಹುಶಃ ಕಾಂಗ್ರೆಸ್ ಪಕ್ಷದ ವಾತಾವರಣದಲ್ಲಿ ಬೆಳೆದ ನೀವು ನಿಷ್ಪಕ್ಷಪಾತವಾಗಿ ವರ್ತಿಸುತ್ತೀರೋ ಇಲ್ಲವೋ ಎಂಬ ಅನುಮಾನ ಯಾರಲ್ಲಾದರೂ ಇದ್ದರೆ ಅದಕ್ಕೆ ಕಾರಣವಿಲ್ಲ. ಇದಕ್ಕೆ ಉದಾಹರಣೆಗೆ ಅಥವಾ ರುಜುವಾತಾಗಿ ಒಂದು ವಿಷಯ ಹೇಳಬೇಕಾಗಿದೆ. ಹಿಂದೆ ನೀವು ಮಂತ್ರಿಗಳಾಗಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದಾಗ ಆಗಿರುವ ರಿಕಾರ್ಡುಗಳಲ್ಲಿರುವುದನ್ನು ನೋಡಿದರೆ, ಕಾಂಗ್ರೆಸ್‌ನವರಿಗೆ ಎಷ್ಟು ಸಹಾಯ ಮಾಡಿದ್ದೀರೋ ಅದಕ್ಕಿಂತ ಹೆಚ್ಚಾಗಿ ಕಾಂಗ್ರೆಸೇತರರಿಗೆ ಮಾಡಿದ್ದೀರೆಂಬುದು ವ್ಯಕ್ತವಾಗುತ್ತದೆ. ಇದನ್ನು ನಾನು ಕಣ್ಣಾರೆ ಕಂಡಿದ್ದೇನಾದ್ದರಿಂದ ಹೆಚ್ಚಿನ ರುಜುವಾತು ಅನಾವಶ್ಯಕ. ಅನೇಕರಿಗೂ ಇದು ಗೊತ್ತಿದೆ. ಮಂತ್ರಿಗಳಾಗಿದ್ದಾಗಲೂ ಪಾರ್ಟಿ ಸದಸ್ಯರಾಗಿ ವಿರೋಧ ಪಕ್ಷದವರೊಡನೆ ಹೋರಾಡಬೇಕಾಗಿ ಬಂದಿದ್ದ ವಾತಾವರಣದಲ್ಲಿಯೂ ನಿಷ್ಪಕ್ಷಪಾತ ಮನೋಭಾವವನ್ನು ತೋರಿಸಿರತಕ್ಕ ತಾವು ಈ ದಿವಸ ಇದೇ ನಿಷ್ಪಕ್ಷಪಾತ ಭಾವನೆಯ ಪರಿಣಾಮವನ್ನು ಸಭಾ ಸದಸ್ಯರೆಲ್ಲರಲ್ಲಿಯೂ ಉಂಟು ಮಾಡತಕ್ಕ ಯೋಗ್ಯತೆ, ಸೌಜನ್ಯ, ಸ್ವತಂತ್ರ ಮನೋಭಾವ, ಸತ್ಯವಾದ ನಡತೆ ಇವುಗಳನ್ನು ಹೊಂದಿದ್ದೀರಿ ಎಂಬುದಾಗಿ ಸಾರಿ ಹೇಳುತ್ತೇನೆ. ಇಂತಹ ಗುಣ ತಮ್ಮಲ್ಲಿ ಇಲ್ಲವೆಂದು ಕಂಡುಬಂದಿದ್ದರೆ ಕಾಂಗ್ರೆಸ್ ಪಕ್ಷದವರು ತಮ್ಮನ್ನು ಈ ಪೀಠಕ್ಕೆ ಕುಳ್ಳಿರಿಸುತ್ತಿರಲಿಲ್ಲವೆಂದು ಹೇಳಿದರೆ ಇದೊಂದು ಟೀಕೆ ಎಂದು ಯಾರು ಭಾವಿಸಲಾರರು. ಎದುರು ಪಕ್ಷದವರಿಗೂ ಕಾಂಗ್ರೆಸ್ ಪಕ್ಷದವರಿಗೂ ಇತರ ಸದಸ್ಯರಿಗೂ ಈ ರೀತಿ ಒಂದು ವಿಶ್ವಾಸ ಬೆಳೆಯಲಿ ಎಂಬುದಕ್ಕಾಗಿ ಈ ವಾದವನ್ನು ಸಭೆಯ ಮುಂದಿಟ್ಟಿದ್ದೇನೆ. ತಮ್ಮ ಗುರುತರವಾದ ಜವಾಬ್ದಾರಿಯಲ್ಲಿ ಸರ್ವ ಸಮರ್ಪಕವಾಗಿ ಕೆಲಸಕಾರ್ಯಗಳನ್ನು ನಡೆಸಿಕೊಂಡು ಹೋಗುವುದಕ್ಕೆ ಪರಮಾತ್ಮನು ತಕ್ಕ ಎಲ್ಲಾ ಗುಣಗಳನ್ನು ತಮಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಕರುಣಿಸಲಿ ಎಂದು ನಾನು ಪ್ರಾರ್ಥಿಸುತ್ತೇನೆ.

ನನ್ನ ಭಾಷಣವನ್ನು ಮುಗಿಸುವುದಕ್ಕೆ ಮೊದಲು ಸುಮಾರು ನಾಲ್ಕು ವರ್ಷಗಳ ಕಾಲ ಈ ಸಭೆಯ ಅಧ್ಯಕ್ಷರ ಕೆಲಸವನ್ನು ಮಾಡಿದ ಶ್ರೀಮಾನ್ ವೆಂಕಟಪ್ಪನವರ ಉಪಕಾರವನ್ನು ಕೂಡ ನಾವು ಈ ಸಂದರ್ಭದಲ್ಲಿ ಸ್ಮರಿಸಬೇಕಾಗಿದೆ. ಅವರ

ಗಾಂಭೀರ್ಯ, ಘನತೆ, ಸೌಜನ್ಯಗಳು ಸಭಾ ಕಾರ್ಯಕಲಾಪಗಳನ್ನು ಬಹಳ ಯಶಸ್ವಿಯಾಗಿ ನಡೆಯುವಂತೆ ಮಾಡಿವೆ. ಅನೇಕ ಸತ್‌ಸಂಪ್ರದಾಯಗಳನ್ನು ಅವರು ಘೋಷಣೆ ಮಾಡಿದ್ದಾರೆ. ಅವರಿಗೆ ನಾನು ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಅರ್ಪಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

(ವಿಧಾನ ಸಭಾ ಕಲಾಪ, ದಿ: 18-6-1952)

## 2) ರಾಜ ಪ್ರಮುಖರ ಭಾಷಣದ ಮೇಲೆ ನಡೆದ ಚರ್ಚೆಗೆ ಉತ್ತರ (1952)

ಸ್ವಾಮಿ, ಈ ರಾಜ ಭಾಷಣದ ಮೇಲೆ ಮಾಡಲ್ಪಟ್ಟ ಭಾಷಣಗಳನ್ನು ಸಾವಧಾನವಾಗಿಯೂ, ಸಹೃದಯನಾಗಿಯೂ ಕೇಳಿದೆ. ರಾಜ ಭಾಷಣವು ಬಹಳ ಚಿಕ್ಕದು ಎನ್ನತಕ್ಕ ಆಕ್ಷೇಪಣೆ ನಮ್ಮ ಎದುರು ಪಕ್ಷದವರಿಂದ ಮಾಡಲ್ಪಟ್ಟಿದೆ. ನಾನಾದರೋ ಸತ್ಸಂಪ್ರದಾಯಗಳನ್ನು ಸ್ಥಾಪಿಸಬೇಕೆಂಬ ತೀವ್ರಾಕಾಂಕ್ಷೆಯುಳ್ಳವನಾಗಿದ್ದೇನೆ. ಆ ದೃಷ್ಟಿಯಿಂದ ನಾನು ಈ ಭಾಷಣವು ಈಗಿರತಕ್ಕ ರೂಪದಲ್ಲಿ ಮತ್ತು ಪ್ರಮಾಣದಲ್ಲಿ ಇರತಕ್ಕಂಥಾದ್ದು ಸರಿಯೇ ಅಲ್ಲವೇ ಎಂಬುದನ್ನು ಸಭೆಯ ಗಮನಕ್ಕೆ ತರಬೇಕೆಂದಿಚ್ಛಿಸುತ್ತೇನೆ.

ರಾಜ ಭಾಷಣವನ್ನು ಮಾತಕ್ಕಂಥ ಸಂಪ್ರದಾಯವನ್ನು ನಾವು ಇಂಗ್ಲೀಷ್ ರಾಜ್ಯ ಪದ್ಧತಿಯಿಂದ ತೆಗೆದುಕೊಂಡಿದ್ದೇವೆ. ಆದರೆ ಇಂಗ್ಲೀಷ್ ರಾಜ್ಯ ಪದ್ಧತಿಯ ಪದ್ಧತಿಯನ್ನು ಕುರುಡು ನಂಬಿಕೊಂಡು ಅನುಸರಿಸಬೇಕೆಂಬ ವಾದ ನನ್ನದೇನೂ ಅಲ್ಲ, ಇಲ್ಲಿನ ಸಮಯ, ಸಂದರ್ಭಗಳಿಗೆ ಅನ್ವಯಿಸುವ ಹಾಗೆ ನಮ್ಮ ಸಂಪ್ರದಾಯವನ್ನು ರೂಪಿಸಿಕೊಳ್ಳುವ ಸ್ವಾತಂತ್ರ್ಯ, ಹಕ್ಕು ನಮ್ಮ ಕೈಯಲ್ಲಿ ಇದ್ದೇ ಇದೆ. ಆದರೆ, ಅದು ಹೇಗೆ ಉಂಟಾಯಿತು. ಅದರ ವ್ಯಾಪ್ತಿಯೇನು ಎಂಬ ವಿಷಯದಲ್ಲಿ ಒಂದೆರಡು ವಾಕ್ಯಗಳನ್ನು ಮಾತ್ರ ಈಗ ಓದುತ್ತೇನೆ.

``The King's Speech gives in broad outline the legislative programme of the Session. Comments upon the position of the crown colonies and in a special paragraph of nearly an invariable form an address to the Commons only. It promises an early submission of the Estimates for the wants of the coming year."

ಅದರಲ್ಲಿ ಹೊರಗಡೆ ವಿಷಯಗಳು ಈಗ ನಮಗೆ ಅನ್ವಯಿಸುವುದಿಲ್ಲ. ಮುಖ್ಯವಾದ ಅಂಶವೆಂದರೆ, ಒಂದು ಅಧಿವೇಶನವನ್ನು ಕರೆದರೆ ಅದರಲ್ಲಿ ಬರತಕ್ಕಂಥ ವಿಷಯಗಳನ್ನು ಪ್ರಸ್ತಾಪಿಸುವುದು ಮುಖ್ಯವಾದ ಉದ್ದೇಶ. ಎರಡನೆಯದು, ಸರ್ಕಾರದವರು ಅನುಸರಿಸತಕ್ಕ ನೀತಿಯನ್ನು ಪ್ರತಿಪಾದಿಸುವುದು. ಈ ಎರಡು ಕೆಲಸಗಳು, ಇಂಗ್ಲಿಷ್‌ನಲ್ಲಿ ಹೇಳಬೇಕಾದರೆ, Legislative programme and the policy of the Government in regard to major matters ಇದು ರಾಜ ಭಾಷಣದಲ್ಲಿರಬೇಕಾದದ್ದು ಮುಖ್ಯ. ಆ ದೃಷ್ಟಿಯಿಂದ ತಾವು ಈ ರಾಜ ಭಾಷಣವನ್ನು ಪರಿಶೀಲಿಸಿದರೆ, ಮೊದಲನೆಯದಾಗಿ ಎಲ್ಲರ ಗಮನವನ್ನು ಸೆಳೆದಿರತಕ್ಕಂಥ, ಎಲ್ಲರ ಮನಸ್ಸಿನಲ್ಲಿಯೂ ಸಂಪೂರ್ಣವಾಗಿ ತುಂಬಿರತಕ್ಕಂಥ ಆಹಾರ ನೀತಿಯನ್ನು ಇಲ್ಲಿ ಪ್ರತಿಪಾದನೆ ಮಾಡಿದೆ. ಎರಡನೆಯದಾಗಿ, ಕಷ್ಟದ, ಕ್ಷಾಮದ ಪ್ರದೇಶಗಳೆಂದು ಏನು ಹೇಳುತ್ತೇವೆಯೋ ಆ ಪ್ರದೇಶಗಳ ವಿಷಯವನ್ನು ಪ್ರಸ್ತಾಪ ಮಾಡಿದೆ. ಮೂರನೆಯದಾಗಿ ವಿದ್ಯಾಭ್ಯಾಸದ ಪದ್ಧತಿಯನ್ನು ಮಾರ್ಪಾಡು ಮಾಡಬೇಕೆಂದು ಪ್ರಸ್ತಾಪಿಸಿದೆ. ನಾಲ್ಕನೆಯ ವಿಷಯ, ಕೈಗಾರಿಕೆಗಳನ್ನು ಉತ್ತಮ ರೀತಿಯಲ್ಲಿ ನಡೆಸತಕ್ಕಂಥ ವ್ಯವಸ್ಥೆಯನ್ನು ಮಾಡಬೇಕೆಂಬ ಅಂಶವನ್ನು ಇದರೊಳಗಳವಡಿಸಿದೆ. ಇನ್ನು ಐದನೆಯದು ಮತ್ತು ಕೊನೆಯದು. 15 ಮಸೂದೆಗಳು ತಮ್ಮ ಅವಗಾಹನೆಗೆ ಬರುತ್ತವೆಂದು ತಿಳಿಸಿದೆ. ಆದ್ದರಿಂದ ರಾಜ ಭಾಷಣ ಉದ್ದೇಶವೇನಿದೆ ಅದೆಲ್ಲವೂ ಸಂಪೂರ್ಣವಾಗಿ ಈ ಭಾಷಣದಲ್ಲಿ ಪರಿಪಾಲಿಸಲ್ಪಟ್ಟಿದೆಯೆಂಬುದನ್ನು ವಿನಯಪೂರ್ವಕವಾಗಿ ನಾನು ಈ ಸಭೆಗೆ ತಿಳಿಸಬೇಕಾಗಿದೆ.

ಈ ಹೊಸ ಮಂತ್ರಿಮಂಡಲ ಬಂದ ಮೇಲೆ ಇದರ ಮೇಜರ್ ಪಾಲಿಸಿಗಳೇನೆಂದು ಕೆಲವರು ಕೇಳಬಹುದು. ಕೇಳುವುದೂ ಸಹಜವೇ. ಅದಕ್ಕೆ ಸರಿಯಾಗಿ ನಮ್ಮ ಆಹಾರ ನೀತಿ, ವಿದ್ಯಾಭ್ಯಾಸದ ನೀತಿ, ಕೈಗಾರಿಕಾ ನೀತಿಯೇನೆಂಬುದನ್ನು ಇಲ್ಲಿ ಪ್ರತಿಪಾದಿಸಿದೆ. ಸದಸ್ಯರು ಮುಖ್ಯವಾಗಿ ಎದುರು ಪಕ್ಷದ ಸದಸ್ಯರು ಮತ್ತು ನಾಯಕರು, ಈ ಮೂರು ವಿಷಯಗಳಲ್ಲಿ ನನಗೆ ಸಲಹೆಗಳನ್ನು ಕೊಟ್ಟಿದ್ದರೆ ಚೆನ್ನಾಗಿತ್ತು. ಕೆಲವು ವಿಷಯಗಳಲ್ಲೇನೋ ಅವರುಗಳು ಸಲಹೆಗಳನ್ನು ಕೊಟ್ಟೂ ಇದ್ದಾರೆ. ಆದರೆ ನಾನು ನಿರೀಕ್ಷಿಸುತ್ತಿದ್ದುದು ಎಲ್ಲಕ್ಕಿಂತಲೂ ದೊಡ್ಡ ವಿಶೇಷ ಪರಿಣಾಮಕಾರಿಯಾದ ವಿಷಯವಾದ ವಿದ್ಯಾಭ್ಯಾಸ ಪದ್ಧತಿಯ ವಿಷಯ. ಅಷ್ಟು ಹೆಚ್ಚಾಗಿ ಪ್ರಸ್ತಾಪ ಮಾಡಲ್ಪಡಲಿಲ್ಲ. ಆದರೂ ಚಿಂತೆಯಿಲ್ಲ. ತಿರುಗಿ ನೋಡೋಣ.

ಅಂತೂ, ಹೀಗೆ ರಾಜ ಭಾಷಣದಲ್ಲಿ ನೀತಿಯ ವಿಚಾರ ಮತ್ತು ಈ ಅಧಿವೇಶನದಲ್ಲಿ ಬರತಕ್ಕಂಥ ಮಸೂದೆಗಳ ವಿಚಾರಗಳನ್ನು ಪ್ರಸ್ತಾವಮಾಡಿ ಸರ್ಕಾರ ಯಾವ್ಯಾವ ಇಲಾಖೆಯಲ್ಲಿ ಏನೇನು ಕೆಲಸ ಮಾಡಿದೆ, ಮುಂದೇನು ಮಾಡಬೇಕೆಂದಿದೆ - ಇದನ್ನೆಲ್ಲಾ ಹಣಕಾಸಿನ ಮಂತ್ರಿಗಳ ಭಾಷಣದಲ್ಲಿ ಪ್ರಸ್ತಾಪ ಮಾಡುವುದಕ್ಕೆ ಬಿಟ್ಟಿರುವುದು ಯುಕ್ತವಾಗಿದೆ. ರಾಜ ಭಾಷಣವು ಇದ್ದು ಹಣಕಾಸಿನ ಮಂತ್ರಿಗಳ ಭಾಷಣವೂ ಇರುವ ಸಂದರ್ಭದಲ್ಲಿ ಒಂದರೊಂದರ ವ್ಯಾಪ್ತಿಯನ್ನೂ ಇಷ್ಟೇ ಎಂದು ಸ್ವಲ್ಪ ಹೆಚ್ಚು ಕಡಿಮೆ ತಿಳಿದುಕೊಳ್ಳಬೇಕಾದದ್ದು ನ್ಯಾಯ, ರಾಜ ಭಾಷಣದಲ್ಲಿ ಹಣಕಾಸಿನ ಮಂತ್ರಿಗಳು ಮಾಡತಕ್ಕ ಭಾಷಣವನ್ನು ಪ್ರಸ್ತಾಪಿಸುವುದಾಗಲೀ ಅಥವಾ ರಾಜ ಭಾಷಣವನ್ನು ಏನೂ ಇಲ್ಲದ ನೀರಸ ಭಾಷಣವನ್ನಾಗಿ ಮಾಡುವುದಾಗಲೀ ಎರಡೂ ಸರಿಯಲ್ಲ. ಆ ದೃಷ್ಟಿಯಿಂದ Policy matters ಮತ್ತು Legislative matters ಗಳನ್ನು ಈ ರಾಜ ಭಾಷಣದಲ್ಲಿ ಸೇರಿಸಿದ್ದೇವೆ. ಅದು ಸಮರ್ಪಕವಾಗಿಯೂ, ಸಂಪ್ರದಾಯಕ್ಕನುಸಾರವಾಗಿಯೂ ಇದೆಯೆಂದು ನನ್ನ ಅರಿಕೆ. ಈ ರೀತಿಯಾಗಿ ನಾನು ಪ್ರತಿಪಾದಿಸಿದ ಮೇಲೆ, ಈ ನಾಲ್ಕು ವಿಷಯಗಳ ಮೇಲೆ ಸಭಾ ಸದಸ್ಯರು ಮಾಡಿರತಕ್ಕ ಆಕ್ಷೇಪಣೆಗಳಿಗೆ ಮತ್ತು ಸೂಚನೆಗಳಿಗೆ ಉತ್ತರ ಕೊಡಬೇಕಾದುದ್ದು ನನ್ನ ಕರ್ತವ್ಯ. ಮೊದಲನೆಯದಾಗಿ, ಮಾನ್ಯ ಸದಸ್ಯರಾದ ಶ್ರೀಮಾನ್ ಕೆ. ಪಟ್ಟಾಭಿರಾಮನ್‌ರವರು ಎರಡು ವಿಷಯಗಳನ್ನು ಹೇಳಿದರು. ಅದು ಸಾವರಿನ್ ಡೆಮೋಕ್ರಾಟಿಕ್ ರಿಪಬ್ಲಿಕ್ ಎಂಬುದನ್ನು ಸಾರ್ಥಕಪಡಿಸಬೇಕೆಂತಲೂ ಮತ್ತು ಹೊಸದಾಗಿ ಅನುಷ್ಠಾನಕ್ಕೆ ಬಂದಿರತಕ್ಕ ರಾಜ್ಯಾಂಗ ರಚನಾಕ್ರಮವನ್ನು ನ್ಯಾಯವಾದ ರೀತಿಯಲ್ಲಿ in its true spirit ಜಾರಿಗೆ ತರಬೇಕೆಂದೂ ಇದೆ. ಈ ವಿಷಯದಲ್ಲಿ ಇಲ್ಲಿರತಕ್ಕ ಯಾವ ಸದಸ್ಯರಿಗೂ ಕೂಡ ಪರಸ್ಪರ ಭಿನ್ನಾಭಿಪ್ರಾಯವಿಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. (Hear, Hear) ಅಲ್ಲದೆ ಆ ವಿಷಯವನ್ನು ಅವರು ಒತ್ತಿ ಹೇಳಿದ್ದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ಏಕೆಂದರೆ, ನಾವು ಅನೇಕರು ಅದನ್ನು ಮರೆತುಬಿಡುತ್ತೇವೆ. ಅನೇಕ ವೇಳೆ ವಾರಗಳ ಹೆಸರುಗಳು ಕೂಡ ನಮಗೆ ಜ್ಞಾಪಕದಲ್ಲಿರುವುದಿಲ್ಲ. ಹಾಗೆಯೇ ಅನೇಕರಿಗೆ ಯುಗಪರಿವರ್ತನೆಯಾಗಿದೆಯೆಂದು ಕೂಡ ಮರೆತು ಹೋಗಿರುತ್ತದೆ. ಈಗ ನಾನು ತಮ್ಮೆಲ್ಲರ ಗಮನವನ್ನು ಸೆಳೆಯುವುದು ನಾವು ತೆಗೆದುಕೊಂಡಿರುವ ಪ್ರಮಾಣವಚನಕ್ಕೆ ಇಂಡಿಯಾ ಸರ್ಕಾರದ ಅಧ್ಯಕ್ಷರಾಗಲಿ, ಕೇಂದ್ರ ಸರ್ಕಾರದ ಮಂತ್ರಿಗಳಾಗಲಿ, ಪ್ರಾಂತಗಳ ಗವರ್ನರುಗಳಾಗಲಿ, ರಾಜ

ಪ್ರಮುಖರಾಗಲಿ ಅಥವಾ ಈ ಸಭಾ ಸದಸ್ಯರಾಗಲಿ, ಪ್ರತಿಯೊಬ್ಬರೂ ಈ ದಿವಸ ಪ್ರಮಾಣ ವಚನವನ್ನು ಸ್ವೀಕರಿಸುವುದು ಯಾವ ವ್ಯಕ್ತಿಗೋಸ್ಕರವೂ ಅಲ್ಲ ಅದು ಭಾರತದ ರಾಜ್ಯಾಂಗ ಸಂವಿಧಾನಕ್ಕಾಗಿ, ಆ ಗ್ರಂಥಕ್ಕಾಗಿ. ಆದ್ದರಿಂದ ನಮ್ಮ ಪೂಜ್ಯ ಭಾವನೆ, ಹಿಂದೆ ಯಾವ ವ್ಯಕ್ತಿಯಲ್ಲೇ ಇದ್ದರೂ ಅದನ್ನು ಈ ಹೊಸ ಯುಗಕ್ಕೆ ಅನುಗುಣಿಸುವುದು ಅವಶ್ಯಕ. We must owe allegiance to the Constitution not to any particular individual.

ಆದ್ದರಿಂದ ನಾವು ಯಾವ ಪ್ರಮಾಣ ವಚನವನ್ನು ಸ್ವೀಕರಿಸಿದ್ದೇವೊ ಆ ಪ್ರಮಾಣ ವಚನಕ್ಕನುಗುಣವಾಗಿ ಮನಸಾ ವಾಚಾ ಕಾಯ ನಡೆದುಕೊಳ್ಳಬೇಕಾದದ್ದು ನಮ್ಮ ಪವಿತ್ರ ಕರ್ತವ್ಯ. ಆ ದೃಷ್ಟಿಯಿಂದ ಶ್ರೀಮಾನ್ ಪಟ್ಟಾಭಿರಾಮನ್‌ರವರು ಒಂದು ಸೂಚನೆಯನ್ನು ಕೊಟ್ಟಿದ್ದಾರೆ. ಈಗಲೂ ಶಾಲೆಗಳಲ್ಲಿ ''ಕಾಯೌ ಶ್ರೀ ಗೌರೀ'' ಎಂತಲೇ ಹಾಡುತ್ತಿದ್ದಾರೆ ಎಂದು ಹೇಳಿದರು.

**ಶ್ರೀ ಕೆ. ಪಟ್ಟಾಭಿರಾಮನ್‌ರವರು** : ''ಜನಗಣಮನ'' ಹಾಡಿನ ಮೇಲೆ ''ಕಾಯೌ ಶ್ರೀ ಗೌರೀ'' ಹಾಡುತ್ತಿದ್ದಾರೆ.

**ಶ್ರೀ ಕೆ. ಹನುಮಂತಯ್ಯನವರು** : ಹಾಗೆಯೇ ಮೈಸೂರು ದೇಶದಲ್ಲಿ ಎರಡು ಧ್ವಜಗಳು ಹಾರಾಡುತ್ತಿರುವುದು ತಮ್ಮ ಗಮನಕ್ಕೆ ಬಂದಿದೆ. ಒಂದು, ಹಿಂದಿನಿಂದ ಬಂದ ಮೈಸೂರು ಧ್ವಜ, ಇನ್ನೊಂದು, ರಾಷ್ಟ್ರ ಧ್ವಜ. ನಾವೀಗ ಈ ಪ್ರಮಾಣ ವಚನಕ್ಕನುಸಾರವಾಗಿ ನಡೆದುಕೊಳ್ಳಬೇಕಾದುದ್ದು ಸರ್ಕಾರದ ಮತ್ತು ಸಭಾ ಸದಸ್ಯರ ಪವಿತ್ರ ಕರ್ತವ್ಯ ಎಂದು ಹೇಳಿದ ಮೇಲೆ, ಇನ್ನು ಮುಂದೆ ಮೈಸೂರು ದೇಶದಲ್ಲಿ ಒಂದು ಧ್ವಜ ಮತ್ತು ಒಂದು ರಾಷ್ಟ್ರಗೀತೆ ಇರುವುದು ಅವಶ್ಯಕ. ಆದ್ದರಿಂದ ನಮ್ಮ ಮಂತ್ರಿಮಂಡಲದವರು ಇನ್ನು ಮುಂದೆ ಮೈಸೂರಿನಲ್ಲಿ ಒಂದೇ ಧ್ವಜ ಮಾತ್ರ ಹಾರಾಡಬೇಕೆಂದು ತೀರ್ಮಾನಿಸಿದ್ದಾರೆ.

ಆದುದರಿಂದ, ನಮ್ಮ ಮಂತ್ರಿಮಂಡಲದವರು ತೀರ್ಮಾನಿಸಿರುವಂತೆ, ಇನ್ನು ಮುಂದೆ ಮೈಸೂರಿನಲ್ಲಿ ಒಂದು ಧ್ವಜ ಮಾತ್ರ ಹಾರಡಬೇಕು ಮತ್ತು ಒಂದು ರಾಷ್ಟ್ರಗೀತೆಯನ್ನು ಮಾತ್ರ ಹಾಡಬೇಕು ಎಂದು ಸರ್ಕಾರಿ ಆಜ್ಞೆಯನ್ನು ಹೊರಡಿಸುವುದಕ್ಕೆ ತಕ್ಕ ಏರ್ಪಾಡನ್ನು ನಾನು ಮಾಡುತ್ತೇನೆ.

760-6

ಇನ್ನು ಆಹಾರದ ವಿಷಯವನ್ನು ಪ್ರಸ್ತಾಪ ಮಾಡಿದರು. ನನ್ನ ಹಲವು ಮಾನ್ಯ ಮಿತ್ರರು ಈ ಮಂತ್ರಿಮಂಡಲ ಅಧಿಕಾರಕ್ಕೆ ಬಂದ ಕೂಡಲೇ ಕೈಗೊಂಡ ಆಹಾರ ನೀತಿಯ ವಿಚಾರವಾಗಿ ಉತ್ತೇಜನಕರವಾದ ಮಾತುಗಳನ್ನಾಡಿದ್ದಾರೆ. ಆ ಮಾತುಗಳಿಗಾಗಿ ನಾನು ಕೃತಜ್ಞನಾಗಿರಬೇಕಾಗಿದೆ. ಆದರೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಬೇಕೆಂಬ ಸಲಹೆ ಬಂದಿದೆ. ಈ ಮುಂದಿನ ಹೆಜ್ಜೆಯನ್ನಿಟ್ಟು ಸಂಪೂರ್ಣವಾಗಿ ಹತೋಟಿಯನ್ನು ತೆಗೆದುಹಾಕಬೇಕೆಂದು ಮೊದಲು ನನ್ನ ಮನಸ್ಸಾದರೂ ಈ ರೀತಿ ಇತ್ತು. ಈ ರೀತಿ ಕೊನೆಯ ತೀರ್ಮಾನ ಮಾಡುವುದಕ್ಕೆ ಮೊದಲು ಶಾಸನ ಸಭೆಯ ಅಭಿಪ್ರಾಯವನ್ನು ಪಡೆಯಬೇಕೆಂಬ ಸದುದ್ದೇಶದಿಂದ ಕಾಯುತ್ತಿದ್ದೇನೇ ಹೊರತು ಯಾವ ಭಯ ಭ್ರಾಂತಿಯಿಂದಾಗಲೀ ಅಲ್ಲವೆಂದು ಅರಿಕೆ ಮಾಡಿಕೊಳ್ಳುತ್ತೇನೆ. ಯಾವಾಗ administrative responsibility ಇರುತ್ತದೆಯೋ ಆಗ ಇದು ಭಯ, ದಿಗಿಲು, ಭ್ರಾಂತಿಯನ್ನುಂಟು ಮಾಡುವುದು ಸ್ವಾಭಾವಿಕ, ಇದನ್ನು ಹೋಗಲಾಡಿಸುವುದು ತಮ್ಮೆಲ್ಲರ ಕರ್ತವ್ಯ. ಈಗ ಒಬ್ಬ ಸದಸ್ಯರನ್ನು ಬಿಟ್ಟರೆ ಮಿಕ್ಕೆಲ್ಲರೂ ಆಹಾರ ಹತೋಟಿ ವ್ಯವಸ್ಥೆ ಹೋಗಬೇಕೆಂಬುದನ್ನು ನಿರ್ದಿಷ್ಟವಾಗಿ ಹೇಳಿದ್ದೀರಿ. ಇದನ್ನು ನಾನು ಗಮನದಲ್ಲಿಟ್ಟುಕೊಳ್ಳುತ್ತೇನೆ.

**ಶ್ರೀ ಎಚ್.ಕೆ. ಶಿವರುದ್ರಪ್ಪನವರು (ಗುಂಡ್ಲುಪೇಟೆ, ಹೆಗ್ಗಡದೇವನಕೋಟೆ):** ಹಾಗೆಯೇ ಈ ಆಶ್ವಾಸನೆಯನ್ನೂ ಕೊಟ್ಟು ಬಿಡಿ. ಎಲ್ಲರ ಅಭಿಪ್ರಾಯವೂ ಹೀಗಿರುವಾಗ ಕೊಡುವುದಕ್ಕೇನು ಭಯ?

**ಶ್ರೀ ಕೆ. ಹನುಮಂತಯ್ಯನವರು** : ನಮ್ಮ ಆಹಾರ ಮಂತ್ರಿಗಳು ಡೆಲ್ಲಿಗೆ ಹೋಗಿದ್ದಾರೆ. ಡೆಲ್ಲಿಯಲ್ಲಿ ಕೇಂದ್ರ ಸರ್ಕಾರದವರೊಡನೆ ಸಮಾಲೋಚನೆ ಮಾಡಿಕೊಂಡು ಬಂದ ಮೇಲೆ ಅವರ ಅಭಿಪ್ರಾಯ ಹೇಗಿದೆ ಎಂಬುದನ್ನು ತಿಳಿದುಕೊಳ್ಳೋಣ. ಎಲ್ಲಕ್ಕಿಂತ ಹೆಚ್ಚಾಗಿ ಯಾವ ಪ್ರದೇಶದ ಪ್ರಜೆಗಳಿಗೆ ಈ ಕಷ್ಟದ ಬೇಗೆ ತಾಗುತ್ತಿದೆಯೋ ಆ ಪ್ರದೇಶದ ಜನರ ಅಭಿಪ್ರಾಯವನ್ನು ಕೂಡ ಶೇಖರಿಸಿದ್ದೇನೆ. ಬೆಂಗಳೂರು ಸಿಟಿ, ಮೈಸೂರು ಸಿಟಿ, ದಾವಣಗೆರೆ ಈ ಪ್ರದೇಶಗಳಲ್ಲಿ ಸ್ಟ್ಯಾಚುಟರಿ ರೇಷನಿಂಗ್ ಇರುವುದು ತಮಗೆ ಗೊತ್ತಿದೆ. ಈ ಪ್ರದೇಶಗಳ ಜನರ ಅಭಿಪ್ರಾಯ ಹೇಗಿದೆ ಎಂಬುದನ್ನು ಮುನಿಸಿಪಾಲಿಟಿ ಮತ್ತು ಕಾರ್ಪೊರೇಷನ್ ಸದಸ್ಯರ ಅಭಿಪ್ರಾಯವನ್ನು ಕೇಳಿ ಪಡೆದಿದ್ದೇನೆ. ಈ ರೀತಿ ಎಲ್ಲರ ಅಭಿಪ್ರಾಯ ಮತ್ತು ವಿಷಯಗಳನ್ನು ಶೇಖರಿಸಿ, ಈಗ ಒಂದು ನಿರ್ಧಾರಕ್ಕೆ ಬರುವುದಕ್ಕೆ ಅನುಕೂಲವಾದ ವಾತಾವರಣವಿದೆ. ನಿರ್ಧಾರವನ್ನು ಈ

ಅಧಿವೇಶನ ಮುಗಿಯುವುದರೊಳಗೆಯೇ ನಮ್ಮ ಮಂತ್ರಿಮಂಡಲದವರು ಕೈಕೊಳ್ಳುತ್ತಾರೆಂಬ ನಂಬಿಕೆಯನ್ನು ತಮ್ಮ ಮುಂದಿಡುತ್ತೇನೆ. ಆದರೆ, ಈ ರಾಜ ಭಾಷಣದಲ್ಲಿ ವಿವರಿಸಿರುವ ಹಾಗೆ ಪುನಃ ಯಾವ ಕಾರಣದಿಂದಲೇ ಆಗಲಿ ಆಹಾರ ಧಾನ್ಯಗಳ ಬೆಲೆ ಹೆಚ್ಚಿ ಆಹಾರ ಅಭಾವವುಂಟಾಗಿ ಜನರಿಗೆ ಎಲ್ಲಿ ತೊಂದರೆಯಾದಿತೋ ಎಂಬ ಶಂಕೆ ಮನಸ್ಸಿನಲ್ಲಿದೆ. ಮಂತ್ರಿಮಂಡಲದ ಮನಸ್ಸಿನಲ್ಲಿರುವ ಈ ಶಂಕೆಯನ್ನು ಸಭೆಗೂ ಸಾರ್ವಜನಿಕರಿಗೂ ಸಾರಿದ್ದೇನೆ. ಪ್ರಜಾಭಿಪ್ರಾಯಕ್ಕನುಗುಣವಾಗಿ ನಡೆಯುವುದು ನನ್ನ ಕರ್ತವ್ಯ. ಈ ಕರ್ತವ್ಯ ಪರಿಪಾಲನೆಯಲ್ಲಿ ಮುಂದೆ ಕಷ್ಟವುಂಟಾದರೆ, ಅಪಕೀರ್ತಿ ಬಂದರೆ ನನ್ನೊಬ್ಬನ ತಲೆಯ ಮೇಲೆ ಹಾಕಬಾರದು. ನಿಮ್ಮ ಅಭಿಪ್ರಾಯಕ್ಕನುಗುಣವಾಗಿ ಪೂರ್ತಿಯಾಗಿ ಕಂಟ್ರೋಲುಗಳನ್ನು ತೆಗೆದು ಹಾಕಿದರೆ ಆ ಮೂಲಕ ಉಂಟಾಗುವ ಕೀರ್ತಿಗೂ ಅಪಕೀರ್ತಿಗೂ ತಾವೆಲ್ಲರೂ ಭಾಗಿಗಳಾಗಬೇಕಾಗುತ್ತದೆ.

**ಜನಾಬ್ ಜೆ. ಮಹಮ್ಮದ್ ಇಮಾಂ ರವರು** : ನಮ್ಮ election pledge ನಲ್ಲೇ ನಾವು ಇದನ್ನು ಬಹಿರಂಗಪಡಿಸಿದ್ದೇವೆ. So we are equally responsible.

**ಶ್ರೀ ಕೆ. ಹನುಮಂತಯ್ಯನವರು** : ಎರಡನೆಯ ವಿಷಯ - ಮೈಸೂರು ದೇಶದಲ್ಲಿ ಚಿತ್ರದುರ್ಗ, ತುಮಕೂರು, ಬೆಂಗಳೂರು, ಕೋಲಾರ ಈ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಉಂಟಾಗಿರತಕ್ಕ ಕಷ್ಟ ಪರಿಸ್ಥಿತಿ. ಈ ಬಗ್ಗೆ ಸರ್ಕಾರದವರು ಏನೇನು ಕಾರ್ಯಕ್ರಮಗಳನ್ನು ತೆಗೆದುಕೊಂಡಿದ್ದೇವೆಂಬುದು ಈಗಾಗಲೇ ಎಲ್ಲರಿಗೂ ಗೊತ್ತಿದೆ. ವಿವರಗಳನ್ನು ಬಡ್ಜೆಟ್ ಭಾಷಣದಲ್ಲಿ ಬೇಕಾದರೆ ಪ್ರಸ್ತಾಪ ಮಾಡಬಹುದು. ಶ್ರೀಮಾನ್ ಪಟ್ಟಾಭಿರಾಮನ್‌ರವರು ಹೇಳಿದಂತೆ ಭಾರತೀಯ ಸಂಸ್ಕೃತಿ ಮತ್ತು ಸಂಪ್ರದಾಯದಲ್ಲಿ ಒಂದು ಗಾದೆಯಿದೆ. ನೀತಿ ಕಡಿಮೆಯಾದಾಗ ಕ್ಷಾಮ ಬರುತ್ತದೆಂದು, ಗಾದೆ ವೇದಕ್ಕೆ ಸಮಾನವೆಂಬುದನ್ನು ಸಂಬಂಧಪಟ್ಟವರೆಲ್ಲರೂ ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಅದು ಅವರವರ ಅಂತರಾತ್ಮನಿಗೆ ಸಂಬಂಧಪಟ್ಟ ವಿಷಯ. ಇದನ್ನು ಹೆಚ್ಚು ಪ್ರಸ್ತಾಪ ಮಾಡಬೇಕಾಗಿಲ್ಲ. ಮುಖ್ಯವಾಗಿ ಸರ್ಕಾರದವರು ಈ ವಿಷಯದಲ್ಲಿ ಏನೇನು ಕಾರ್ಯಕ್ರಮವನ್ನು ಕೈಕೊಳ್ಳಬೇಕೋ ಅದೆಲ್ಲವನ್ನು ಕೈಕೊಂಡಿದ್ದೇವೆಂದು ಧೈರ್ಯವಾಗಿ ಹೇಳುತ್ತೇವೆ. ಇಷ್ಟೇ ಅಲ್ಲದೆ ಇಂಡಿಯಾ ಸರ್ಕಾರಕ್ಕೆ ಯಾವ ಯಾವ ಮನವಿಗಳನ್ನು ಮಾಡಬೇಕೋ ಅದೆಲ್ಲವನ್ನೂ ಮಾಡಿದ್ದೇವೆ. ಇದರ ಫಲವಾಗಿ ಮೊದಲ ಇಪ್ಪತ್ತು ಸಾವಿರ ಆನಂತರ ಮೂವತ್ತು ಸಾವಿರ ರೂಪಾಯಿಗಳನ್ನು ಪಂಡಿತ ನೆಹರೂರವರು ಕ್ಷಾಮಪರಿಹಾರಕ್ಕಾಗಿ ಕೊಟ್ಟಿದ್ದಾರೆ. ಇದನ್ನು ಫೈನಾನ್ಸ್ ಮಿನಿಸ್ಟರವರಿಗೆ ತಿಳಿಸಿ ಎಂದು ಹೇಳಿದ್ದಾರೆ. ಅದರ

ಪ್ರಕಾರ ಅವರಿಗೆ ತಿಳಿಸಿದ್ದೇವೆ. ಕೃಷ್ಣರಾಜನಗರದಲ್ಲಿ ಕಾಂಗ್ರೆಸ್ ಸಮಿತಿ ಮಾಡಿದ ನಿರ್ಣಯವನ್ನು ಇಂಡಿಯಾ ಸರ್ಕಾರಕ್ಕೂ ಕಾಂಗ್ರೆಸ್ ಪಾರ್ಟಿಯ ಹೈಕಮ್ಯಾಂಡಿಗೂ ಕಳುಹಿಸಿದ್ದೇವೆ. ಎಲ್ಲ ವಿಷಯಗಳನ್ನು ಎಷ್ಟು ಪ್ರತಿಪಾದಿಸಬೇಕೋ ಅಷ್ಟು ಪ್ರತಿಪಾದಿಸಿದ್ದೇವೆ. ಕೈಯಲ್ಲಿ ಸಾಕಷ್ಟು ಹಣವಿಲ್ಲದೆ ಹಣ ಕೊಡದೇ ಇರಬಹುದು. ಆದರೆ ಪತ್ರ ವ್ಯವಹಾರಕ್ಕೂ ಮಾತಿಗೂ ಕುಂದಿಲ್ಲ. ಈ ವಿಷಯದಲ್ಲಿ ಯಾರು ಏನು ಶಂಕೆಪಡಬೇಕಾಗಿಲ್ಲ. ಒಂದು ವಿಷಯ ಮಾತ್ರ ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಯಾವ ಯಾವ ಸದಸ್ಯರು ಕ್ಷಾಮದ ವಿಚಾರವನ್ನು ಮನಸ್ಸಿಗೆ ಬಹಳ ಅಂಟಿಸಿಕೊಂಡಿದ್ದಾರೋ ಅವರು ಬರಿಯ ಮಾತಿನಲ್ಲಿ ಕೊನೆಗಾಣಿಸದೆ ಕಾರ್ಯದಲ್ಲಿಯೂ ತೋರಿಸಬೇಕೆಂದು ನನ್ನ ಪ್ರಾರ್ಥನೆ.

ಆನಂತರ ವಿದ್ಯಾಭ್ಯಾಸ ಪದ್ಧತಿಯ ವಿಚಾರ, ವಿದ್ಯಾಭ್ಯಾಸ ಪದ್ಧತಿಯ ವಿಚಾರವನ್ನು ಇನ್ನೂ ಹೆಚ್ಚು ಕಾಲ ತೆಗೆದುಕೊಂಡು ನಾವು ಚರ್ಚೆ ಮಾಡಬೇಕೆಂಬುದೇ ನನ್ನ ಸೂಚನೆ. ಎದುರು ಪಕ್ಷದ ನಾಯಕರು ಕಾಲ ಸಾಕಾಗಲಿಲ್ಲವೆಂದು ಹೇಳಿದರು. ಕಾಲದ ಪ್ರಶ್ನೆ ಇಲ್ಲ. ಇದಕ್ಕಾಗಿಯೇ ಒಂದೆರಡು ದಿವಸಗಳನ್ನು ಇಟ್ಟು ವಿದ್ಯಾಭ್ಯಾಸ ಮಾರ್ಪಾಡಾಗುವ ವಿಷಯದಲ್ಲಿ ತಾವೆಲ್ಲರೂ ಸಲಹೆ ಕೊಟ್ಟು ಸಹಾಯ ಮಾಡಬೇಕೆಂದು ನಾನು ತಮ್ಮೆಲ್ಲರನ್ನೂ ಪ್ರಾರ್ಥಿಸಿಕೊಳ್ಳುತ್ತಿದ್ದೇನೆ.

I will not allow the leader of the opposition merely to criticise the scheme that I adumbrate. I want his positive contribution so that all of us jointly may evolve an acceptable system of education.

ಕೈಗಾರಿಕೆಗಳ ವಿಷಯವಾಗಿ ಪ್ರಸ್ತಾಪ ಮಾಡುತ್ತ ವಿರೋಧ ಪಕ್ಷದ ನಾಯಕರು ಒಂದು ಹೆಜ್ಜೆ ಮುಂದೆ ಹೋಗಿ ಮೈಸೂರಿನವರಲ್ಲದೆ ಇರತಕ್ಕಂಥವರಿಗೆ ಸ್ಥಾನಗಳನ್ನು ಕೊಡದೆ ಮೈಸೂರಿನವರಿಗೇ ಕೊಡಬೇಕೆಂಬ ಒಂದು ವಾದವನ್ನು ಪ್ರತಿಪಾದಿಸಿದ್ದಾರೆ. ನಾನು ಈಗಾಗಲೇ ಹೇಳಿರುವಂತೆ, ಮೈಸೂರು ಬೇರೆ, ಮದ್ರಾಸೇ ಬೇರೆ, ಎಂದು ಪರಿಗಣಿಸತಕ್ಕ ಕಾಲ ಹೋಗಿದೆ. We are now a Sovereign Democratic Republic. ಆದರೆ ಇದರ ಮುಖ್ಯೋದ್ದೇಶ, ಕೈಗಾರಿಕೆಗಳು ಚೆನ್ನಾಗಿ ಬೆಳೆಯಬೇಕು, ತನ್ಮೂಲಕ ದೇಶಕ್ಕೆ ಒಳ್ಳೆಯದಾಗಬೇಕು ಎಂಬುದು. ಈ ಕೆಲಸಕಾರ್ಯಗಳು ಯಾರ ಸಹಾಯದಿಂದ ಸಮರ್ಪಕವಾಗಿ ಆಗುತ್ತವೆಂದು ಕಂಡುಬರುತ್ತೆಯೋ ಅಂಥವರ ಸಹಾಯವನ್ನು ತೆಗೆದುಕೊಳ್ಳೋಣ. ಅವರು ಮೈಸೂರಿಗೆ ಹೊರಗಿನವರಾಗಿರಲಿ ಅಥವಾ

ಇಂಡಿಯಾ ದೇಶಕ್ಕೆ ಹೊರಗಿನವರಾಗಿರಲಿ. ಈಗ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳ ಕೂಡ. ಈ ಕೈಗಾರಿಕೆಗಳು ಬೆಳೆಯಬೇಕೆಂಬುದು ಮುಖ್ಯವೇ ಹೊರತು ಅದು ಯಾರಿಂದಾಯಿತು ಎಂಬುದು ಮುಖ್ಯವಲ್ಲ. ಇದಕ್ಕೆ ಇಂಗ್ಲೀಷಿನಲ್ಲಿ ಒಂದು ಗಾದೆಯಿದೆ ``You will always get a thing done, provided you do not care who takes the credit for it"

ಎಂದು - ಈ ದೃಷ್ಟಿಯಿಂದ ನಾವು ಈ ಪ್ರಶ್ನೆಯನ್ನು ಪರಿಶೀಲಿಸಬೇಕು.

(ವಿಧಾನ ಸಭಾ ಕಲಾಪ, ದಿನಾಂಕ : 21-6-1952)

## 3. 1952-53ನೇ ಸಾಲಿನ ಬಡ್ಜೆಟ್ ಕುರಿತು ಸಾಮಾನ್ಯ ಚರ್ಚೆಯ ಭಾಗಗಳು

ಕೈಗಾರಿಕೆಗಳ ವಿಚಾರವಾಗಿ ಬಹಳ ಕಟುವಾಗಿ ಮಾನ್ಯ ಸದಸ್ಯರು ಟೀಕೆ ಮಾಡಿದರು. ಆದರೆ ಅನಾವಶ್ಯಕವಾಗಿತ್ತು. ಏಕೆಂದರೆ, ಈಗಿರತಕ್ಕ ಕೈಗಾರಿಕೋದ್ಯಮಗಳನ್ನು ಇನ್ನೂ ಹೆಚ್ಚಿನ ದಕ್ಷತೆಯಿಂದ ಇನ್ನೂ ಹೆಚ್ಚಿನ ಲಾಭ ಬರುವ ದೃಷ್ಟಿಯಿಂದ ಪುನರ್ವ್ಯವಸ್ಥೆ ಮಾಡಬೇಕೆಂಬ ನೀತಿಯನ್ನು ಸರ್ಕಾರದವರೇ ಒಪ್ಪಿಕೊಂಡಿದ್ದಾರೆ. ಈ ವ್ಯವಸ್ಥೆ ಯಾವ ರೂಪವನ್ನು ತಾಳುತ್ತದೆಯೆಂಬುದನ್ನು ಇನ್ನೂ ಸರ್ಕಾರದವರು ಯೋಚನೆ ಮಾಡಿಲ್ಲವೆಂದು ಮಾತ್ರ ಹೇಳುತ್ತೇನೆ. ಸರ್ಕಾರಿ ಕೈಗಾರಿಕೆಗಳಲ್ಲಿ ಒಂದು ದೊಡ್ಡ ಲೋಪವಿದೆ. ಒಂದು ಕೈಗಾರಿಕೋದ್ಯಮದಲ್ಲಿ ಲಾಭವಾಗಲಿ, ನಷ್ಟವಾಗಲಿ, ಅಲ್ಲಿನ ಜನರಲ್ ಮ್ಯಾನೇಜರಿಂದ ಹಿಡಿದು ಒಬ್ಬ ಜವಾನನವರೆಗೂ ಈಗ ಯಾರು ಅದನ್ನು ಲೆಕ್ಕಕ್ಕೇ ತೆಗೆದುಕೊಳ್ಳುವಂತೆ ಕಂಡು ಬಂದಿಲ್ಲ. ಕೈಗಾರಿಕೆ ಚೆನ್ನಾಗಿ ಕೆಲಸ ಮಾಡಿ ಲಾಭ ಹೊಂದಿದರೆ ತಮಗೂ ಸ್ವಲ್ಪ ಹೆಚ್ಚು ಲಾಭ ಬರುತ್ತದೆ ಎಂಬ ಯೋಚನೆಯೇ ಅವರಿಗಿಲ್ಲ. ಸರ್ಕಾರಿ ಅಧಿಕಾರಿಗಳಿಗೆ ಹೇಗೆ ಏನೇ ಆಗಲಿ ತಿಂಗಳು ಕೊನೆಗೆ ಅವರ ಸಂಬಳ ಅವರಿಗೆ ಬರುತ್ತದೆಯೋ ಹಾಗೆಯೇ ತಮಗೂ ಸಂಬಳ ಬರುತ್ತದೆಯೆಂಬ ಮನೋಭಾವ ಅವರಲ್ಲಿ ಬೆಳೆದಿದೆ. ಆದ್ದರಿಂದ ರಾಜಪ್ರಮುಖರ ಭಾಷಣದಲ್ಲೂ ಮತ್ತು ನನ್ನ ಭಾಷಣದಲ್ಲೂ ಈ ಕೈಗಾರಿಕೋದ್ಯಮಗಳನ್ನು Business Lines ಮೇಲೆ, ನಡೆಯುವಂತೆ ಮಾಡಬೇಕೆಂದು ಹೇಳಿದ್ದೇವೆ. ಇನ್ನು ಮುಂದೆ ಕೆಲಸಗಾರರಲ್ಲೇ ಆಗಲಿ ಮ್ಯಾನ್ಯನೇಜ್‌ಮೆಂಟಿನಲ್ಲೇ ಆಗಲಿ ತಮ್ಮ ತಮ್ಮ ಕೈಗಾರಿಕೆಯ ವಿಷಯದಲ್ಲಿ

ಅಭಿಮಾನ ಮತ್ತು ಭಯಗಳು ಹುಟ್ಟಬೇಕು. ಹೆಚ್ಚಿನ ಲಾಭ ಬಂದರೆ ಪ್ರಯೋಜನ ಪಡೆಯುವವನೂ ತಾನೇ ಎಂಬ ಅಭಿಮಾನವೂ, ಕೈಗಾರಿಕೆಗೆ ನಷ್ಟ ಸಂಭವಿಸಿದರೆ ಕಷ್ಟ ಅನುಭವಿಸುವವನೂ ತಾನೇ ಎಂಬ ಭಯವೂ ಆತನಲ್ಲಿ ಉಂಟಾಗಬೇಕು. ಕೇಂದ್ರ ಸರ್ಕಾರದವರೂ ಈ ಹೊಸ ನೀತಿಯನ್ನು ಅನೇಕ ಸಮಿತಿಗಳಲ್ಲಿ ಅಲೋಚನೆ ಮಾಡಿದ್ದಾರೆ. ಈ ರೀತಿಯಾಗಿ ಅಭಿಮಾನ, ಭಯ ಎರಡೂ ಇರತಕ್ಕ ಒಂದು ವ್ಯವಸ್ಥೆ ಮಾಡಬೇಕೆಂಬುದೇ ಸರ್ಕಾರದವರ ಉದ್ದೇಶ.

ಪಾನ ನಿರೋಧ ನೀತಿಯನ್ನು ಅನೇಕರು ಪ್ರಸ್ತಾಪ ಮಾಡಿದರು. ಜನಾಬ್ ಇಮಾಂರವರೂ ಕೂಡ ಈ ಪಾನನಿರೋಧ ನೀತಿಯನ್ನು ರದ್ದುಮಾಡಿ ಎಂದು ವಾದವನ್ನು ಹೂಡಿದರು. ಸೋಷಿಯಲಿಸ್ಟ್ ಪಾರ್ಟಿಯವರು ಪಾನ ನಿರೋಧವನ್ನು ರದ್ದು ಮಾಡಬೇಕೆಂದು ಹೇಳಿದರು. ನಾನು ಅವರು ಹೇಳಿದ್ದನ್ನು ಟೀಕಿಸಲು ಹೋಗುವುದಿಲ್ಲ. ಅವರು ಸ್ವಲ್ಪ ವಿಷಯವನ್ನು ಮಥನ ಮಾಡಬೇಕೆಂದು ಮಾತ್ರ ಪ್ರಾರ್ಥನೆ ಮಾಡುತ್ತೇನೆ. ತಪ್ಪೋ? ಸರಿಯೋ, ಪಾನನಿರೋಧದಿಂದ ಬಡವರಿಗೆ ಉಪಯೋಗವಾಗುತ್ತದೆಂಬ ನಂಬಿಕೆಯಿಂದ ಇದನ್ನು ಜಾರಿಗೆ ತಂದಿದೆ. ಕೆಲವರಿಗೆ ಬಹುಶಃ ಜ್ಞಾಪಕವಿರಬಹುದು. 1938ನೆಯ ಇಸವಿಯಲ್ಲಿ ನಾನು ಒಂದು-ಒಂದೂವರೆ ತಿಂಗಳ ಕಾಲ ಕ್ಲೋಸ್‌ಪೇಟೆ ತಾಲ್ಲೂಕಿನಲ್ಲಿ ಪಾನನಿರೋಧವನ್ನು ಜಾರಿಗೆ ತರಬೇಕೆಂದು ಹೇಳಿ ಹೋದಾಗ್ಗೆ ಒಂದು ದೊಡ್ಡ ಅಧ್ಯಾಯವೇ ಆಯಿತು. ಆಗ ನನಗೆ ಕಂಡು ಬಂದುದು, ಪಾನದ ದೆಸೆಯಿಂದ ಬಹಳ ಕಷ್ಟಕ್ಕೆ ತುತ್ತಾಗಿರುವವರು ಹರಿಜನರು ಎಂಬುದು. ಮೈಸೂರು ದೇಶದಲ್ಲಿ ಹರಿಜನರ ಸಂಖ್ಯೆ ಬಹಳ ಜಾಸ್ತಿಯಾಗಿದೆ, ಅವರೆಲ್ಲರೂ ಬಹುಮಟ್ಟಿಗೆ ಬಡವರು ಎಂದರೆ ಉತ್ಪ್ರೇಕ್ಷೆಯಲ್ಲ, ಅಂಥಾದ್ದರಲ್ಲಿ ಈ ಬಡವರನ್ನು ಇನ್ನೂ ಹೆಚ್ಚಿನ ಬಡತನಕ್ಕೆ ಇಳಿಸಿ ಅದರಿಂದ ದುಡ್ಡುಗಳಿಸುವುದು ನ್ಯಾಯಸಮ್ಮತವಾದದ್ದಲ್ಲವೆಂದು ನಾನು ತಿಳಿಯುತ್ತೇನೆ.

ಎರಡನೆಯದಾಗಿ, ಸಾಮಾಜಿಕ ದೃಷ್ಟಿಯಿಂದಲೂ ಕೂಡ ಕುಡಿತ ಕುಡುಕನನ್ನು ಅವಹೇಳನಕ್ಕೆ ಗುರಿ ಮಾಡುವ ವಸ್ತು. ಇದರ ದೆಸೆಯಿಂದ ಹರಿಜನರು ಮತ್ತಷ್ಟು ಅವನತಿಗೆ ಇಳಿಯುತ್ತಿರುವುದು ನಮಗೆಲ್ಲ ಗೊತ್ತಿದೆ.

**ಶ್ರೀ ಎಂ. ಶಂಕರಲೀಂಗೇಗೌಡರು** : ಹರಿಜನರು ಬರುವುದರೊಳಗೆ ಮುಗಿದು ಹೋಗಿರುತ್ತದೆ. ಮೂರು ಗಂಟೆಗೇ ಸಿಕ್ಕುವುದಿಲ್ಲ! (ನಗು)!

**ಶ್ರೀ ಕೆ. ಹನುಮಂತಯ್ಯನವರು** : ಷೆಡ್ಯೂಲ್ಡ್ ಕ್ಯಾಸ್ಟ್ ಜನರು ಎಂದರೆ ಒಡ್ಡರು, ಹರಿಜನರು, ಲಂಬಾಣಿಗಳು ಅಲ್ಲದೆ ಸ್ವಲ್ಪ ಸಂಖ್ಯೆಯಲ್ಲಿ ಸವರ್ಣದವರು - ಇವರು ಕುಡಿದು ಆರ್ಥಿಕ ಮತ್ತು ಸಾಮಾಜಿಕ ಅವನತಿಗೆ ಈಡಾಗಿ ಇಳಿದು ಹೋಗುತ್ತಿದ್ದಾರೆ. ಇದನ್ನು ತಪ್ಪಿಸಬೇಕೆಂಬ ಉದ್ದೇಶದಿಂದ ಪಾನನಿರೋಧವನ್ನು ಜಾರಿಗೆ ತಂದೆವು. ಇದರಲ್ಲಿ ನಮಗೆ ಯಶಸ್ಸು ದೊರಕಲಿಲ್ಲವೆಂದು ಹೇಳಿದರು. ಈ ಸಂದರ್ಭದಲ್ಲಿ ಕೈಗಾರಿಕೆಗಳ ವಿಷಯದಲ್ಲಿ ಯಾವ ರೀತಿ ಹೇಳಿದೆನೋ ಹಾಗೆಯೇ ಹೇಳಬೇಕಾಗಿದೆ. ಇಲ್ಲಿರುವ ಮಹನೀಯರು ಪಾನ ನಿರೋಧ ಯಶಸ್ವಿಯಾಗಲಿಲ್ಲ ಎಂದು ಹೇಳುವುದಕ್ಕೆ ಪ್ರಾರಂಭ ಮಾಡಿದರೆ ಯಶಸ್ವಿಯಾಗುವುದೇ ಇಲ್ಲ. ಏಕೆಂದರೆ, ಇದು ಪ್ರಜಾಪ್ರಭುತ್ವ ಯುಗ, ಅಂತ್ಯಜರೆಂದು ಯಾರನ್ನು ಹೇಳುತ್ತಾರೋ ಅವರನ್ನು ಮುಂದೆ ತರಬೇಕೆಂದು ಮಾಡಿದ ಈ ನಿರೋಧ ನೀತಿಯಿಂದ ಯಶಸ್ಸು ದೊರಕಿದೆ. ಇದರಿಂದ ಕಾಂಗ್ರೆಸ್ ಒಂದಕ್ಕೆ ಅಲ್ಲ, ಎಲ್ಲರಿಗೂ ಕೀರ್ತಿ ದೊರಕುತ್ತದೆ. ಕಾಂಗ್ರೆಸ್ಸಿನವರು ಮಾತ್ರ ಕೈಕೊಂಡಿರತಕ್ಕ ನೀತಿಯನ್ನು ಟೀಕಿಸಿ ಸಂತೋಷಪಟ್ಟು ಸುಮ್ಮನಾದರೂ ದೇಶಕ್ಕೆ ಒಳ್ಳೆಯದಾದಂತಾಗುವುದಿಲ್ಲ. ತಾವು ಇನ್ನು ಕೊಂಚ ಮುಂದೆ ಹೋಗಿ ಎಲ್ಲೆಲ್ಲಿ ಕಳ್ಳಭಟ್ಟಿ ಸಾರಾಯಿ ಮಾಡುತ್ತಾರೋ, ಎಲ್ಲಿ ಪಾನನಿರೋಧಕ್ಕೆ ಆತಂಕವಿದೆಯೋ ಅದನ್ನು ನಿವಾರಣೆ ಮಾಡುವುದಕ್ಕೆ ಪ್ರಯತ್ನ ಮಾಡಬೇಕು.

**ಶ್ರೀ ಎಸ್. ಗೋಪಾಲಗೌಡರು** : ಉದ್ದೇಶವನ್ನು ಯಾರೂ ಪ್ರಶ್ನೆ ಮಾಡವುದಿಲ್ಲ. ಆದರೆ ಈ ರೀತಿ ಕೈಗೆ ಕೋಳ ಹಾಕಿ ಹಿಡಿತಕ್ಕೆ ತರುವುದು ಸಾಧ್ಯವೆ ಎಂಬುದು ಪ್ರಶ್ನೆ.

**ಶ್ರೀ ಕೆ. ಹನುಮಂತಯ್ಯನವರು** : ನಾನು ಮೊದಲೇ ಹೇಳಿದ ಹಾಗೆ ತಪ್ಪಿತಸ್ಥರನ್ನು ಶಿಕ್ಷೆಮಾಡುವುದು ಸರ್ಕಾರದ ಕರ್ತವ್ಯ, ಈ ಕೆಲಸದಲ್ಲೇನೂ ಹಿಂಜರಿಯುವುದಿಲ್ಲ.

ಪಾನ ನಿರೋಧ ವಿಚಾರದಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಪ್ರಸ್ತಾಪ ಮಾಡಬೇಕೆಂದು ತಮ್ಮ ಅನುಮತಿ ಬೇಡುತ್ತೇನೆ. ನಾನು ಡೆಲ್ಲಿಯಲ್ಲಿ ಉನ್ನತ ಅಧಿಕಾರಿಗಳೆಂದು ಯಾರನ್ನು ಹೇಳುತ್ತಾರೋ ಅವರ ಜೊತೆಯಲ್ಲಿ ಮಾತನಾಡಿದ್ದೇನೆ. ಕಮ್ಯಾಂಡರ್ ಇನ್ ಚೀಫ್‌ನಿಂದ ಹಿಡಿದು ಬ್ರಿಗೇಡಿಯರ್‌ವರೆಗೂ ಮತ್ತು ಐ.ಸಿ.ಎಸ್. ಸೆಕ್ರೆಟರಿಗಳು, ಉನ್ನತ ಅಧಿಕಾರಿಗಳು, ದೊಡ್ಡ ದೊಡ್ಡ ವ್ಯಕ್ತಿಗಳು - ಇವರನ್ನೆಲ್ಲಾ ನೋಡಿದ್ದೇನೆ. ಮೈಸೂರು ದೇಶದಲ್ಲಿರುವ ಅಧಿಕಾರ ವರ್ಗ ಅದಕ್ಕೆ ಸೇರುವುದಿಲ್ಲ. ಇಲ್ಲೇ ಬೇರೆ ಪರಿಸ್ಥಿತಿಯಿದೆ. ಎಲ್ಲವನ್ನು ನೋಡಿದರೆ, ಪಾನನಿರೋಧ ರದ್ದಾಗಬೇಕೆಂದು ಬೊಬ್ಬೆ ಎಬ್ಬಿಸಿರುವವರು Upper classes. ಬ್ರಾಂದಿ, ವಿಸ್ಕಿ ಮುಂತಾದ foreign

liquors, ಮುಂತಾದುವನ್ನು ಕುಡಿಯುವ ಅಬ್ಯಾಸ ಮಾಡಿಕೊಂಡಿದ್ದಾರೆ ಕೆಲವರು. ಅಂಥವರು ಇದರಿಂದ ಒಳ್ಳೆಯದಾಗಬಹುದೆಂದು ತಿಳಿದುಕೊಂಡಿರಬಹುದು. ಈ ವಿಷಯದಲ್ಲಿ ನಾನು ವಾದ ಮಾಡುವುದಕ್ಕೆ ಹೋಗುವುದಿಲ್ಲ, ಅಂತೂ this upper strata of society is vociferous against prohibition. The poorer strata of society thinks that it is a boon conferred on them.

ಆದುದರಿಂದ ಇದು ನಾನಾಗಿ ನಿರ್ಧಾರ ಮಾಡತಕ್ಕ ವಿಷಯವಲ್ಲ. ಕಾಂಗ್ರೆಸ್ ಸಂಸ್ಥೆ, ಸರ್ಕಾರಗಳು ಎಲ್ಲರೂ ಯೋಚನೆ ಮಾಡಿ ತೀರ್ಮಾನ ಮಾಡಬೇಕಾದ ವಿಷಯ. ನನಗೆ ಅನ್ನಿಸುತ್ತೆ this upper strata of society who want to drink, let them drink to death, if they want. But merely because they are vociferous, we should not make this lower strata of society suffer on account of their demand. ಆದುದರಿಂದ ಮುಂದೆ ಪಾನನಿರೋಧ ನೀತಿಯನ್ನು ಮಾರ್ಪಾಡು ಮಾಡಬೇಕಾದರೆ ಈ foreign liquors ಉಪಯೋಗಿಸುವ upper strata of society ಮೇಲೆ ಹೆಚ್ಚು ತೆರಿಗೆ ಹಾಕಿ ನೀವು ಏನಾದರೂ ಮಾಡಿಕೊಳ್ಳಿ ಎಂದು ಹೇಳಿ ಬಡವರೂ ಹರಿಜನರೂ ಇರುವ ಕಡೆ, ಹಳ್ಳಿಗಳಲ್ಲಿ ಪಾನನಿರೋಧವನ್ನು ಜಾರಿಗೆ ತಂದರೆ ಒಳ್ಳೆಯದೆಂದು ಕಾಣುತ್ತದೆ. We can open licensed shops for fashionable people.

ಹೀಗೆ ಪಾನನಿರೋಧ ನೀತಿಯನ್ನು ಯಾರು ತೀವ್ರವಾಗಿ ಟೀಕಿಸಿ, ಕುಡಿಯವುದಕ್ಕೆ ಬೇಕೆ ಬೇಕು ಎಂದು ಹೇಳುತ್ತಾರೋ ಅವರಿಗೆ ಲೈಸೆನ್ಸ್ ಮೇಲೆ ಅವಕಾಶ ಕಲ್ಪಿಸಿ ಕೊಟ್ಟು ಬಡವರನ್ನು ದೂರವಾಗಿರುವ ಹಾಗೆ ಮಾಡಿ ರಕ್ಷಣೆ ಮಾಡುವುದು ಸರ್ಕಾರದ ಕರ್ತವ್ಯವಾಗಲೆಂದು ನನ್ನ ಹಾರೈಕೆ.

ಅನಂತರ ಕೆ.ಜಿ.ಎಫ್. ವಿಚಾರವಾಗಿ ಕೆಲವು ಸದಸ್ಯರು ಮಾತನಾಡಿದ್ದಾರೆ ಮತ್ತು ಪ್ರಶ್ನೆಗಳನ್ನು ಹಾಕಿದ್ದಾರೆ. ಕೋಲಾರದ ಚಿನ್ನದಗಣಿ ವಿಚಾರದಲ್ಲಿ ಹೊಸದಾಗಿ ಒಪ್ಪಂದವಾಗಿದೆ. ಈ ಒಪ್ಪಂದ ದೇಶಕ್ಕೆ ಅಷ್ಟು ಅನುಕೂಲವಾದದ್ದಲ್ಲ ಎಂಬ ಅಭಿಪ್ರಾಯವನ್ನು ಜನಾಬ್ ಇಮಾಂರವರು ವ್ಯಕ್ತಪಡಿಸಿದ್ದಾರೆ. ನಾನು ಯಾವಾಗಲೂ ಸ್ಪಷ್ಟವಾಗಿ ನಿಷ್ಕಳಂಕವಾಗಿ ಮಾತನಾಡುವ ಮನುಷ್ಯ. ನನ್ನದೂ ಸ್ವಲ್ಪ ಹೆಚ್ಚು ಕಡಿಮೆ ಇದೇ ಅಭಿಪ್ರಾಯವಾಗಿದೆ. ಈ ಒಪ್ಪಂದ ಮಾಡಿದಾಗಿನಿಂದಲೂ ಕೂಡ ನನ್ನ ಮನಸ್ಸಿಗೆ

ಏನೋ ಕಿರುಕುಳವಾಗುತ್ತಿದೆ. ಆದರೆ ಇದನ್ನು ಪರಿಶೀಲನೆ ಮಾಡಿ ನೋಡುವುದಕ್ಕೆ ನನಗೆ ಅವಕಾಶ ಸಿಕ್ಕಿರಲಿಲ್ಲ. ಈಗ ಒಪ್ಪಂದದ ಪ್ರಕಾರ ಕೆಲಸ ಕಾರ್ಯಗಳು ನಡೆಯುತ್ತಿವೆಯೇ, ಎಂಬುದನ್ನು ನಿನ್ನೆ ಮೊನ್ನೆಯಿಂದ ಜನಾಬ್ ಇಮಾಂರವರು ಭಾಷಣ ಮಾಡಿದ ಮೇಲೆ ಅವಕಾಶ ಮಾಡಿಕೊಂಡು ನೋಡಿದೆ. ಆ ಕಂಪನಿಯವರು ತಮಗೆ ಹೆಚ್ಚು ಲಾಭ ಬರುವುದಕ್ಕೆ ಏನೇನು ಮಾಡಬೇಕೋ ಅದನ್ನು ಮಾಡಿರುತ್ತಾರೆ. ಇದು ಸ್ವಾಭಾವಿಕ, ಆದರೆ ಕಾಂಗ್ರೆಸ್ ಪಕ್ಷ ಅಥವಾ ಇತರ ಪಕ್ಷಗಳ ಯಾವ ಸದಸ್ಯರೇ ಆಗಲಿ, ದೇಶದ ಮತ್ತು ಸರ್ಕಾರದ ಹಿತವನ್ನು ರಕ್ಷಣೆ ಮಾಡಬೇಕಾದುದು ಪವಿತ್ರ ಕರ್ತವ್ಯ. ಈ ಕರ್ತವ್ಯವನ್ನು ನಾನು ಕೈಲಾದಮಟ್ಟಿಗೂ ಮಾಡುತ್ತೇನೆಂದು ಭರವಸೆಯನ್ನು ನೀಡುತ್ತೇನೆ.

ಶ್ರೀಮಾನ್ ಶಂಕರಲಿಂಗೇಗೌಡರು ಅನೇಕ ಸಾರಿ ಈ ಸಭೆಯಲ್ಲಿಯೂ ಬೇರೆ ಕಡೆಯೂ ಹೇಳುತ್ತಿರುತ್ತಾರೆ. ಬಾಕಿ ಎಲ್ಲಕ್ಕಿಂತ ಹೆಚ್ಚಾಗಿ ನೀರಾವರಿ ಎಂದರೆ ಜಲಾಶಯಗಳನ್ನು ಕಟ್ಟುವ ಕೆಲಸಗಳನ್ನು ಸರ್ಕಾರ ಕೈಕೊಳ್ಳಬೇಕೆಂದು, ಇದನ್ನು ತಾವೆಲ್ಲರೂ ಒಪ್ಪುತ್ತೀರೆಂದು ನಂಬಿದ್ದೇನೆ. ನಮ್ಮ ಹಿಂದಿನ ಸರ್ಕಾರ ಪ್ರಾರಂಭಮಾಡಿರುವ ಮೂರು ಜಲಾಶಯಗಳ ಕೆಲಸವನ್ನು ಮುಗಿಸಬೇಕಾಗಿದೆ.

ಇದಕ್ಕೋಸ್ಕರವಾಗಿಯೇ ಖೋತಾ ಬಡ್ಜೆಟ್ ಆದರೂ ಸುಮಾರು 15 ಲಕ್ಷ ರೂಪಾಯಿಗಳನ್ನು ಒದಗಿಸಿದ್ದೇವೆ. ತುಂಗಾ, ನಗು ಈ ಅಣೆಕಟ್ಟುಗಳಿಗಾಗಿ ಇನ್ನು ಎರಡು ಮೂರು ಕೋಟಿ ರೂಪಾಯಿ ಆದರೆ ಸಾಕು. ಮುಖ್ಯವಾದ ಭದ್ರಾ ಜಲಾಶಯಕ್ಕೆ 20 ಕೋಟಿ ರೂಪಾಯಿಬೇಕು. ಈಗಿನಂತೆಯೇ ಖರ್ಚು ಮಾಡುವುದಾದರೆ, ಇದು ಮುಗಿಯುವುದಕ್ಕೆ ಅನೇಕ ವರ್ಷಗಳಾಗುತ್ತದೆ. ಇವು ಪೂರ್ತಿಯಾಗಿರುವುದನ್ನು ನಾವು ನೋಡುತ್ತೇವೋ ಇಲ್ಲವೋ ಗೊತ್ತಿಲ್ಲ. ತಾವೆಲ್ಲರೂ ಒಮ್ಮನಸ್ಸಿನಿಂದ ಒಂದೇ ಧ್ವನಿಯಿಂದ ಜಾಗ್ರತೆ ಆಗಬೇಕು, ಕೇಂದ್ರ ಸರ್ಕಾರದ ನೆರವು ಬೇಕೆಂದು ಕೇಳುತ್ತಿದ್ದೀರಿ. ಇದೇ ಸರ್ಕಾರದ ಅಭಿಪ್ರಾಯವೂ ಆಗಿದೆಯೆಂದು ವಂದನಾಪೂರ್ವಕವಾಗಿ ಹೇಳಬೇಕಾಗಿದೆ. ನನ್ನ ಬಡ್ಜೆಟ್ ಭಾಷಣದಲ್ಲಿ ಕೇಂದ್ರ ಸರ್ಕಾರ ಸಹಾಯ ಮಾಡಬೇಕೆಂದು ನಾನು ಏನು ಪ್ರಾರ್ಥಿಸಿ ಭಾಷಣ ಮಾಡಿದೆನೋ ಅದನ್ನು ಮದ್ರಾಸಿನ ಪ್ರಮುಖ ಪತ್ರಿಕೆಗಳಾದ ಹಿಂದೂ, ಮೇಲ್, ಎಕ್ಸ್‌ಪ್ರೆಸ್ ಇಂಥ ದೊಡ್ಡ ಪತ್ರಿಕೆಗಳು ಪುಷ್ಟೀಕರಿಸಿ ಸಂಪಾದಕೀಯವನ್ನು ಬರೆದಿವೆ.

ಆ ಪತ್ರಿಕೆಗಳು ಮೈಸೂರು ದೇಶದ ಹಿತ ಸಾಧನೆ ದೃಷ್ಟಿಯಿಂದ ಈ ಮೂರು ಯೋಜನೆಗಳು ಪೂರ್ಣವಾಗುವುದಕ್ಕೆ ಒತ್ತಾಸೆ ಕೊಡುವುದನ್ನು ಮುಂದುವರಿಸಿದರೆ, ಇದು ಸಫಲವಾಗುತ್ತದೆಂಬ ಭರವಸೆ ನನಗಿದೆ. ಇಷ್ಟೇ ಅಲ್ಲದೆ ದೊಡ್ಡ ದೊಡ್ಡ ಯೋಜನೆಗಳೆಲ್ಲವೂ ಉತ್ತರ ಇಂಡಿಯಾದಲ್ಲಿದ್ದು ಎಲ್ಲಿ ಆಹಾರ ಅಭಾವವಿದೆಯೋ, ಎಂದರೆ ದಕ್ಷಿಣ ಇಂಡಿಯಾದಲ್ಲಿ, ಅಂಥ ದೊಡ್ಡ ಯೋಜನೆಯನ್ನು ಹೆಚ್ಚಾಗಿ ಕೈಕೊಂಡಿಲ್ಲವೆಂದು ನಾನು ಹೇಳಿದೆ. ನಾನು ಕಾಂಗ್ರೆಸ್‌ನವನಾದರು ಕೇಂದ್ರ ಸರ್ಕಾರವನ್ನು ಟೀಕಿಸುವುದನ್ನು ಬಿಟ್ಟಿಲ್ಲ. ಅಲ್ಲದೆ ಕೃಷ್ಣರಾಜನಗರದಲ್ಲಿ ಈಚೆಗೆ ನಡೆದ ಎಂ.ಪಿ.ಸಿ.ಸಿ. ಅಧಿವೇಶನದಲ್ಲಿಯೂ ಕೂಡ ಒಂದು ನಿರ್ಣಯ ಮಾಡಿದ್ದಾರೆ. ಯಾವ ಪಕ್ಷದವರೇ ಆಗಲಿ, ಸೋಷಿಯಲಿಸ್ಟ್ ಅಥವಾ ಕಮ್ಯುನಿಸ್ಟರು ಯಾರೇ ಆಗಲಿ ಇದರಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲವೆಂದು ನನ್ನ ಭಾವನೆ.

This question is a non-party question. It is a general question which affects the welfare of the State. Let us work together in order to make the Government of India pay the completion of these projects.

**Sri Mulka Govinda Reddy** : We are all one with you.

**Sri K. Hanumanthaiya** : Thank you very much.

ಈ ರೀತಿ ತಮ್ಮ ಒಮ್ಮತದ ಅಭಿಪ್ರಾಯವನ್ನು ಸಮರ್ಥಿಸಿದ ಸ್ಥಳೀಯ ಪತ್ರಿಕೆಗಳು ಮತ್ತು ಹೊರಗಡೆಯ ಪತ್ರಿಕೆಗಳ ಸಹಾಯದಿಂದ ನಾನು ಈ ವಿಷಯವನ್ನು ಡೆಲ್ಲಿಯಲ್ಲಿ ಪ್ರಸ್ತಾಪ ಮಾಡಿದರೆ ತಮ್ಮ ಮತ್ತು ಪತ್ರಿಕೆಗಳ ಸಹಾಯದಿಂದ, ಕೃತಕೃತ್ಯನಾಗುತ್ತೇನೆಂಬ ನಂಬಿಕೆ ಇದೆ. ಈ ದಿವಸ ಪ್ರಧಾನಿ ಪಂಡಿತ ಜವಹಾರಲಾಲ್‌ರ ಹತ್ತಿರ ಒಂದು ಮಾತು ಹೇಳಬೇಕೆಂದಿದ್ದೇನೆ. ಯಾವ ಸ್ಥಾನದಿಂದ ನಾನು ಭಾಷಣ ಮಾಡುತ್ತಿದ್ದೇನೋ ಅದು ಅವರ ಕೃಪೆಯಿಂದ ದೊರಕಿತೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು. ಅವರು ಕೊಟ್ಟ ಕೆಲಸ ಸಫಲವಾಗಬೇಕಾದರೆ ಈ ಸಹಾಯ ಅಗತ್ಯ ಎನ್ನುವ ಒಂದು ಮಾತನ್ನು ಒತ್ತಿ ಹೇಳಿ ಮುಂದೆ ಏನು ಮಾಡುತ್ತೇನೆ ಎಂಬುದನ್ನು ಈಗ ಹೇಳುವುದಿಲ್ಲ. ಅವರ ಸಹಾಯದಿಂದಲೇ ಈ ಕೆಲಸಗಳೆಲ್ಲಾ ನಡೆಯುತ್ತವೆಯೆಂಬ ಆಸೆಯು ನನಗದೆ. ಈ ಮಹಾ ಪ್ರಶ್ನೆಯಲ್ಲಿ ತಾವೆಲ್ಲರೂ ಒಮ್ಮನಸ್ಸಿನಿಂದಿರುವುದು, ತಮ್ಮೆಲ್ಲರ ಸೌಹಾರ್ದ

ತೋರಿಸುತ್ತಿರುವುದು ಒಂದು ಶುಭ ಸೂಚನೆ. ಈ ಒಂದು ಧ್ಯೇಯದಿಂದ ನಾವು ಕೆಲಸ ಮಾಡಿದರೆ ಇದರಿಂದ ಬರತಕ್ಕ ಕೀರ್ತಿ, ಒಂದು ಪಾರ್ಟಿಗೆ ಸೇರಿದ್ದಲ್ಲ, ಅಥವಾ ನನಗೊಬ್ಬನಿಗೆ ಸೇರಿದ್ದಲ್ಲ. ಆ ಕೀರ್ತಿಗೆ ತಾವೆಲ್ಲರೂ ಸಮಭಾಗಿಗಳಾಗಬೇಕಾಗುತ್ತದೆ.

ಇನ್ನು ಕೆಲವು ಮಾನ್ಯ ಸದಸ್ಯರುಗಳು ಅಗ್ರಿಕಲ್‌ಚರಲ್ ಪಾಲಿಸಿಯ ವಿಚಾರವಾಗಿ ಪ್ರಸ್ತಾಪ ಮಾಡಿದ್ದಾರೆ. ಶ್ರೀಮಾನ್ ಕೆ. ಪಟ್ಟಾಭಿರಾಮನ್‌ರವರು ಲ್ಯಾಂಡ್ ಪಾಲಿಸಿ ವಿಚಾರವಾಗಿ ಪ್ರಸ್ತಾಪ ಮಾಡಿದ್ದಾರೆ. ಈ ವಿಚಾರ ಸರ್ಕಾರದವರ ಅವಗಾಹನೆಯಲ್ಲೂ ಇದೆ. 'ಮುಂದೆ ನಾವು ಸೇರತಕ್ಕ ಅಧಿವೇಶನದಲ್ಲಿ ಇದನ್ನು ಪರಿಷ್ಕಾರ ಮಾಡೋಣ. ಈ ವಿಷಯದಲ್ಲಿ ಒಂದು ಪಾರ್ಟಿಗೂ, ಇನ್ನೊಂದು ಪಾರ್ಟಿಗೂ ಯಾವ ಭಿನ್ನಾಭಿಪ್ರಾಯಗಳೂ ಇಲ್ಲ. ಯಾವ ರೈತ ಸ್ವತಃ ಹೊಲವನ್ನು ಉಳುತ್ತಾನೋ ಅಥವಾ ಅದರಲ್ಲಿ ಕೆಲಸ ಮಾಡುತ್ತಾನೋ ಅಂತಹ ಮನುಷ್ಯನಿಗೆ ಹೆಚ್ಚಿಗೆ ಉತ್ತೇಜನ ಕೊಡಬೇಕೆಂಬ ತತ್ವವನ್ನು ಒಪ್ಪಿಕೊಂಡರೂ ಮಾಲೀಕನಾಗಿರತಕ್ಕವನಿಗೆ ಅದರ ಬೆಲೆಯನ್ನು ಕೊಡಬೇಕಾದದ್ದು ನಮ್ಮ ಕರ್ತವ್ಯ. ಈ ವಿಷಯದಲ್ಲಿ ಯಾರದೂ ಭಿನ್ನಾಭಿಪ್ರಾಯವಿಲ್ಲ. ಆದರೆ ಇದರಲ್ಲಿ ಒಂದು ವಿಷಯ. ಜಮೀನನ್ನು ನಾವು ತೆಗೆದುಕೊಂಡರೆ ಜಮೀನಿನ ಮಾಲೀಕನಾದವನಿಗೆ ಪರಿಹಾರ ಕೊಡಬೇಕೇ ಅಥವಾ ಬೇಡವೇ ಎಂಬ ಪ್ರಶ್ನೆ ಬರುತ್ತದೆ. ಕೊಡಬೇಕು ಎನ್ನುವುದು ನಮ್ಮ ಅಭಿಪ್ರಾಯ. ಇನ್ನು ಕೆಲವರ ಅಭಿಪ್ರಾಯ ಅದನ್ನು ಕೊಡಬಾರದು ಎಂದು. ಒಂದು ವಿಷಯವನ್ನು ನಾನು ತಮ್ಮ ಗಮನಕ್ಕೆ ತರುತ್ತೇನೆ. ನಾವು ಯಾವ ಕಾನ್‌ಸ್ಟಿಟ್ಯೂಷನ್ ಪ್ರಕಾರ ಪ್ರಮಾಣ ವಚನವನ್ನು ಸ್ವೀಕಾರ ಮಾಡಿದ್ದೇವೋ, ಅದರಲ್ಲಿ ಪರಿಹಾರವನ್ನು ಕೊಡದೆ ಯಾವ ಸ್ವತ್ತನ್ನೂ ತೆಗೆದುಕೊಳ್ಳ ಕೂಡದು ಎಂಬ ನಿಯಮವಿದೆ. ಆದರೆ ಎಷ್ಟೆಷ್ಟು ಕೊಡಬೇಕು ಎಂಬ ಪ್ರಶ್ನೆಯನ್ನು ಆಯಾಯ ಶಾಸನ ಸಭೆಗಳ ವಿವೇಚನೆಗೆ ಬಿಟ್ಟಿದ್ದಾರೆ. ಆದರೆ ಹಾಗೆ ಏನೂ ಪರಿಹಾರ ಕೊಡದೆ ದೋಚುವುದನ್ನು ಈಗಿರತಕ್ಕ ರಾಜ್ಯಾಂಗ ಒಪ್ಪುವುದಿಲ್ಲ.

ಇನ್ನು ಎರಡನೇ ಪ್ರಶ್ನೆ - ಕೆಲವು ಮಾನ್ಯ ಸದಸ್ಯರು ಹೇಳಿದರು - ರಾಜ ಪ್ರಮುಖರ ಭಾಷಣದ ಬಗ್ಗೆ ಪ್ರಸ್ತಾಪ ಮಾಡುವಾಗಲೂ ಇದು ಬಂದಿತ್ತು - ಉತ್ಪನ್ನ ಮಾಡತಕ್ಕ ಅಥವಾ ರೈತನು ಬೆಳೆಯತಕ್ಕ ಧಾನ್ಯಗಳಿಗೆ ಸರಿಯಾದ ಬೆಲೆಯನ್ನು ನಿಗದಿ ಮಾಡಿ, ಅದು ಆತನಿಗೆ ದೊರಕುವಂತೆ ಮಾಡಬೇಕು ಎಂದು. ಈ ಸಂಬಂಧವಾಗಿ ಎತ್ತಿರತಕ್ಕ ಒಂದು ವಾದವೇನೆಂದ್ದರೆ - ರೈತನ ಧಾನ್ಯಗಳಿಗೆ ಹೆಚ್ಚು ಬೆಲೆ ಬರುವಂಥ ಕಾಲದಲ್ಲಿ ನೀವು ಕಂಟ್ರೋಲ್ ಹಾಕಿ, ಆತನು ಬೆಳೆದ ಧಾನ್ಯಗಳ ಬೆಲೆಯು ಬಿದ್ದು

ಹೋದಾಗ ಸುಮ್ಮನಾಗುವುದು ಸರಿಯಲ್ಲ ಎಂಬುದು ಒಂದು. ಆದರೆ ತಾವು ಈ ವಿಚಾರವನ್ನು ಸ್ವಲ್ಪ ಸಾವಧಾನವಾಗಿ ಅಲೋಚನೆ ಮಾಡಬೇಕಾಗಿದೆ. ಶಾಸನ ಸಭೆಯೆಂಬುದು ಒಂದು ಪಕ್ಷಕ್ಕೆ ಸೇರಿದ್ದಲ್ಲಿ ಒಂದು ವರ್ಗದವರಿಗಾಗಿ ಮಾಡಿರತಕ್ಕದ್ದಲ್ಲ. ಇದು ಪಕ್ಷಾತೀತವಾದುದು, ವರ್ಗಾತೀತವಾದುದು. ಈ ಒಂದು ಸಮನ್ವಯ ದೃಷ್ಟಿಯಿಂದ ತಾವೆಲ್ಲರೂ ಈ ಪ್ರಶ್ನೆಯನ್ನು ನೋಡಬೇಕಾಗಿದೆ. ಶ್ರೀಮಾನ್ ವಿ. ವೆಂಕಟಪ್ಪನವರು ಹೇಳಿದರು. ಹೆಚ್ಚಾಗಿ ಬೆಳೆ ಬರುವುದಾದರೆ ಅದಕ್ಕೆ ಎಲ್ಲಾ ನಿರ್ಬಂಧಗಳನ್ನೂ ಮಾಡುತ್ತಿದ್ದೀರಿ, ಆದರೆ ಧಾನ್ಯಗಳ ಬೆಲೆ ಕಡಿಮೆಯಾಗಿ, ಆತನಿಗೆ ನಷ್ಟವಾಗುವಂತಾದರೆ ಯಾರೂ ಕೇಳತಕ್ಕವರಿಲ್ಲ, ಎಂದು.

ಆದರೆ ಈ ವಾದ ಇದಕ್ಕೆ ಅಷ್ಟು ಸಮಂಜಸವಾಗಿ ಕಾಣುವುದಿಲ್ಲ. ಇದೇ ರೀತಿ ಪ್ರತಿಯೊಂದು ಕೈಗಾರಿಕೆಗಳವರೂ ಒಂದು ವಾದ ಹೂಡಬಹುದು. ರೈತನಿಂದ ನಾವು ಕಂದಾಯ ಒಂದನ್ನು ತೆಗೆದುಕೊಳ್ಳುತ್ತಿದ್ದರೆ, ಈ ಕೈಗಾರಿಕೆಗಳವರಿಂದ 3-4 ರೀತಿಯಲ್ಲಿ ತೆರಿಗೆಗಳನ್ನು ಎಂದರೆ ಸೂಪರ್ ಟ್ಯಾಕ್ಸ್, ಇನ್‌ಕಂಟ್ಯಾಕ್ಸ್, ಇತ್ಯಾದಿ ತೆರಿಗೆಗಳನ್ನು ಅವರಿಂದ ತೆಗೆದುಕೊಳ್ಳುತ್ತೇವೆ. ಇಂಥ ಒಂದು ವಾದ ಬರೀ ಒಬ್ಬ ರೈತನಿಗೆ ಅನ್ವಿಸುವುದಿಲ್ಲ. ಎಲ್ಲ ಕೈಗಾರಿಕೆಗಳವರಿಗೂ ಇದನ್ನು ಅನ್ವಯಿಸಬೇಕಾಗುತ್ತದೆ. ನಾವು ಇದನ್ನು ಒಂದು ಪಾರ್ಟಿಯಿಂದ ಶಾಸನ ಮಾಡಿದರೆ ಅಷ್ಟು ಸಮಂಜಸವಾಗಿರುವುದಿಲ್ಲ. ಆದರೆ ರೈತನನ್ನು ಮುಗ್ಗಟಿನ ಪರಿಸ್ಥಿತಿಯಲ್ಲಿ ಕೈಬಿಡಬೇಕೆಂಬುದು ನನ್ನ ವಾದವಲ್ಲ. ಈ ರೀತಿ ಮಾಡಿದ್ದೇ ಆದರೆ ನಮ್ಮ ಆರ್ಥಿಕ ಪರಿಸ್ಥಿತಿ ಬಲು ಬೇಗ ತಲೆಕೆಳಗಾಗುತ್ತದೆ. ಈ ದೃಷ್ಟಿಯಿಂದ ನಾವು ಪರಿಶೀಲನೆ ಮಾಡಬೇಕು. ರೈತನಿಗೊಬ್ಬನಿಗೆ ಈ ದಿವಸ ನಾವು ಅಭಿಮಾನ ತೋರಿಸಿದರೆ ಮಿಕ್ಕವರೆಲ್ಲರಿಗೂ ಇದೇ ಅಭಿಮಾನವನ್ನು ತೋರಿಸಬೇಕಾಗುತ್ತದೆ.

In the language of planning, first priority must be given to food production and the agriculturist guaranteed a minimum profitable price.

ಈ ರೀತಿಯಾಗಿ ಅಮೇರಿಕಾ, ಇಂಗ್ಲೆಂಡ್ ಮುಂತಾದ ಕಡೆಗಳಲ್ಲೆಲ್ಲಾ ಮಾಡಿದ್ದಾರೆ. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸಂಸ್ಥೆಯವರೂ ಸಹ ಶ್ರೀ ಕುಮಾರಪ್ಪ ಸಮಿತಿ ಎಂಬುದಾಗಿ ಒಂದನ್ನು ಮಾಡಿದ್ದರು. ಆ ಸಮಿತಿಯವರೂ ಕೂಡ Mimimum profitable price for agricultural produce must be guaranteed to the agriculturists. ಎಂಬುದಾಗಿ ಶಿಫಾರಸು ಮಾಡಿದ್ದಾರೆ. ಈ ವಿಷಯವು ನಾನು

ಭಾಗವಹಿಸಿದ ಕೆಲವು ವರ್ಕಿಂಗ್ ಕಮಿಟಿ ಮೀಟಿಂಗ್‌ಗಳಲ್ಲಿ ಚರ್ಚೆಗೆ ಬಂದಿತ್ತು. ಅದೃಷ್ಟವಶಾತ್ ಶ್ರೀ ಟಿ.ಟಿ. ಕೃಷ್ಣಮಾಚಾರಿಯವರು ಇದೇ ರೀತಿ ಸಲಹೆ ಮಾಡಿರುವ ಹಾಗೆ ಕಾಣುತ್ತದೆ. ಕಷ್ಟಪರಿಸ್ಥಿತಿಯಲ್ಲಿದ್ದಾಗ ರೈತನಾದವನಿಗೆ ತನ್ನನ್ನು ಕೈಹಿಡಿದು ಎತ್ತತಕ್ಕವರಿದ್ದಾರೆ ಎಂಬ ಭರವಸೆಯನ್ನು ಬೆಳೆಯುವಂತೆ ಮಾಡಬೇಕೆಂದೇ ನಮ್ಮ ಎಲ್ಲರ ಆಸೆ. ನಮ್ಮ ಮೈಸೂರು ಶಾಸನ ಸಭೆ ಕೇಂದ್ರದವರ ಅಧೀನದಲ್ಲಿರತಕ್ಕ ಇಂಥ ಒಂದು ವಿಚಾರದಲ್ಲಿ ಕೈ ಹಾಕಿ ಒಂದು ಶಾಸನವನ್ನು ಮಾಡುವುದಕ್ಕೆ ಸಾಧ್ಯವಿದೆಯೆ ಎಂಬುದನ್ನು ತಾವೆಲ್ಲರೂ ಪರಿಗಣಿಸಬೇಕಾಗಿದೆ. ನಾನಾಗಲೇ ಹೇಳಿರುವ ಹಾಗೆ ರೈತನಿಗೆ ಒಂದು ರಕ್ಷಣೆ ಕೊಡತಕ್ಕದ್ದು ನಮ್ಮ ಕರ್ತವ್ಯ. ನಮ್ಮ ಕೈಲಾದುದನ್ನೆಲ್ಲಾ ಮಾಡೋಣ ಅದು ಸಾಧ್ಯವಾಗದಿದ್ದರೆ ಬೇರೆಯವರಿಗಾದರು ಶಿಫಾರಸ್ಸು ಮಾಡೋಣ.

ಇನ್ನು ಪ್ರೀವೀಪರ್ಸಿನ ವಿಚಾರವಾಗಿ ಶ್ರೀಮಾನ್ ಗೋಪಾಲಗೌಡರು ಒಂದು ಪ್ರಶ್ನೆಯನ್ನು ಎತ್ತಿದ್ದಾರೆ. ಅದಕ್ಕೆ ಆಗಲೇ ಶ್ರೀಮಾನ್ ಶಂಕರಲಿಂಗೇಗೌಡರು ಉತ್ತರವನ್ನು ಹೇಳಿ ಬಿಟ್ಟಿದ್ದಾರೆ. ಇದನ್ನು ಮೈಸೂರು ಸರ್ಕಾರದವರು ಕೊಡುವುದಿಲ್ಲ. ಇಂಡಿಯಾ ಸರ್ಕಾರದವರು ಕೊಡುತ್ತಿದ್ದಾರೆ. ಇದನ್ನು ಏನೋ ಒಂದು ಚಾರಿತ್ರಿಕ ಕಾರಣದ ಮೇಲೆ ಒಪ್ಪಂಧ ಮಾಡಿಕೊಂಡಿದ್ದೇವೆ. ಇಂಡಿಯಾ ದೇಶದಲ್ಲಿ ಈ ದಿವಸ ಎಷ್ಟು ರಾಜ ಮನೆತನದವರಿದ್ದಾರೆ ಎಂದರೆ ಸುಮಾರು ನಾಲ್ಕುನೂರು ರಾಜ ಮಹಾರಾಜರುಗಳಿಗೆಲ್ಲಾ ಈ ರೀತಿ ಒಂದು ಒಪ್ಪಂದ ಆಗಿ ಈ ಅನುಕೂಲ ಆಗಿದೆಯೇ ವಿನಾ ಮೈಸೂರಿನ ರಾಜರಿಗೆ ಮಾತ್ರ ಈ ಒಂದು ದಾಕ್ಷಿಣ್ಯ ಅಥವಾ ರಿಯಾಯಿತಿಯನ್ನು ತೋರಿಸಿರುವುದಿಲ್ಲ. ಆದ್ದರಿಂದ ಎಲ್ಲರಿಗೂ ಏನು ಅನ್ವಯಿಸುತ್ತದೆಯೋ ಆ ಕಾನೂನು ಅವರಿಗೂ ಕೂಡ ಅನ್ವಯಿಸುತ್ತದೆ. ನಾವ್ಯಾರು ಕೂಡ ಶ್ರೀಮಾನ್ಮಹಾರಾಜರೊಬ್ಬರ ಮೇಲೆ ಮಾತ್ರ ನಮ್ಮ ಕಟುವಾದ ದೃಷ್ಟಿಯನ್ನು ಬೀರಬೇಕಾಗಿಲ್ಲ.

**Sri Mulka Govinda Reddy :** It applies to all the princes in India.

**ಶ್ರೀ ಕೆ. ಹನುಮಂತಯ್ಯನವರು :** ಅದೊಂದು ವಾದವಿದೆ.

I must take the Members into my confindence.

ಶ್ರೀಮನ್ ಮಹಾರಾಜರು ಈ ದಿವಸ 26 ಲಕ್ಷ ಮತ್ತು ರಾಜ ಪ್ರಮುಖರ ಅಲೋಯನ್ಸ್ ಎಂದಿರುವ 3 ಲಕ್ಷ ರೂಪಾಯಿಗಳು ಇಷ್ಟನ್ನು ಖರ್ಚು ಮಾಡಿದರೆ ನಾವೇನೂ ಚಿಂತೆ ಮಾಡಬೇಕಾಗಿಲ್ಲ. ಅದಕ್ಕಿಂತ ಹೆಚ್ಚಾದ ಮೊಬಲಗು ನಾನಾ ರೂಪದಲ್ಲಿ ಈ ದಿವಸ ಖರ್ಚಾಗುತ್ತಿದೆ. ನಾನು ಶ್ರೀಮನ್ಮಹಾರಾಜರೊಡನೆ ಈ ವಿಷಯಗಳಲ್ಲಿ ಅರಿಕೆ ಮಾಡಿಕೊಳ್ಳುತ್ತಿದ್ದೇನೆ. 'ನೀವು ಒಪ್ಪಂದದ ಪ್ರಕಾರ ಯಾವ 26 ಲಕ್ಷವಿದೆಯೋ ಅದನ್ನು ತೆಗೆದುಕೊಳ್ಳಿ. ರಾಜಪ್ರಮುಖರ ಅಲೋಯನ್ಸ್ ಎಂದು ಇಂಡಿಯಾ ಸರ್ಕಾರದವರು ಏನೆಂದು ನಿಗದಿಮಾಡಿದ್ದಾರೋ ಅದನ್ನು ತೆಗೆದುಕೊಳ್ಳಿ; ಅದಕ್ಕೆ ಮೇಲ್ಪಟ್ಟು ಒಂದು ಕಾಸು ಕೂಡ ನೀವು ತೆಗೆದುಕೊಳ್ಳದೆ ಈ ಸರ್ಕಾರಕ್ಕೆ ಸಹಾಯ ಮಾಡಿ. ಪ್ರಜೆಗಳಿಗೆ ಸಹಾಯ ಮಾಡಿ, ಎಂದು ನಾನು ಅವರನ್ನು ಕೇಳಿಕೊಳ್ಳುತ್ತಿದ್ದೇನೆ. ಅವರು ಆ ದೊಡ್ಡ ಮನಸ್ಸು ಮಾಡುತ್ತಾರೆಂಬ ನಂಬಿಕೆ ನನಗಿದೆ. ಇನ್ನು ನಾನು ಈ ವಿಷಯದಲ್ಲಿ ಹೆಚ್ಚಾಗಿ ಪ್ರಸ್ತಾಪ ಮಾಡಬೇಕಾಗಿಲ್ಲ.

ಕೊನೆಯದಾಗಿ, ಶ್ರೀಮಾನ್ ಗೋಪಾಲಗೌಡರು ಒಂದು ತಾತ್ವಿಕವಾದ ಪ್ರಶ್ನೆಯನ್ನು ಎತ್ತಿದರು. ಅದಕ್ಕೆ ಉತ್ತರ ಕೊಡುವುದು ಸೂಕ್ತ ಎಂದು ಎನಿಸುತ್ತದೆ. ಆಹಾರ ಮಂತ್ರಿಗಳು ಅವರ ಜೀವಮಾನದಲ್ಲೇ ಸತ್ಯಾಗ್ರಹ ಮಾಡಲಿಲ್ಲ ಎಂದು ಹೇಳಿದರು; ಹಾಗೆ ಮಾಡಿದ್ದರೆ ಅವರಿಗೆ ಅದರ ಅರ್ಥ ಗೊತ್ತಾಗುತ್ತಿತ್ತು ಎಂದು ಹೇಳಿದರು. ಆದರೆ ನಾನು ಸತ್ಯಾಗ್ರಹ ಮಾಡಿದ್ದೇನೆಂಬುದನ್ನು ಅವರು ಒಪ್ಪಿಕೊಳ್ಳುತ್ತಾರೆ. ಆ ಅನುಭವ ನನಗೆ ಸ್ವಲ್ಪ ಇದೆ ಎಂಬುದನ್ನು ಅವರಲ್ಲಿ ನಿವೇದನೆ ಮಾಡಿಕೊಳ್ಳುತ್ತೇನೆ. ನನಗೆ ಸೋಷಿಯಲಿಸ್ಟ್ ಪಕ್ಷವನ್ನು ಕಂಡರೆ ಕೋಪವೇನೂ ಇಲ್ಲ.

ನಾನು ಮನಸ್ಸನ್ನು ಬಿಟ್ಟು ಹೇಳುವುದಾದರೆ ಸೋಷಿಯಲಿಸ್ಟ್ ಪಕ್ಷದಲ್ಲಿರುವ ಅನೇಕರು ನಮ್ಮ ಕಾಂಗ್ರೆಸ್ ಸಂಸ್ಥೆಯಲ್ಲಿದ್ದ ಹಿರಿಯಾಳುಗಳೇ ಆಗಿದ್ದಾರೆ. ದೇಶದ ಸ್ವಾತಂತ್ರ್ಯವನ್ನು ಸಂಪಾದಿಸುವುದರಲ್ಲಿ ಸೋಷಿಯಲಿಸ್ಟ್ ಪಕ್ಷದವರು ಹಿಂದೆ ಬಹಳ ಸಹಾಯ ಮಾಡಿದ್ದಾರೆ. ಆದ್ದರಿಂದ ಒಂದು ಸಹೋದರ ಭಾವನೆಯಿಂದ ಹಾಗೆ ಸಹಾಯ

ಮಾಡಿದ್ದರು ಎನ್ನಿಸುತ್ತದೆ. ಸತ್ಯಾಗ್ರಹ ಎಂಬುದನ್ನು ಮಹಾತ್ಮಗಾಂಧಿಯವರು ವಿಶದೀಕರಿಸಿ ಯಾವಾಗ ಕಾನ್‌ಸ್ಟಿಟ್ಯೂಷನಲ್ ಮೆಥೆಡ್ಸ್‌ನಲ್ಲಿ ಸಾಧಿಸುವುದಕ್ಕೆ ಅವಕಾಶವಿಲ್ಲವೋ ಆಗ ಸತ್ಯಾಗ್ರಹ ಬೇಕಾಗುತ್ತದೆ. ಹಿಂದಿದ್ದ ಸರ್ಕಾರದಲ್ಲಿ ವಯಸ್ಕರ ಮತದಾನ ಪದ್ಧತಿಯಂತೆ ಒಟ್ಟು ಮಾಡುವ ಅಧಿಕಾರವನ್ನು ಕೊಟ್ಟು ಅದರಿಂದ ಜವಾಬ್ದಾರಿ ಸರ್ಕಾರ ಸ್ಥಾಪಿಸಿ ಅಥವಾ ಸ್ವಾತಂತ್ರ್ಯ ನಮಗೆ ಕೊಡಿ ಎಂದು ಹೇಳಿ ಅದನ್ನು ಕಾನ್‌ಸ್ಟಿಟ್ಯೂಷನಲ್ ಮೆಥೆಡ್ಸನಲ್ಲಿ ಸಾಧಿಸುವುದಕ್ಕೆ ಸಾಧ್ಯವಿರಲಿಲ್ಲ. ಈಗ ನಾವು ಹೊಸ ರಾಜ್ಯಾಂಗವನ್ನು ಸ್ಥಾಪಿಸಿರುವುದರಿಂದ ಅದಕ್ಕೆ ಅವಕಾಶವಿದೆ. ಹಿಂದೆ ಇಂಡಿಯಾದೇಶದ ಜನರೆಲ್ಲಾ ಒಟ್ಟುಗೂಡಿದರು. ವೈಸರಾಯರ ಅಜ್ಞೆಯಂತೆ ನಡೆಯಬೇಕೆಂದು ವಿಧಿಯಿತ್ತು. ಆಗಿದ್ದ ಕೇಂದ್ರ ಶಾಸನ ಸಭೆಗೆ ಮತ್ತು ಪ್ರಾಂತಗಳ ಮತ್ತು ಸಂಸ್ಥಾನಗಳ ಶಾಸನ ಸಭೆಗಳಿಗೆ ಈಗಿನಂತೆ ಸರ್ಕಾರದಲ್ಲಿ ಪೂರ್ಣ ಅಧಿಕಾರವಿರಲಿಲ್ಲ. ಮಂತ್ರಿಮಂಡಲ ರಚಿಸಿ ಶಾಸನವನ್ನು ಅಂಗೀಕಾರಮಾಡುವ ಸರ್ವಾಧಿಕಾರ ಹಿಂದಿರಲಿಲ್ಲ. ಈಗ ರಾಜ್ಯಾಂಗದ ಪ್ರಕಾರ ಸರ್ವಾಧಿಕಾರ ಬಂದಿದೆ. ಆಕಸ್ಮಾತ್ತಾಗಿ ಈ ಮಹಾ ಚುನಾವಣೆಯಲ್ಲಿ ಕಾಂಗ್ರೆಸ್‌ಗೆ ಓಟು ಬಾರದೇ ಹೋಗಿದ್ದರೆ ಬೇರೆ ಪಕ್ಷಕ್ಕೆ ಓಟು ಬಂದಿದ್ದರೆ ಅವರೇ ಮಂತ್ರಿಮಂಡಲವನ್ನು ರಚಿಸುವ ಅವಕಾಶ ಅವರಿಗೆ ಇದ್ದೇ ಇತ್ತು. ಆಗ ಅವರ ನೀತಿಯೇನಿದೆಯೋ ಅದನ್ನೆಲ್ಲಾ ಕಾರ್ಯರೂಪಕ್ಕೆ ತರಲು ಯಾರೂ ಅಡ್ಡಿ ಬರುತ್ತಿರಲಿಲ್ಲ. ಆದ್ದರಿಂದ ಜನರ ಸಮ್ಮತಿಯನ್ನು ಪಡೆದು ಸೋಷಿಯಲಿಸ್ಟ್ ಪಕ್ಷವಲ್ಲದೆ ಇಂಡಿಯಾ ದೇಶದಲ್ಲಿರುವ ವಿಶಿಷ್ಟ ಕಮ್ಯುನಿಸ್ಟ್ ಮೊದಲಾದ ಪಕ್ಷಗಳು ಬೇಕಾದರೂ ಸರ್ಕಾರ ಸ್ಥಾಪಿಸಲು ಅವಕಾಶವಿದೆ. Therefore constitutional means is guaranteed under the constitution to every party. ಆದ್ದರಿಂದ ತಾವು ಜನರ ಮುಂದೆ ಪ್ರಚಾರ ಮಾಡಿ ತಮ್ಮ ತತ್ವವನ್ನು ತಿಳಿಸಿ ಜನರನ್ನೊಪ್ಪಿಸಿ ಓಟು ಪಡೆಯಿರಿ. ಸರ್ಕಾರ ರಚಿಸಿ, ಅನಂತರ ಏನು ಶಾಸನ ಬೇಕಾದರೂ ಮಾಡಿ. ಆ ರೀತಿ ಮಾಡದೆ ಆ ಸಮಯ ಕಾಯದೆ ಸತ್ಯಾಗ್ರಹ ಮಾಡುತ್ತೇವೆಂದು ಹೇಳಬಹುದು. ನಾಳೆ ನಾನು ಪ್ರತಿಪಕ್ಷಕ್ಕೆ ಬಂದರೆ ಸತ್ಯಾಗ್ರಹ ಇನ್ನೂ ಹೆಚ್ಚಾಗಿ ಮಾಡಲು ದೇವರು ನನಗೆ ಶಕ್ತಿ ಕೊಟ್ಟಿದ್ದಾನೆ. ಆದ್ದರಿಂದ ಈ ರೀತಿ ಚುನಾಯಿತ ಸರ್ಕಾರವನ್ನು ಈ ಪ್ರಜಾಪ್ರಭುತ್ವಯುಗದಲ್ಲಿ ಪ್ರತಿಭಟಿಸುವುದಕ್ಕೆ ನೀವುಗಳು ಸತ್ಯಾಗ್ರಹವನ್ನು ಪ್ರಾರಂಭಿಸಿದರೆ ಅದೇ ಚಾಳಿಯಾಗಿ ಪರಿಣಮಿಸುತ್ತದೆ. ಕೆ.ಎಂ.ಪಿ. ಪಕ್ಷದವರು ಕಾಂಗ್ರೆಸ್ ಅಧಿಕಾರಕ್ಕೆ ಬರಲಿ, ಸತ್ಯಾಗ್ರಹ ಪ್ರಾರಂಭಿಸುತ್ತೇವೆ ಎಂದು ಹೇಳುತ್ತಿದ್ದರು.

Democratic Structure itself will collapse. I appeal to him to see that the working of the democracy is safe guarded.

**ಶ್ರೀ ಮುಲ್ಕ ಗೋವಿಂದ ರೆಡ್ಡಿಯವರು** : On a point of explanation, ಇಲ್ಲಿ ಸರ್ಕಾರ ಉರುಳಿಸಬೇಕೆಂದು ಸತ್ಯಾಗ್ರಹ ಮಾಡಲಿಲ್ಲ. ಸರ್ಕಾರಕ್ಕೆ ಕಷ್ಟ ತಿಳಿಯಲಿ, ಅದರಿಂದ ಸಹಾಯ ದೊರೆಯಲಿ ಎಂಬ ಉದ್ದೇಶದಿಂದ ಸತ್ಯಾಗ್ರಹ ಮಾಡುತ್ತಿದ್ದಾರೆ. ಕಾನ್‌ಸ್ಟಿಟ್ಯೂಷನಲ್ ಮೆಥೆಡ್‌ನಲ್ಲಿ ನಮಗೆ ನಂಬಿಕೆಯಿದೆ.

(ವಿಧಾನ ಸಭೆ ಕಲಾಪ, ದಿ : 30-6-1952)

## 4. ಶೈಕ್ಷಣಿಕ ಸುಧಾರಣೆಗಳನ್ನು ಕುರಿತು

ಶ್ರೀ ಕೆ. ಹನುಮಂತಯ್ಯ (ಮುಖ್ಯಮಂತ್ರಿ) : ಸ್ವಾಮಿ, ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸುವುದನ್ನು ಕುರಿತು ಚರ್ಚೆಯಲ್ಲಿ ಈಗ ನಾವು ಒಂದು ಹಂತವನ್ನು ತಲುಪಿರುವುದರಿಂದ ನನಗೆ ತುಂಬ ಸಂತೋಷವಾಗಿದೆ. ನಾವು ಮೊದಲ ಬಾರಿಗೆ ಸಂವಿಧಾನವು ಹೇಳುವಂತೆ ಚುನಾಯಿತರಾಗಿದ್ದೇವೆ. ಐದು ವರ್ಷಗಳ ಕಾಲ ನಾವು ಈ ಸದನದ ಸದಸ್ಯತ್ವನನ್ನು, ಅಧಿಕಾರವನ್ನು ಪಡೆದಿರುತ್ತೇವೆ. ಈ ಮೊದಲನೆಯ ಶಾಸನ ಸಭೆಯು ಮುಂದಿನ ಪೀಳಿಗೆಯು ಖುಷಿಯಾಗಿರುವಂತಹ ಏನನ್ನು ಸಾಧಿಸಿದೆ? ನಾಡಿಗೆ ಏನು ಮಾಡಿದೆ ಎಂಬುದನ್ನು ಭವಿಷತ್ತು ನಿರ್ಧರಿಸುತ್ತದೆ. ಅವರಿಗೆ ಖಾಯಂ ಆಗಿ ಸಂತೋಷದಾಯಕವಾದ ಎರಡು ಅಂಶಗಳಿವೆ. ಒಂದು, ಮೈಸೂರು ರಾಜ್ಯದ ವಿಸ್ತರಣೆ; ಇನ್ನೊಂದು ಈಗ ನಾವು ಕೈಗೆತ್ತಿಕೊಂಡಿರುವ ಶೈಕ್ಷಣಿಕ ವ್ಯವಸ್ಥೆಯ ಸುಧಾರಣೆ. ಆದ್ದರಿಂದ ಈ ಸುಧಾರಣೆಗೆ ಬಹಳ ಆಳವಾದ ಅರ್ಥವಿದೆ. ಅದು ಈ ರಾಜ್ಯದ ಆರ್ಥಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಯ ಪಥವನ್ನೇ ಬದಲಾಯಿಸುತ್ತದೆ. ಇದನ್ನು ಪಕ್ಷೇತರ ಪ್ರಶ್ನೆಯಾಗಿ ಪರಿಗಣಿಸಿರುವುದರಿಂದ ನನಗೆ ನಿಜವಾಗಿ ಸಂತೋಷವಾಗಿದೆ. ವಾಸ್ತವವಾಗಿ, ಸಮಿತಿಯು ನೇಮಕವಾದಾಗ ಅದರಲ್ಲಿ 40 ಜನ ಸದಸ್ಯರಿದ್ದರು. ಆಗ ಕಾಂಗ್ರೆಸ್ ಸರ್ಕಾರವಿದ್ದರೂ ಈ ಶಾಸನ ಸಭೆಯಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಸೇರಿದ ಸದಸ್ಯರ ಮೇಜಾರಿಟಿ ಇದ್ದರೂ ಸಮಿತಿಯಲ್ಲಿದ್ದ ಕಾಂಗ್ರೆಸ್ಸಿಗರು ಐದೇ ಜನ. ಉಳಿದ 35 ಜನರೂ ಶೈಕ್ಷಣಿಕ ವಿಚಾರಗಳಲ್ಲಿ ವಾಸ್ತವಿಕವಾದ ಅನುಭವ ಪಡೆದಿದ್ದವರು, ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ಶೈಕ್ಷಣಿಕ ಬೆಳವಣಿಗೆಯ ವಿವಿಧ ಹಂತಗಳಲ್ಲಿ

ಅನುಭವ ಗಳಿಸಿದ್ದವರು. ಈಗ ನಾವು ಪರಿಶೀಲಿಸುತ್ತಿರುವುದು ಅವರ ಅಭಿಪ್ರಾಯಗಳನ್ನು. ಚರ್ಚೆಯಲ್ಲಿರುವುದು ಕಾಂಗ್ರೆಸ್ ಅಭಿಪ್ರಾಯ ಎಂದು ಕರೆಯುವಂಥದಲ್ಲ; ಅಥವಾ ಬಹುಸಂಖ್ಯಾತ ಪಕ್ಷದ ಸಲಹೆಗಳಲ್ಲ. ಸಲಹೆಗಳು ಇದುವರೆಗೆ ಇಡೀ ಭಾರತದಲ್ಲಿ ಪರಿಶೀಲಿಸಲಾಗಿರುವ ಶೈಕ್ಷಣಿಕ ಚಿಂತನೆಯ ಸಾರವನ್ನು ಪ್ರತಿನಿಧಿಸುತ್ತವೆ. ಎಲ್ಲಕ್ಕಿಂತ ಮಿಗಿಲಾಗಿ ಡಾ. ರಾಧಾಕೃಷ್ಣನ್ ಅವರು ಶೈಕ್ಷಣಿಕ ವಿಚಾರಗಳಲ್ಲಿ ಅತ್ಯುನ್ನತ ಪ್ರಮಾಣ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ ಮತ್ತು ಕೊಂಡಾಡುತ್ತಾರೆ. ಈ ವರದಿಯಲ್ಲಿರುವ ಪ್ರತಿಯೊಂದು ಸಲಹೆಯನ್ನು ಅವರು ವಿವರವಾಗಿ ಪರೀಕ್ಷಿಸಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಆದ್ದರಿಂದ, ಈ ಸಲಹೆಗಳನ್ನು ಪರಿಶೀಲಿಸುವಾಗ ನಾವು, ಗಂಭೀರಮನಸ್ಕರಾದ ಹಿರಿಯರು ಆಲೋಚನೆ ಮಾಡಿ ಒಂದು ರೂಪವನ್ನು ಆಕಾರವನ್ನು ಕೊಟ್ಟಿರುವ ಗಂಭೀರವಾದ ವಿಚಾರಗಳಿವು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ಆದ್ದರಿಂದ ನಮ್ಮೆದುರಿಗೆ ಸಾಮಗ್ರಿ ಇದೆ, ದೂರದರ್ಶಿಯಾದ ಸಲಹೆಗಳಿವೆ. ಪರೀಕ್ಷಿಸುವುದು, ಆಲೋಚಿಸುವುದು ಮತ್ತು ವಿವರಿಸುವುದು ಮಾತ್ರವಲ್ಲ ಕಾರ್ಯಗತಗೊಳಿಸಲು ಸಿದ್ಧವಾಗಿವೆ. ಈ ಸುಧಾರಣೆಗಳನ್ನು ಸರ್ಕಾರವು ಇಂದಿಗಾದರೂ ಕಾರ್ಯಗತಗೊಳಿಸುತ್ತದೆಯೆ ಎಂಬುದಾಗಿ, ಗೌರವಾನ್ವಿತ ವಿರೋಧ ಪಕ್ಷದ ನಾಯಕರೂ ಸೇರಿದಂತೆ - ಅವರು ಸುಧಾರಣೆಯ ರೂಪಕ್ಕಾಗಿ ಮಾತ್ರ ಹಾಗೆ ಹೇಳಿರಬಹುದು - ಅನೇಕರು ಸಂದೇಹವನ್ನು ವ್ಯಕ್ತಪಡಿಸಿದ್ದಾರೆ. ಡಾ. ರೆಡ್ಡಿ ಅವರ ವರದಿಯು, ಇನ್ನೂ ಅನೇಕ ವರದಿಗಳು ಕಾರ್ಯಗತಗೊಳ್ಳದೆ ಇರುವಾಗ ಇದೂ ಆ ದಾರಿಯನ್ನೇ ಹಿಡಿಯಬಹುದು ಎಂದು ಅವರು ಸಂದೇಹಪಟ್ಟಿದ್ದಾರೆ.

ಈ ಸಮಿತಿಯು ಕೆಲಸ ಮಾಡಿರುವುದನ್ನು ಸ್ವಲ್ಪ ನೋಡಿದರೆ, ಎಷ್ಟು ಮೇಲಿನ ವಿಚಕ್ಷಣೆಯಿಂದಲೂ ವೇಗದಿಂದಲೂ ಅದು ಕೆಲಸ ಮಾಡಿದೆಯೆಂಬುದನ್ನು ಗಮನಿಸಿದರೆ, ನಾವೆಲ್ಲರೂ ಈ ಶೈಕ್ಷಣಿಕ ಸುಧಾರಣೆಗಳನ್ನು ಕಾರ್ಯಗತಗೊಳಿಸಲು ಕಾತರರಾಗಿದ್ದೇವೆನ್ನುವುದಕ್ಕೆ ಅದು ಸಾಕಷ್ಟು ಸಮರ್ಥನೆಯಾಗುತ್ತದೆ. ಮಾನ್ಯರೆ, ಅಷ್ಟು ಮಾತ್ರವೇ ಅಲ್ಲ, ರಾಜ್ಯಾದ್ಯಂತ ನಾವು ಜಿಲ್ಲಾ ಶೈಕ್ಷಣಿಕ ಸಮ್ಮೇಳನಗಳನ್ನು ನಡೆಸಿದೆವು. ಸಭಾ ಭವನವು ತುಂಬಿ ತುಳುಕುವಂತೆ ಶ್ರೋತೃಗಳು ಬರುತ್ತಿದ್ದರು. ಈ ಸುಧಾರಣೆಗಳ ಬಗೆಗೆ ಭಾರೀ ಉತ್ಸಾಹ ವ್ಯಕ್ತವಾಗುತ್ತಿತ್ತು. ಅಭಿಪ್ರಾಯ ಭಿನ್ನತೆಯಿರುವ ಕೆಲವು ಸಣ್ಣಪುಟ್ಟ ವಿಷಯಗಳಿರಬಹುದು. ಅವುಗಳನ್ನು ಸುಲಭವಾಗಿ ಪರಿಹರಿಸಬಹುದು. ಈ ಸದನದಲ್ಲೂ ಮೇಲ್ಮನೆಯಲ್ಲೂ ಮಾನ್ಯ ಸದಸ್ಯರು

760-7

ನೀಡಿರುವ ಸಲಹೆಗಳನ್ನು ಪರಿಗಣಿಸಲಾಗುವುದು. ಶೈಕ್ಷಣಿಕ ಸುಧಾರಣಾ ಸಮಿತಿಯನ್ನು ವಿಸರ್ಜಿಸಿಲ್ಲ. ಅದು ಸಕ್ರಿಯವಾಗಿದೆ. ಅಗತ್ಯವೆನಿಸಿದರೆ ಶಾಸನ ಸಭೆಯಲ್ಲಿ ಸೂಚಿತವಾಗಿರುವ ವಿವಿಧ ಸೂಚನೆಗಳನ್ನು ಆ ಸಮಿತಿಯ ಮುಂದೆ ಮರು ಪರೀಕ್ಷೆಗಾಗಿ ಇರಿಸುತ್ತೇವೆ. ಸೂಕ್ತವೆನಿಸಿದರೆ ಆ ಸಲಹೆ ಸೂಚನೆಗಳನ್ನು ಸಮಿತಿಯು ಅಂಗೀಕರಿಸಿ ಅಂತಿಮ ರೂಪದಲ್ಲಿ ಅಳವಡಿಸುತ್ತದೆ ಎಂದು ನಾವು ಭಾವಿಸುತ್ತೇವೆ.

ಮಾನ್ಯರೆ, ಭಾರತವು ಇಂದು ಎದುರಿಸುತ್ತಿರುವ ಬಹು ದೊಡ್ಡ ಸಮಸ್ಯೆ, ಈಗ ಪ್ರತಿಯೊಬ್ಬರೂ ಚರ್ಚಿಸುತ್ತಿರುವ ಹಾಗೆ ನಿರುದ್ಯೋಗದ್ದು. ಈ ಸದನದಲ್ಲಿ, ಮೇಲ್ಮನೆಯಲ್ಲಿ ಹಾಗೂ ಸಂಸತ್ತಿನಲ್ಲಿ, ಈ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುವುದು ಹೇಗೆ ಎಂಬುದು ಎಲ್ಲರಿಗೂ ಕಳವಳವನ್ನು ಉಂಟುಮಾಡಿದೆ. ನಾವು ಈ ಸಮಸ್ಯೆಯ ಮೂಲವನ್ನು ಪ್ರಸ್ತುತ ಶಿಕ್ಷಣ ವ್ಯವಸ್ಥೆಗೆ ಆರೋಪಿಸಬಹುದು. ಏಕೆಂದರೆ, ಈಗಿರುವ ವಿದ್ಯಾಭ್ಯಾಸ ವ್ಯವಸ್ಥೆಯು ನಮ್ಮ ಯುವ ಜನರೆಲ್ಲರಿಗೆ ನಿರ್ದಿಷ್ಟ ವೃತ್ತಿಗಳು ಮತ್ತು ಕಸಬುಗಳ ತರಬೇತಿ ನೀಡಿ, ಮಿಕ್ಕ ವಿಸ್ತಾರವಾದ ಕ್ಷೇತ್ರವನ್ನು ಮುಟ್ಟುವುದೇ ಇಲ್ಲ, ಹಾಗೆ ಬಿಟ್ಟು ಬಿಡುತ್ತಿದೆ. ಆದ್ದರಿಂದಾಗಿ ದೇಶದಲ್ಲಿ ವಿವಿಧ ವೃತ್ತಿರಂಗಗಳಲ್ಲಿ ಮಾನವ ಶಕ್ತಿಯ ಸೂಕ್ತವಾದ ಹಂಚಿಕೆ ಕಂಡುಬರುವುದಿಲ್ಲ. ನಮ್ಮ ಮಾನವ ಸಂಪನ್ಮೂಲವನ್ನು ಸರಿಯಾಗಿ ಹೊಂದಿಸದಿರುವುದರ ಪರಿಣಾಮವೇ ಇಂದು ನಾವು ನೋಡುತ್ತಿರುವ ನಿರುದ್ಯೋಗ. ಅಷ್ಟೇ ಹೊರತು, ಉದ್ಯೋಗ ಸಾಮರ್ಥ್ಯವಿಲ್ಲದ ಜನಸಂಖ್ಯೆ ವಿಪರೀತವಾಗಿರುವುದು ಕಾರಣವಲ್ಲ. ಈಗ ನಾವು ಪರಿಶೀಲಿಸುತ್ತಿರುವ ಶೈಕ್ಷಣಿಕ ವ್ಯವಸ್ಥೆಯಾದರೋ ಆ ಸಮಸ್ಯೆಯನ್ನು ಬೇರು ಸಮೇತ ಅಲುಗಿಸುತ್ತದೆ. ಮೂಲಭೂತವಾಗಿ ಅದನ್ನು ಎದುರಿಸುತ್ತದೆ. ಆದ್ದರಿಂದ, ಪ್ರತಿಯೊಬ್ಬ ವಿದ್ಯಾವಂತ ವ್ಯಕ್ತಿಯೂ ಒಂದಿಲ್ಲೊಂದು ಉಪಯುಕ್ತವಾದ ವೃತ್ತಿಯಲ್ಲಿ ನಿರತನಾಗಿ ಸಮಾಜದಲ್ಲಿ ಹೊಂದಿಕೊಳ್ಳುತ್ತಾನೆ ಎಂದು ಇದರಿಂದ ಆಶಿಸುತ್ತಿದ್ದೇವೆ. ನಿರುದ್ಯೋಗ ಎಂಬ ಪ್ರಶ್ನೆಯೇ ಇರುವುದಿಲ್ಲ. ಸಮಾಜದ ವಿನ್ಯಾಸವನ್ನು ಸ್ವಲ್ಪ ಗಮನಿಸಿ. ಸ್ವಾಮಿ. ಹೆಸರುಗಳು ಬದಲಾಗಬಹುದು, ಭಾಷೆಗಳು ಬದಲಾಗಬಹುದು; ಆದರೆ ಸಮಾಜದ ಸ್ವರೂಪವು ಹಾಗೆಯೇ ಉಳಿಯುತ್ತದೆ. ಜನರು ಕೃಷಿಯಿಂದ ಬದುಕಬೇಕು; ಕೈಗಾರಿಕೆಯಿಂದ ಬದುಕಬೇಕು; ಇನ್ನು ಕೆಲವರು ವಿವಿಧ ನೌಕರಿಗಳಿಂದ ಬದುಕಬೇಕು. ಅವು ಸರ್ಕಾರಿ ಸೇವೆಯಾಗಬಹುದು, ಶಾಸನ ಸಭೆಯ ಸದಸ್ಯತ್ವವಾಗಬಹುದು, ಏನೇ ಆಗಬಹುದು. ಈ ಖಂಡದ ಸಮಾಜವಾಗಲಿ, ಆ ಖಂಡದ್ದಾಗಲಿ, ಈ ಶತಮಾನದ್ದಾಗಲಿ ಬೇರೊಂದು

ಶತಮಾನದ್ದಾಗಲಿ ಈ ವಿನ್ಯಾಸವು ಹಾಗೆಯೇ ಅಬಾಧಿತವಾಗಿ ಉಳಿಯುತ್ತದೆ. ಈ ರೂಪಗಳು ಹೊಂದಿಕೊಳ್ಳಬೇಕಾದರೆ ಜನರಿಗೆ ಶಿಕ್ಷಣ ಅತ್ಯಗತ್ಯ. ಇಂದು ಆಗಿರುವುದಾದರೂ ಏನು? ನಾವು ವಿವಿಧ ವೃತ್ತಿಗಳಿಗಾಗಿ ಅತಿ ಹೆಚ್ಚು ಜನರನ್ನು ತರಬೇತಿಗೊಳಿಸಿದ್ದೇವೆ. ಆದರೆ ಕೃಷಿ ಉದ್ಯಮವನ್ನು ಅದರಷ್ಟಕ್ಕೆ ಬಿಟ್ಟುಬಿಟ್ಟಿದ್ದೇವೆ. ಈ ತಪ್ಪು ಹೊಂದಾಣಿಕೆಯು ದೇಶದಲ್ಲಿ ನಿರುದ್ಯೋಗವನ್ನು, ರೋಗವನ್ನು ಅತೃಪ್ತಿ - ಅಶಿಸ್ತುಗಳನ್ನು ಸೃಷ್ಟಿಸಿದೆ. ಈ ಸಮಾಜದ ಸ್ವರೂಪವನ್ನು ನಮ್ಮ ಅಗತ್ಯಗಳಿಗೂ ಬೆಳೆಯುತ್ತಿರುವ ಜನತೆಯ ಅಗತ್ಯಗಳಿಗೂ ಸಮರಸವಾಗಿ ಹೊಂದಿಸುವ ದೃಷ್ಟಿಯಿಂದ ಈ ಶೈಕ್ಷಣಿಕ ವ್ಯವಸ್ಥೆಯನ್ನು ರೂಪಿಸಲಾಗಿದೆ.

ಗಾಂಧೀಜಿಯವರು ಹೇಳಿದಂತೆ, ನಮ್ಮಲ್ಲಿ ಎಲ್ಲರೂ ಹೇಳುತ್ತಿರುವಂತೆ, ನಮ್ಮ ಜನತೆಯು ಶೇ. 90 ರಷ್ಟು ಹಳ್ಳಿಗಳಲ್ಲಿ ವಾಸ ಮಾಡುತ್ತಾರೆ. ಬಹುಶಃ ಔದ್ಯಮೀಕರಣದ ಪ್ರಕ್ರಿಯೆಯು ನಗರಗಳ ಜನಸಂಖ್ಯೆಯನ್ನು ಇನ್ನೂ 10-20 ರಷ್ಟು ಹೆಚ್ಚಿಸಬಹುದು. ಶೇ. 30 ಅಥವಾ 40 ಕ್ಕಿಂತ ಹೆಚ್ಚು ಜನರು ನಗರಗಳಲ್ಲಿ ವಾಸಿಸಲು ಬಿಡುವುದು ಕಷ್ಟ. ಮಿಕ್ಕವರು ಹಳ್ಳಿಗಳಲ್ಲೇ ವಾಸ ಮಾಡಬೇಕು. ಹಳ್ಳಿಗಳಲ್ಲಿ ಇರುತ್ತಾ ಅವರು ಏನು ಮಾಡಬೇಕು? ಬೇಸಾಯ ಮಾಡಬೇಕು ಮತ್ತು ಸಣ್ಣ ಕೈಗಾರಿಕೆ ಅಥವಾ ಗೃಹ ಕೈಗಾರಿಕೆ ಎಂದು ಕರೆಯುವಂತಹ ಕಸಬುಗಳನ್ನು ಮಾಡಬೇಕು. ನಮ್ಮ ಯುವಕಯುವತಿಯರಲ್ಲಿ ಶೇ. 60ರಷ್ಟು ಜನರು ಈ ವಿನ್ಯಾಸಕ್ಕೆ ಹೊಂದಿಕೊಳ್ಳುವಂತೆ, ಉಳಿದ ಶೇ. 40 ಜನರು ಬೃಹತ್ ಕೈಗಾರಿಕೆಗಳು, ವಿವಿಧ ವೃತ್ತಿಗಳು ಮತ್ತು ಇತರ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡಬೇಕು. ಹೀಗೆ ಹೇಳಿದರೆ ಯಾರೂ ನನ್ನನ್ನು ತಪ್ಪಾಗಿ ತಿಳಿದುಕೊಳ್ಳಬಾರದು. ಕೆಲವೊಮ್ಮೆ ಆಪಾದಿಸುವಂತಹ ವರ್ಗ ಅಥವಾ ಜಾತಿ ಪಕ್ಷಪಾತವನ್ನು ನಾನು ಪ್ರತಿಪಾದಿಸುತ್ತಿಲ್ಲ. ಒಬ್ಬ ರೈತ, ಒಬ್ಬ ಕೃಷಿಕ ಎಂದೆಂದಿಗೂ ಬೇಸಾಯಗಾರನಾಗಿಯೇ ಇರಬೇಕು, ಅವನು ಬೇರೆ ಬೇರೆ ವೃತ್ತಿಗಳಲ್ಲಿ ಮುಂದೆ ಬರಬಾರದು, ಅಥವಾ ಒಬ್ಬ ವಿಜ್ಞಾನಿಯೋ ಈ ದೇಶವನ್ನು ಆಳುವವನೋ ಆಗಬಾರದು ಎಂದು ನನ್ನ ಅಪೇಕ್ಷೆಯಲ್ಲ; ಖಂಡಿತವಾಗಿಯೂ ಅಲ್ಲ, ಆ ರೀತಿಯಾಗಿ ನಾನು ಯೋಚಿಸುತ್ತಲೇ ಇಲ್ಲ. ಎಲ್ಲ ವೃತ್ತಿಗಳು ಎಲ್ಲ ವ್ಯಕ್ತಿಗಳಿಗೂ, ಅವರು ಯಾವ ಸ್ಥಳದಿಂದ ಬಂದವರು, ಯಾವ ಜಾತಿಗೆ ಸೇರಿದವರು ಎಂಬ ವಿವಕ್ಷೆಯಿಲ್ಲದೆ, ತೆರೆದಿವೆ. ಶೇ. 60 ಜನರು ಹಳ್ಳಿಗಳಲ್ಲೂ, ಶೇ. 40 ಜನರು ನಗರಗಳಲ್ಲೂ ವಾಸ ಮಾಡಬೇಕು. ಆದ್ದರಿಂದ ನಮ್ಮ ಶಿಕ್ಷಣ ವ್ಯವಸ್ಥೆಯನ್ನು

ಅದಕ್ಕೆ ತಕ್ಕಂತೆ ಹೊಂದಾಣಿಕೆಗೊಳಿಸಬೇಕು. ಪ್ರಸ್ತುತ ಸುಧಾರಿತ ವ್ಯವಸ್ಥೆಯಲ್ಲಿ ರೂಪಿಸಿರುವ ದೈಹಿಕ ಪರಿಶ್ರಮ ಈ ದೃಷ್ಟಿಯನ್ನೇ ಹೊಂದಿದೆ. ದೈಹಿಕ ಪರಿಶ್ರಮವನ್ನು ಕಲಿಸಬೇಕಾದರೆ ಅದು ಒಬ್ಬ ಕೃಷಿಕನನ್ನಾಗಿ, ಒಬ್ಬ ವೃತ್ತಿ ಜೀವಿಯನ್ನು ಉತ್ತಮ ವೃತ್ತಿಪರರನ್ನಾಗಿ ಮಾಡುವ ರೀತಿಯಲ್ಲಿ ಕಲಿಸಬೇಕು. ಇಲ್ಲಿ ಗುರಿಯು ಗುಣಮಟ್ಟವನ್ನು ಉತ್ತಮಪಡಿಸುವುದೇ ಹೊರತು ವಿನ್ಯಾಸವನ್ನು ಏರುಪೇರುಗೊಳಿಸುವುದಿಲ್ಲ. ವೃತ್ತಿ ಸಂಸ್ಥೆಗಳೆಂದು ಕರೆಯುವ ಈ ಸಂಸ್ಥೆಗಳಿಗೆ ಹಣ ಎಲ್ಲಿಂದ ಬರುತ್ತದೆ ಎಂದು ನನ್ನನ್ನು ಅನೇಕ ಸದಸ್ಯರು ಕೇಳಿದ್ದಾರೆ. ಸಮ್ಮೇಳನಗಳಲ್ಲಿಯೂ ಕೇಳಿದ್ದಾರೆ. ಸಂಸ್ಥೆಯ ಕಟ್ಟಡಗಳನ್ನು ಕಟ್ಟಲು, ಅಧ್ಯಾಪಕರಿಗೆ ತರಬೇತಿ ನೀಡಲು, ಅಗತ್ಯವಾದ ಯಂತ್ರೋಪಕರಣಗಳಿಂದ ಸಜ್ಜುಗೊಳಿಸಲು ಹಣಬೇಕು, ಹೆಚ್ಚು ಪ್ರಮಾಣದಲ್ಲಿ ಹಣ ಬೇಕು. ಈಗ ನಾವು ಮಾಡುತ್ತಿರುವ ಮಾಮೂಲು ಕ್ರಮದಲ್ಲಿ ಹೋದರೆ ಅಪಾರವಾದ ಹಣಬೇಕಾಗುತ್ತದೆ. ಅದರಲ್ಲಿ ಸಂದೇಹವಿಲ್ಲ. ಆದರೆ ನಾನು ಆ ರೀತಿ ಸವೆದುಹೋದ ದಾರಿಯಲ್ಲಿ ಯೋಚಿಸುತ್ತಿಲ್ಲ. ಮಾನಸಿಕವಾಗಿ ಹಳೆಯ ಜಾಡು ಹಿಡಿದು ಹೋಗುವುದು ಅತ್ಯಂತ ಸುಲಭ. ನಾವು ಅದರಿಂದ ಹೊರಬರಬೇಕು. ಸಾಂಪ್ರದಾಯಿಕ ಮನಸ್ಕನಾದ ಶಿಕ್ಷಣ ತಜ್ಞನು ಏನನ್ನು ಸಾಮಾನ್ಯವಾಗಿ ಯೋಚಿಸುತ್ತಾನೋ ಹಾಗೆ ಅದನ್ನು ನಾನು ಯೋಚಿಸುತ್ತಿಲ್ಲ. ಹಿಂದೆ ಪ್ರಾಥಮಿಕ ಶಾಲೆಗೆ ಸೇರಿದಂತೆ ಮರಗೆಲಸದ ತರಗತಿಯಿರುತ್ತಿತ್ತು, ವಿದ್ಯಾರ್ಥಿಗಳು ಮರಗೆಲಸ ಕಲಿಯುತ್ತಿದ್ದರು, ಯಾರೂ ಅದನ್ನು ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲ. ಮರಗೆಲಸದ ಬೋಧಕರೂ ಅದನ್ನು ಗಂಭೀರವಾಗಿ ಪರಿಗಣಿಸುತ್ತಿರಲಿಲ್ಲವಾಗಿ ವ್ಯವಸ್ಥೆಯೇ ಸೋತಿತು. ಅದನ್ನೇ ಪ್ರಾರಂಭಿಸಿದ್ದ ಸರ್ಕಾರವೇ ಕೊನೆಗೆ ಅದನ್ನು ರದ್ದುಪಡಿಸಿತು. ವಿವಿಧ ವೃತ್ತಿ ಕ್ಷೇತ್ರಗಳಿಂದ ವಿದ್ಯಾರ್ಥಿಗಳನ್ನು ಆಯ್ದು ಶಾಲೆಗಳಲ್ಲಿಟ್ಟು ಬೆಳೆಸಲು ಹೋದರೆ ಕೊನೆಗೆ ಸಹಜವಾಗಿ ಆಗುವುದು ಹೀಗೆಯೇ. ನನ್ನ ವಿಚಾರ ವಿದ್ಯಾರ್ಥಿಯನ್ನೇ ಕೆಲಸ ನಡೆಯುತ್ತಿರುವ ಸ್ಥಳಕ್ಕೆ ಕರೆದೊಯ್ಯುವುದೇ ಹೊರತು ಯಂತ್ರಗಳನ್ನು ವಿವಿಧ ಸಜ್ಜಿಕೆಗಳನ್ನು ಶಾಲೆಗೆ ತರುವುದಲ್ಲ. ಒಂದು ಉದಾಹರಣೆ ಕೊಡುತ್ತೇನೆ. ಕೆಲವು ಜನರು ಬಟ್ಟೆಯ ಗಿರಣಿಯಲ್ಲಿ ಹೇಗೆ ಕೆಲಸ ಮಾಡಬೇಕೆಂಬುದನ್ನು ಕಲಿಯಲು ಬಯಸುತ್ತಾರೆ ಎನ್ನೋಣ. ಈಗಿರುವ ವ್ಯವಸ್ಥೆಯ ಪ್ರಕಾರ, ನಾವು ಶಾಲಾ ಅಥವಾ ಕಾಲೇಜಿನ ಬಳಿ ಒಂದು ಕಾರ್ಖಾನೆಯನ್ನು ಸ್ಥಾಪಿಸಬೇಕು. ಅದನ್ನು ಸಜ್ಜುಗೊಳಿಸಬೇಕು, ಹತ್ತಿಬಟ್ಟೆ ತಯಾರಿಕೆಯಲ್ಲಿ ನಿಪುಣರಾದ ಪ್ರಾಧ್ಯಾಪಕರನ್ನು ಕರೆಸಿ ಸಂಸ್ಥೆಯಲ್ಲಿರುವವರಿಗೆ ಬೋಧನೆ ಕೊಡಿಸಬೇಕು. ಇದಕ್ಕೆ ಅಪಾರವಾದ ಹಣವೇನೋ ಅಗತ್ಯವಾಗಿ ಬೇಕು.

ಈಗಾಗಲೇ ಬೆಂಗಳೂರಿನಲ್ಲಿ ಹತ್ತು ಹತ್ತಿಗಿರಣಿಗಳಿವೆ. ವೃತ್ತಿಯನ್ನು ಹಿಡಿಯಲು ಅಪೇಕ್ಷಿಸುವ ವಿದ್ಯಾರ್ಥಿಗಳನ್ನು ಆರಿಸಿ ಪಟ್ಟಿ ಮಾಡಿ ಈ ವಿವಿಧ ಗಿರಣಿಗಳಿಗೆ ಹಂಚೋಣ. ಈ ವಿಷಯದಲ್ಲಿ ಮಿತ್ರ ಮಾಲೀಕರು ಸರಕಾರದೊಂದಿಗೆ ಸಹಕರಿಸುವರೆಂಬ ಭರವಸೆ ನನಗಿದೆ. ಈ ವಿದ್ಯಾರ್ಥಿಗಳು ಆ ಸ್ಥಳಗಳಿಗೆ ಹೋಗುತ್ತಾರೆ. ಕೆಲಸ ಕಲಿಯುತ್ತಾರೆ, ಸ್ವಲ್ಪ ಕೆಲಸವನ್ನು ಮಾಡುತ್ತಾರೆ. ಅದಕ್ಕೆ ಪ್ರತಿಫಲವಾಗಿ ಅವರಿಗೆ ಒಂದಿಷ್ಟು ಹಣವೂ ದೊರಕುತ್ತದೆ. ಅಲ್ಲಿ ಆತ ಬರಿದೆ ಕೆಲಸ ಕಲಿಯುವುದಲ್ಲದೆ ಸಂಪಾದಿಸುತ್ತಾನೆ ಕೂಡ. ಭಾರೀ ಕಟ್ಟಡ, ಯಂತ್ರೋಪಕರಣಗಳು, ಸಿಬ್ಬಂದಿ ವರ್ಗ - ಈ ಅಪಾರ ವೆಚ್ಚಗಳು ಸರ್ಕಾರಕ್ಕೆ ಉಳಿತಾಯವಾಗುತ್ತವೆ. ಈ ರೀತಿಯಲ್ಲಿ ನಾವು ದೈಹಿಕವಾದ ದುಡಿಮೆಯನ್ನು, ವೃತ್ತಿ ತರಬೇತಿಯನ್ನು ಒದಗಿಸಬೇಕು. ಈಗ ನಾನು ಒಂದು ನಿದರ್ಶನವನ್ನು ಮಾತ್ರ ಕೊಟ್ಟೆ. ಮೈಸೂರು ರಾಜ್ಯದಲ್ಲಿ ಕೈಗಾರಿಕೋದ್ಯಮಗಳಿಲ್ಲದೆ ಇಲ್ಲ; ಮೈಸೂರು ರಾಜ್ಯದಲ್ಲಿ ಕೃಷಿ ಭೂಮಿ ಇಲ್ಲದೆ ಇಲ್ಲ; ರಾಜ್ಯದಲ್ಲಿ ನಡೆಯುತ್ತಿರುವ ಬೇರೆ ಬೇರೆ ಹಲವಾರು ವೃತ್ತಿಗಳಿವೆ. ಅವುಗಳನ್ನು ತುಂಡುತುಂಡಾಗಿ ಶಾಲಾ ಆವರಣಕ್ಕೆ ತರುವುದರ ಬದಲಾಗಿ, ನಾವು ವಿದ್ಯಾರ್ಥಿಗಳನ್ನೇ ಕಲಿಕೆ -ಗಳಿಕೆಯ ಆ ಸ್ಥಳಗಳಿಗೆ ಕಳುಹಿಸೋಣ. ಅವರು ಮಾಡುವುದು ಅರೆಬರೆ ಕೆಲಸವಲ್ಲ. ಈ ವಿದ್ಯಾರ್ಥಿಗಳನ್ನು ಎಲ್ಲಿಗೆ ಕಳಿಸಲಾಗುವುದೋ ಅಲ್ಲಿ ಅವರು ನಿಜವಾದ ಕೆಲಸ ಮಾಡಬೇಕು. ಈ ಕಾರ್ಯಸಾಧ್ಯ ವಿಧಾನವನ್ನು ನಾವು ಅನುಸರಿಸಿದ ಪಕ್ಷದಲ್ಲಿ ಸರ್ಕಾರದ ಮೇಲೆ ಹೆಚ್ಚಿನ ಹೊರೆ ಬೀಳುವುದಿಲ್ಲ. ಈ ಉದ್ದೇಶಕ್ಕಾಗಿ ಯವುದೇ ಹೆಚ್ಚು ತೆರಿಗೆಯನ್ನು ವಿಧಿಸಬೇಕಾಗಿಲ್ಲ. ಆದ್ದರಿಂದಲೇ ನಾನು ಸಮ್ಮೇಳನವೊಂದರಲ್ಲಿ, ಕೆಲಸದ ತರಬೇತಿಗಾಗಿ ದೊಡ್ಡ ದೊಡ್ಡ ಕಟ್ಟಡಗಳು ಬೋಧಕ ಸಿಬ್ಬಂದಿ ಮತ್ತು ಯಂತ್ರೋಪಕರಣಗಳು ಇವನ್ನು ಹೊಂದಿಸಿಕೊಳ್ಳುವುದಾದರೆ ಅದರ ಪರಿಣಾಮವಾಗಿ, ಅದಕ್ಕಾಗಿಯೇ ಒಂದು ತೆರಿಗೆಯನ್ನು ವಿಧಿಸಬೇಕಾಗಬಹುದು ಎಂದು ಹೇಳಿದೆ. ಈ ಕಾರಣಕ್ಕಾಗಿ ಜನತೆಯ ಮೇಲೆ ತೆರಿಗೆಯ ಭಾರ ಹೊರಿಸುವುದಕ್ಕೆ ನನಗಿಷ್ಟವಿಲ್ಲ ಎಂದು ಹೇಳಿದೆ. ಸರಿ, ಕೆಲವು ಸಲ ಜನರೋ ತಪ್ಪಾಗಿ ತಿಳಿದುಕೊಳ್ಳುತ್ತಾರೆ. ನನ್ನ ದುರದೃಷ್ಟ, ಎಲ್ಲರೂ ನನ್ನನ್ನು ಸರಿಯಾಗಿ ತಿಳಿದುಕೊಳ್ಳುವ ಸಂಪೂರ್ಣ ಹಂತವು ನನಗಿನ್ನೂ ಸಿದ್ಧಿಸಿಲ್ಲ. ಆದರೆ ಅದು ಮಾನವ ಸಹಜ ದೌರ್ಬಲ್ಯ. ಭಗವಂತನು ಮುಂದೆ ನನ್ನನ್ನು ಉತ್ತಮ ವ್ಯಕ್ತಿಯನ್ನಾಗಿ ಮಾಡಬಹುದು ಎಂದಷ್ಟು ಮಾತ್ರ ಹೇಳಬಲ್ಲೆ.

ಆದ್ದರಿಂದ, ದೈಹಿಕ ಪರಿಶ್ರಮವನ್ನು ಕುರಿತಂತೆ, ಕೃಷಿಯನ್ನು ಕಲಿಯ ಬಯಸುವವರನ್ನು ವಾಸ್ತವವಾಗಿ ಹೊಲಗದ್ದೆಗಳಿಗೆ ಕಳುಹಿಸುತ್ತೇವೆ. ಅದು ಕಾಫಿ ತೋಟವಾಗಬಹುದು, ಟೀ ಪ್ಲಾಂಟೇಷನ್ ಆಗಬಹುದು, ಅಡಿಕೆ ತೋಟವೋ, ಬತ್ತದ ಗದ್ದೆಯಾಗಬಹುದು ಅಥವಾ ರಾಗಿ ಹೊಲವಾಗಬಹುದು. ವಾಸ್ತವವಾಗಿ ಕೆಲಸ ನಡೆಯುವ ಸ್ಥಳಕ್ಕೆ ಕಳುಹಿಸುತ್ತೇವೆ. ಅದರಿಂದಾಗಿ, ವಾಸ್ತವಿಕ ಕಾರ್ಯಾನುಭವ ಪಡೆಯುವುದು ಮಾತ್ರವಲ್ಲದೆ, ಸಂಸ್ಥೆಗೂ ಸ್ವಲ್ಪ ವರಮಾನ ತರುತ್ತಾರೆ. ಈ ವರಮಾನದಿಂದ ಶಿಕ್ಷಕನಿಗೆ ಉತ್ತಮವಾದ ವೇತನವನ್ನು ಕೊಡಬಹುದೆಂದು ನನ್ನ ಭಾವನೆ. ನಮ್ಮಲ್ಲಿ ಪ್ರತಿಯೊಬ್ಬರೂ ಉಪಾಧ್ಯಾಯರಿಗೆ ಉತ್ತಮ ವೇತನ ಕೊಡಬೇಕೆಂಬ ವಿಚಾರವನ್ನು ಒಪ್ಪುತ್ತಾರೆ ಆದರೆ ತೆರಿಗೆ ವಿಧಿಸುವ ಪ್ರಶ್ನೆ ಬಂದಾಗ ಪ್ರತಿಯೊಬ್ಬರೂ . ತಲೆಯಾಡಿಸಿ 'ಇಲ್ಲ' ಎನ್ನುತ್ತಾರೆ. ಪ್ರತಿಯೊಂದು ಶಾಸನ ಸಭೆಯಲ್ಲೂ, ಪ್ರತಿಯೊಂದು ಸರ್ಕಾರದಲ್ಲೂ ನಡೆಯುತ್ತಿರುವುದು ಇದೇ. ಆದ್ದರಿಂದ, ತೆರಿಗೆಯನ್ನು ಸಂಗ್ರಹಿಸಿ ಶಿಕ್ಷಕರಿಗೆ ಉತ್ತಮತರ ವೇತನ ನೀಡುವುದು ಅಸಾಧ್ಯ. ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ಸಂಪಾದನೆಯನ್ನು ಒಟ್ಟುಗೂಡಿಸಿ, ಅದರ ಒಂದು ಭಾಗವನ್ನು ಅಥವಾ ಅಗತ್ಯವೆನಿಸಿದರೆ ಪೂರ್ತಿಯನ್ನು ಶಿಕ್ಷಕರ ಭವಿಷ್ಯವನ್ನು ಉತ್ತಮತರನ್ನಾಗಿಸುವುದಕ್ಕಾಗಿ ವಿನಿಯೋಗಿಸುತ್ತೇವೆ. ಉಪಾಧ್ಯಾಯನ ಬಡತನದ ಸಮಸ್ಯೆಯನ್ನು ನಿವಾರಿಸಿ, ಅದೇ ಸಮಯಕ್ಕೆ ವಿದ್ಯಾರ್ಥಿಗೆ ಸೂಕ್ತ ತರಬೇತಿಯನ್ನು ನೀಡುವ ಕಾರ್ಯ ಸಾಧ್ಯ ಮಾರ್ಗ ಇದೊಂದೇ. ಈ ಕೆಲಸ ಮಾತುಗಳೊಂದಿಗೆ, ಸ್ವಾಮಿ, ನಾವು ಈಗಾಗಲೆ ಈ ನಿಟ್ಟಿನಲ್ಲಿ ಕಾರ್ಯಾರಂಭಮಾಡಿದ್ದೇವೆ ಎಂದು ನಾನು ಹೇಳಿದರೆ, ಸದನವು ಕ್ಷಮಿಸುತ್ತದೆ ಎಂದು ಆಶಿಸುತ್ತೇನೆ. ಯಾರೋ ಹೇಳಿದರು ''ಶಿಕ್ಷಣ ಸುಧಾರಣೆಗಳು ಕಾರ್ಯಗತಗೊಳ್ಳುವುದು ಯಾವಾಗ? ಈ ವರ್ಷವೆ, ಅಥವಾ ಮುಂದಿನ ವರ್ಷವೆ, ಅಥವಾ ಹತ್ತು ವರ್ಷಗಳ ನಂತರವೋ? '' ಎಂದು. ಅದು ಸರಿಯಾದ ಮಾರ್ಗವಲ್ಲ. ಈ ಬೃಹತ್ತಾದ ಗಂಭೀರವಾದ ಸಮಸ್ಯೆಯನ್ನು ನೋಡಬೇಕಾದ ರೀತಿ ಇದಲ್ಲ. ವಾಸ್ತವವಾಗಿ ನಾವು ಈಗಾಗಲೇ ಪ್ರಾರಂಭ ಮಾಡಿಯಾಗಿದೆ. ಅವತ್ತೊಂದು ದಿನ ಪ್ರಾರಂಭ ಮಾಡಿದೆವು. ನಮ್ಮಲ್ಲಿ ಕೆಲವರು ಆ ಸಮಾರಂಭದಲ್ಲಿ ಭಾಗವಹಿಸಿದ್ದಿರಿ. ಹೆಸರಘಟ್ಟದಲ್ಲಿ 50 ಎಕರೆ ಹಣ್ಣಿನ ತೋಟವಿದೆ. ತೋಟದಲ್ಲಿ ಕೆಲಸ ಮಾಡಲು ದಿನಗೂಲಿಗಳನ್ನು ಅಲ್ಲಿಗೆ ನೇಮಿಸಿಕೊಳ್ಳುತ್ತಿದ್ದರು. ಈಗ ಅದರ ಸುತ್ತುಮುತ್ತಲಿನ ಶಾಲೆಗಳು ಇದನ್ನು ಹೇಗೆ ವ್ಯವಸ್ಥೆ ಮಾಡಿವೆಯೆಂದರೆ,

ದೈಹಿಕವಾಗಿ ದುಡಿಯಲು ಸಾಮರ್ಥ್ಯವಿರುವ ವಿದ್ಯಾರ್ಥಿಗಳು ಈಗಾಗಲೇ ಅಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರು ಅಲ್ಲಿಗೆ ಹೋಗುತ್ತಾರೆ. ಕೆಲಸ ಮಾಡುತ್ತಾರೆ. ಹಣ್ಣುಗಳನ್ನು ತರಕಾರಿಗಳನ್ನು ಬೆಳೆಯುವುದು ಹೇಗೆ ಎಂದು ಕಲಿಯುತ್ತಾರೆ; ಅದರ ವಿಜ್ಞಾನವನ್ನು ಅದರ ಪ್ರಯೋಗವನ್ನು ಕಲಿಯುತ್ತಾರೆ; ಅದೇ ಸಮಯಕ್ಕೆ ಹಣ್ಣಿನ ತೋಟದಿಂದ ಬರುವ ವರಮಾನ ಏನಿದೆಯೋ ಅದನ್ನು ವಿದ್ಯಾರ್ಥಿಗಳಿಗೂ ಉಪಾಧ್ಯಾಯರಿಗೂ ಹಂಚುತ್ತೇವೆ. ನಮಗೆ ಅದರಿಂದ ಯಾವ ಲಾಭವೂ ಬೇಕಾಗಿಲ್ಲ. ಈಗಿರುವಂತೆ ತೋಟ 50 ಎಕರೆ ಜಮೀನು ಹೊಂದಿದ್ದರೂ ತಿಂಗಳಿಗೆ 12,000 ರೂಪಾಯಿ ನಷ್ಟವಾಗುತ್ತಿದೆ. ಹೀಗೆಯೇ ನಷ್ಟದಲ್ಲಿ ಅಥವಾ ಕೊರತೆಯಲ್ಲಿ ನಡೆಯುತ್ತಿರುವ ಹಲವು ಕೃಷಿ ತಾಕುಗಳಿವೆ, ಹಣ್ಣಿನ ತೋಟಗಳಿವೆ. ವಿದ್ಯಾರ್ಥಿಗಳು ಅಲ್ಲಿ ಹೋಗಿ, ದುಡಿದು ಅವರು ಕೊನೆಯ ಪಕ್ಷ ಸ್ವಾವಲಂಬಿಗಳಾಗುವಂತೆ ಮಾಡುವ ಅವಕಾಶಗಳಿವೆ. ಅವರು ಅಲ್ಲಿ ಕಲಿಯುವುದಲ್ಲದೆ ಗಳಿಸುತ್ತಾರೆ. ಮೈಸೂರು ಸರಕಾರದಲ್ಲಿ ಹಲವು ಇಲಾಖೆಗಳಿವೆ. ಅವುಗಳಲ್ಲಿ ತುಂಬಾ ದೊಡ್ಡದು ಲೋಕೋಪಯೋಗಿ ಇಲಾಖೆ - ಖರ್ಚು ಮಾಡುವ ಇಲಾಖೆ. ಮಾನ್ಯರೆ, ಸಿರಿಗೆರೆಯಲ್ಲಿ ಏನು ಮಾಡಿದರೋ ಅದನ್ನೇ ನಾವು ಮಾಡೋಣ. ವಿದ್ಯಾರ್ಥಿಗಳಿಗೆ ಪ್ರತ್ಯಕ್ಷ ತರಬೇತಿಯನ್ನು ನೀಡಿದ ಅವರ ಹಿರಿಮೆಯನ್ನು ಎಷ್ಟು ಕೊಂಡಾಡಿದರೂ ಸಾಲದು. ಅವರು ಈಗಾಗಲೆ ಸುಮಾರು ಒಂದು ಲಕ್ಷ ರೂಪಾಯಿ ವೆಚ್ಚ ತಗಲುವಂತಹ ಒಂದು ಶಾಲಾ ಕಟ್ಟಡವನ್ನು ಕಟ್ಟಿ ಮುಗಿಸಿದ್ದಾರೆ. ಅದಿನ್ನೂ ತಳಪಾಯದ ಹಂತದಲ್ಲಿದ್ದಾಗ ನಾನು ಅಲ್ಲಿಗೆ ಹೋಗಿದ್ದೆ. ನಮ್ಮ ಹೈಸ್ಕೂಲು ಮತ್ತು ಕಾಲೇಜು ವಿದ್ಯಾರ್ಥಿಗಳು ನಮಗಾಗಿ ಕಟ್ಟಡಗಳನ್ನು ಕಟ್ಟುವಂತೆ ಮಾಡೋಣ. ಈಗ ನಾವು ಆ ಕೆಲಸವನ್ನು ಗುತ್ತಿಗೆದಾರರಿಗೆ ಕೊಡುತ್ತಿದ್ದೇವೆ. ನಮ್ಮ ಇಲಾಖೆಯ ಜನರಿಗೆ ವಹಿಸುತ್ತೇವೆ. ಲಂಚಗಾರಿಕೆ, ಇನ್ನೂ ಎಂತೆಂತದೋ ಬಗೆಯ ಪಿಡುಗುಗಳಿಂದಾಗಿ ನಾವು ನಿಂದೆಯನ್ನು ನುಂಗಬೇಕಾಗಿದೆ. ಪ್ರತಿಯೊಂದು ಸಂಸ್ಥೆಗೂ ನಾವು ಇಂತಿಷ್ಟೆಂದು ಹಣವನ್ನು ಮಂಜೂರು ಮಾಡುಬಹುದು. ಸಾಮಗ್ರಿಗಳನ್ನು ಕೊಳ್ಳುವುದಕ್ಕಾಗಿ ಅದನ್ನು ಉಪಯೋಗಿಸಬಹುದು. ದುಡಿಮೆ ವಿದ್ಯಾರ್ಥಿಗಳಿಂದ ಬರಲಿ. ಈ ಮಾರ್ಗವನ್ನು ಹಿಡಿದ ಪಕ್ಷದಲ್ಲಿ ರಾಜ್ಯಾದ್ಯಂತ ಕಟ್ಟಡಗಳ ನಿರ್ಮಾಣಕ್ಕೆಂದು ಬೇರೆ ತೆರಿಗೆ ವಿಧಿಸಬೇಕಾದ ಅಗತ್ಯ ಬರುವುದಿಲ್ಲ. ಶಾಲೆಗಳನ್ನು ಕಟ್ಟಲು ಮಾಮೂಲು ಮಾರ್ಗವನ್ನು ಹಿಡಿದು ಕಂಟ್ರ್ಯಾಕ್ಟರುಗಳಿಗೆ ವಹಿಸುವುದೇ ಮೊದಲಾದ ಕ್ರಮವನ್ನು ಅನುಸರಿಸಿದರೆ, ಈಗಿನ ಅಗತ್ಯವನ್ನು

ಪೂರೈಸಲು ಎರಡು-ಮೂರು ಕೋಟಿ ರೂಪಾಯಿಗಳು ಬೇಕಾದಾವು. ಆಗ ನಾವು ಅನಿವಾರ್ಯವಾಗಿ ಜನರ ಮೇಲೆ ತೆರಿಗೆಯ ಹೊರೆ ಹಾಕಬೇಕಾದೀತು. ನಾನು ಈಗ ಸೂಚಿಸುತ್ತಿರುವ ಮಾರ್ಗ ಅದಲ್ಲ. ವಾಸ್ತವಿಕ ದೈಹಿಕ ಪರಿಶ್ರಮದ ಭಾಗವಾಗಿ, ನನ್ನ ಕಲ್ಪನೆಯ ಪ್ರಕಾರ ವಿದ್ಯಾರ್ಥಿಗಳು ತಮ್ಮ ಶಾಲೆಯನ್ನು ತಾವೇ ಕಟ್ಟಬೇಕು. ಸಣ್ಣದೊಂದು ಉದಾಹರಣೆಯನ್ನು ತೆಗೆದುಕೊಳ್ಳಿ. ಅಂದು ಡಾ. ಜಾನ್ ಮಥಾಯ್ ಇಲ್ಲಿಗೆ ಬಂದರು. ನಿಮ್ಮಲ್ಲಿ ಕೆಲವರು ಅವರ ಉಪನ್ಯಾಸವನ್ನು ಕೇಳಿದಿರಿ. ಅವರ ಪತ್ನಿ ನನ್ನೊಂದಿಗೆ ಮಾತನಾಡುವಾಗ, ಆಕೆ ಜಪಾನಿನಲ್ಲಿ ಹಲವಾರು ಸಂಸ್ಥೆಗಳಿಗೆ ಭೇಟಿ ನೀಡಿದುದಾಗಿಯೂ, ಎಲ್ಲೂ ಯಾವುದೇ ಸಂಸ್ಥೆಯಲ್ಲೂ ನಿರ್ಮಲೀಕರಣಕ್ಕಾಗಿ ಸೇವಕರನ್ನು ನೇಮಕ ಮಾಡಿಕೊಂಡಿರಲಿಲ್ಲವೆಂದೂ ಹೇಳಿದರು. ಶಾಲಾ ವಿದ್ಯಾರ್ಥಿಗಳು ಸರದಿಯ ಪ್ರಕಾರ ಈ ಕೆಲಸ ಮಾಡುತ್ತಿದ್ದರು. ಅದಕ್ಕಾಗೇ ನೇಮಿಸುವ ಸಿಬ್ಬಂದಿಯ ವೆಚ್ಚವನ್ನು ಉಳಿಸಿದರು. ಇಂದೂ ದೇಶ ಉತ್ತಮವಾಗಿ ವ್ಯವಸ್ಥೆಗೊಂಡು ನರ್ಸರಿ ಶಾಲೆಗಳಿಗೆ ಹೋಗಿ ನೋಡಿದರೆ ಅಲ್ಲಿ, ಆ ಶಾಲೆಯ ಮುಖ್ಯಸ್ಥರು ಮಕ್ಕಳಿಗೆ ತಮ್ಮ ತರಗತಿಯನ್ನು ಸರದಿಯ ಪ್ರಕಾರ ಸ್ವಚ್ಛಪಡಿಸುವುದು ಹೇಗೆ ಎಂಬುದನ್ನು ಕಲಿಸುವುದನ್ನು ನೋಡುತ್ತೇವೆ. ಅವರು ಆ ಕೆಲಸವನ್ನು ಸಂತೋಷವಾಗಿ ಮಾಡುತ್ತಾರೆ. ಇಲ್ಲಿ ಶಾಲೆಗಳಲ್ಲಿರುವ ಮಾನವಶಕ್ತಿಯನ್ನು ಸರಿಯಾಗಿ ಉಪಯೋಗಿಸಬೇಕು. ದೈಹಿಕ ಪರಿಶ್ರಿಮದತ್ತ. ಅವರಲ್ಲಿ ಒಲವು ಮೂಡಿಸುತ್ತಲೇ ಆ ಲೆಕ್ಕದಲ್ಲಿ ವೆಚ್ಚವನ್ನು ಕನಿಷ್ಟಮಟ್ಟಕ್ಕಿಳಿಸುವ ಹಾಗೆ ಉಪಯೋಗಿಸಬೇಕು. ಈ ಬಗೆಯ ವಾಸ್ತವಿಕ ವಿಧಾನಗಳಿಂದ ನಾವು ದೈಹಿಕ ಪರಿಶ್ರಮವನ್ನು ಪೂರೈಸಿಕೊಳ್ಳುತ್ತಲೇ ಸರ್ಕಾರದಿಂದ ಆ ಬಗ್ಗೆ ವೆಚ್ಚ ಮಾಡದಿರುವುದೂ ಸಾಧ್ಯವಾಗುತ್ತದೆ. ನಾನು ಇಲ್ಲಿ ಕೊಟ್ಟಿರುವುದು ನಿದರ್ಶನ ರೂಪವಾಗಿಯೇ ಹೊರತು ಸಮಗ್ರವಾಗಿಯಲ್ಲ.

ಈ ವಿಧಾನಗಳಿಂದ ನಾವು ದುಡಿಮೆಯನ್ನು ವೃತ್ತಿಪರ ತರಬೇತಿಯನ್ನು ಸರ್ಕಾರಕ್ಕೆ ಯಾವುದೇ ವೆಚ್ಚವಿಲ್ಲದೆ, ಅದೇ ಸಮಯಕ್ಕೆ ವಿದ್ಯಾರ್ಥಿಗಳಿಗೆ ಹೆಚ್ಚು ಪರಿಣಾಮಕಾರಿಯಾಗಿ ಹೆಚ್ಚು ಉಪಯೋಗಕರವಾಗಿ ಒದಗಿಸಬಹುದು ಎಂಬುದರಲ್ಲಿ ನನಗೆ ಯಾವು ಸಂದೇಹವೂ ಇಲ್ಲ. ಸ್ವಾಮಿ, ಕೆಲವು ಸಲ ಜನರು ನನ್ನ ಮಾತುಗಳನ್ನು ಕೇಳಿ ಗೇಲಿ ಮಾಡುತ್ತಾರೆ. ಮತ್ತೆ ಅದೂ ನನ್ನ ದುರದೃಷ್ಟ ಎಂದಾದರೂ ನಾನು ಅದರಿಂದ ಪಾರಾಗುವೆನೆಂದು ಆಶಿಸುತ್ತೇನೆ. ''ಏನು,

ಹುಲ್ಲು ಚಾವಣಿ ಹಾಕಿದ ಜೋಪಡಿಗಳನ್ನು ಕಟ್ಟಿ ಅಲ್ಲಿ ವಿದ್ಯಾರ್ಥಿಗಳಿಗೆ ಕಲಿಸುತ್ತೀರೋ? ಅದು ಸಾಧ್ಯವಾಗುತ್ತದೆಯೇ'' ಎಂದು ಕೇಳುತ್ತಾರೆ. ಇಂತಹ ಪ್ರಶ್ನೆಗಳನ್ನು ಕೇಳುತ್ತಾರೆ. ಸ್ವಾಮಿ, ಈಗ ಕೆಲ ವರ್ಷಗಳ ಹಿಂದೆ ನಾನು ಮದನಪಲ್ಲಿಗೆ ಹೋಗಿದ್ದೆ. ಅಲ್ಲಿರ ಭಾರತಾದ್ಯಂತವೂ ಹೊರಜಗತ್ತಿನಲ್ಲೂ ಪ್ರಸಿದ್ಧಳಾದ ಶ್ರೇಷ್ಠವ್ಯಕ್ತಿ ಡಾ. ಆನಿ ಬೆಸೆಂಟ್ ಅವರು ಗುಡಿಸಲುಗಳಲ್ಲಿ ಪ್ರಥಮ ಶ್ರೇಣಿಯ ಉತ್ಕೃಷ್ಟ ಕಾಲೇಜುಗಳನ್ನು ನಡೆಸುತ್ತಿದ್ದರು. ನಿಮ್ಮಲ್ಲಿ ಡಾ. ಆನಿ ಬೆಸೆಂಟ್ ಅವರ ಕಾರ್ಯವನ್ನು ಬಲ್ಲ ಅನೇಕರಿಗೆ ನೆನಪಾಗಬಹುದು. ಆ ಗುಡಿಸಲುಗಳಲ್ಲಿ ಆ ಆಲದಮರದ ಕೆಳಗೂ ಕಾಲೇಜುಗಳಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳು ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿ ತಯಾರಾದ ಅತ್ಯುತ್ತಮ ವಿದ್ಯಾರ್ಥಿಗಳಾಗಿದ್ದರು. ಆದ್ದರಿಂದ ಮಾನ್ಯರೆ, ನಾವು ಕಟ್ಟಡವನ್ನು ಕುರಿತು ಜಗಳವಾಡುವುದು ಬೇಡ. ಒಂದು ದೊಡ್ಡ ಕಟ್ಟಡ ಅಥವಾ ಸುಂದರವಾದ ಅರಮನೆ ಅದರಲ್ಲಿ ವಾಸವಾಗಿರುವವರು ಅಷ್ಟೇ ದೊಡ್ಡವರಾಗಿದ್ದಾರೆ ಎಂಬುದಕ್ಕೆ ಹೇಗೆ ಸಮರ್ಥನೆಯಲ್ಲವೋ ಹಾಗೆಯೇ ಶಾಲಾ ಕಟ್ಟಡವು ದೊಡ್ಡದೋ, ಗಾರೆಯದೋ ಕಲ್ಲಿನದೋ ಅಥವಾ ಹತ್ತು ಅಂತಸ್ತುಗಳದೊ ಎನ್ನುವುದು ಅದೇ ಮಟ್ಟದ ಶಿಕ್ಷಣ ವ್ಯವಸ್ಥೆ ಎನ್ನುವುದಕ್ಕೆ ಖಂಡಿತವಾಗಿಯೂ ಸಮರ್ಥನೆಯಲ್ಲ. ಶಿಕ್ಷಣ ಮುಖ್ಯವೇ ಹೊರತು ಅದನ್ನು ಕೊಡುವ ಕಟ್ಟಡವಲ್ಲ. ಮೊದಲು ಕಟ್ಟಡವನ್ನು ನಿರ್ಮಿಸಿ ಆಮೇಲೆ ತರಗತಿಗಳನ್ನು ತೆರೆಯಬೇಕೆಂದಾದರೆ ಅದು ಎಂದೆಂದಿಗೂ ಸಾಧ್ಯವೇ ಇಲ್ಲವಾಗುತ್ತದೆ. ಅದೊಂದು ವಿಷವರ್ತುಲ. ಏಕೆಂದರೆ, ನಮಗೆ ಪ್ರಾರಂಭದಲ್ಲೇ ಎರಡೋ ಮೂರೋ ಕೋಟಿ ರೂಪಾಯಿಗಳ ಅಗತ್ಯ ಬೀಳುತ್ತದೆ. ಅಷ್ಟು ಹಣವನ್ನು ನಾವು ಎಲ್ಲಿಂದ ತರೋಣ? ಆದದ್ದರಿಂದ ಮಾನ್ಯರೆ, ಇಟ್ಟಿಗೆ ಅಥವಾ ಗಾರೆಯ ಕಟ್ಟಡ ಇಲ್ಲವೆಂಬ ಕಾರಣದಿಂದ ಶಿಕ್ಷಣದ ಈ ಪ್ರಗತಿಯನ್ನು, ಶಿಕ್ಷಣದ ಈ ಪ್ರಸಾರವನ್ನು ನಿಲ್ಲಿಸದಿರೋಣ. ಗ್ರಾಮಸ್ಥರು ತಾವೇ ಮುಂದೆ ಬಂದು ಮನೆಗಳನ್ನು ಕಟ್ಟಿ ಶಾಲೆಗಳನ್ನು ನಡೆಸಲು ಕೊಡಲಿ. ಸನ್ಮಾನ್ಯರೆ, ಮತ್ತೊಮ್ಮೆ ಸ್ಪಷ್ಟಪಡಿಸುತ್ತೇನೆ. ದೇಹ ಶ್ರಮವನ್ನು ಕುರಿತು ನಾನು ಹೇಳುವಾಗ ನಮ್ಮ ವಿದ್ಯಾರ್ಥಿಗಳನ್ನಾಗಲಿ ಎಳೆಯ ಮಕ್ಕಳನ್ನಾಗಲಿ ದುಡಿಮೆಯ ಗುಲಾಮರನ್ನಾಗಿ ಮಾಡಲು ಯೋಜಿಸುತ್ತಿಲ್ಲ. ಅದು ಎಂದಿಗೂ ಇಲ್ಲ. ಅವರು ದೇಹ ಶ್ರಮ ಬಳಸಿ ದುಡಿದು ಏನಾದರೂ ಒಳ್ಳೆಯ *ಗಟ್ಟಿಯಾದ ಕೆಲಸ ಮಾಡಲು ಶಕ್ತರಾಗುವ* ವಯಸ್ಸಿನಿಂದ ನಾವು ಅವರ ದುಡಿಮೆಯನ್ನು ತೆಗೆದುಕೊಳ್ಳೋಣ. ಹತ್ತು ಅಥವಾ 12 ವರ್ಷದ ನಂತರದ ವಯೋಮಾನದ ಹುಡುಗರಾಗಬಹುದು.

ಅದಕ್ಕಿಂತ ಕೆಳಗಿನ ವಯಸ್ಸಿನಲ್ಲಿ ಅವರಿಗೆ ಯಾವುದೇ ಉತ್ತಮವಾದ ಪರಿಣಾಮಕಾರಿಯಾದ ದೈಹಿಕ ಪರಿಶ್ರಮ ಸಾಧ್ಯವಿರುವುದಿಲ್ಲ. ಅದರ ವಿಷಯವಾಗಿ ಈಗ ತಲೆ ಕೆಡಿಸಿಕೊಳ್ಳುವುದು ಬೇಡ. 13 ಅಥವಾ 14 ಅಥವಾ 15 ವರ್ಷ ವಯಸ್ಸಾದ ಹುಡುಗಿಯರು ಮತ್ತು ಹುಡುಗರು ಅಲ್ಲಿಂದ ಮುಂದಕ್ಕೆ ಕೆಲಸ ಮಾಡುತ್ತಾರೆ. ಅದಕ್ಕಿಂತ ಕಡಿಮೆ ವಯಸ್ಸಿನವರಿಗೆ ಕೆಲಸ ಮತ್ತು ಆಟ ಸಮರಸವಾಗಿ ಬೆರೆತ ಬೇರೆ ದಾರಿಯನ್ನು ತೋರಿಸಬಹುದು. ಅಂಥದೊಂದು ಶಿಕ್ಷಣ ವಿನ್ಯಾಸವನ್ನು ನಾವು ರೂಪಿಸುತ್ತೇವೆ. ಆದ್ದರಿಂದ, ಶಿಕ್ಷಣ ವ್ಯವಸ್ಥೆಯನ್ನು ವಿಸ್ತರಿಸುವಾಗ, ವಿದ್ಯಾರ್ಥಿ ಸಮುದಾಯಕ್ಕೆ ದೈಹಿಕ ಪರಿಶ್ರಮವನ್ನು ವಾಸ್ತವಿಕ ತರಬೇತಿಯನ್ನು ನೀಡುವಾಗ ನನಗೆ ಹಣದ ವಿಷಯವಾಗಿ ಕಳವಳವಾಗಲಿ, ಭೀತಿಯಾಗಲಿ ಇಲ್ಲ. ನಿದರ್ಶನಕ್ಕೆ ಉಪಾಧ್ಯಾಯರನ್ನೇ ತೆಗೆದುಕೊಳ್ಳಿ. ಈ ವರದಿಯಲ್ಲಿ ಒಂದು ಶಿಫಾರಸ್ಸನ್ನು ನೋಡುವಿರಿ. ಆ ಶಿಫಾರಸ್ಸು ನನ್ನದು ಮಾತ್ರವಲ್ಲ, ಅಥವಾ ಶ್ರೀ ರಾಮಚಂದ್ರರಾವ್ ಅವರದಲ್ಲ ಅಥವಾ ಈ ಸಮಿತಿಯ ಸದಸ್ಯರ ಏಕಸ್ವಾಮ್ಯವೂ ಅಲ್ಲ. ಭಾರತೀಯ ಗಣರಾಜ್ಯದ ಅಧ್ಯಕ್ಷರು ಡಾ. ರಾಜೇಂದ್ರ ಪ್ರಸಾದ್, ಪ್ರಧಾನಮಂತ್ರಿ ಪಂಡಿತ್ ಜವಾಹರಲಾಲ್‌ನೆಹರೂ ಮತ್ತು ಇತರ ಅನೇಕ ರಾಷ್ಟ್ರೀಯ ನಾಯಕರು ಈ ವಿಚಾರವನ್ನೇ ಪ್ರತಿಪಾದಿಸುತ್ತಿದ್ದಾರೆ. ಅವರು ಹೇಳುತ್ತಾರೆ : ''ವಿದ್ಯಾರ್ಥಿಗೆ ಡಿಪ್ಲೊಮಾ ಅಥವಾ ಡಿಗ್ರಿಯನ್ನು ಕೊಡುವುದಕ್ಕೆ ಮುಂಚೆ ಅವನು ಒಂದು ವರ್ಷ ರಾಷ್ಟ್ರಸೇವೆ ಮಾಡಬೇಕು, ಅದು ಉಚಿತವೂ ಕಡ್ಡಾಯವೂ ಆಗಿರಬೇಕು''. ಈಗಲೂ ಮೆಡಿಕಲ್ ಮತ್ತು ಎಂಜಿನಿಯರಿಂಗ್ ಪದವೀಧರರ ವಿಷಯದಲ್ಲಿ, ಒಂದು ವರ್ಷವೋ ಏನೋ ಅವರು ಪ್ರಯೋಗತ: ಕೆಲಸ ಮಾಡಿ ವಾಸ್ತವಿಕ ತರಬೇತಿ ಪಡೆಯತಕ್ಕದ್ದು ಎಂದು ಕೇಳುತ್ತೇವೆ. ಆಗ ಅವರಿಗೆ ವೇತನ ನೀಡುವುದಿಲ್ಲ. ಅಗತ್ಯ ಬಂದರೆ, ಇದಕ್ಕೆ ಒಂದು ಕಾನೂನನ್ನೇ ಮಾಡಬಹುದು. ಪ್ರತಿಯೊಬ್ಬ ಡಿಪ್ಲೊಮಾಧಾರಿ ಅಥವಾ ಪದವೀಧರನು, ಯಾವುದೇ ಕಾಲೇಜಿಗೆ ಸೇರಿರಲಿ, ಎಂಜಿನಿಯರಿಂಗ್ ಆಗಲಿ, ಮೆಡಿಕಲ್ ಆಗಲಿ, ಕಲೆ ಅಥವಾ ವಿಜ್ಞಾನವಾಗಲಿ, ಒಂದು ವರ್ಷದ ಅವಧಿಗೆ ದೇಶಕ್ಕೆ ಉಚಿತವಾದ ಸೇವೆ ಸಲ್ಲಿಸತಕ್ಕದ್ದು ಎಂದು ಶಾಸನವನ್ನೇ ಜಾರಿಗೆ ತರಬಹುದು. ಈ ಪದವೀಧರರನ್ನು ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಬೋಧಿಸಲು ನೇಮಿಸಿಕೊಳ್ಳಬಹುದು.

ನನ್ನ ಮಿತ್ರರು ನನ್ನ ಮಾತನ್ನು ಒಪ್ಪದಿರುವುದಿಲ್ಲ ಅಥವಾ ತಪ್ಪಾಗಿ ತಿಳಿದುಕೊಳ್ಳುವುದಿಲ್ಲ ಎಂದು ಭಾವಿಸುತ್ತೇನೆ. ತರಬೇತಿ ಪಡೆದ ಉಪಾಧ್ಯಾಯರೇ ಬೋಧಿಸಬೇಕು ಎಂದು ನಾವು ಪಟ್ಟು ಹಿಡಿದರೆ, ನಾವು ಈಗ ಆಲೋಚಿಸುತ್ತಿರುವ ಶಿಕ್ಷಣದ ವಿಸ್ತರಣವನ್ನು ಅನಿರ್ದಿಷ್ಟಕಾಲ ಮುಂದಕ್ಕೆ ಹಾಕಬೇಕಾಗುತ್ತದೆ. ಏಕೆಂದರೆ ಮೊದಲು ಉಪಾಧ್ಯಾಯರಿಗೆ ತರಬೇತಿ ನೀಡಬೇಕು, ಆ ರೀತಿ ತರಬೇತಿ ಪಡೆಯುವ ಉಪಾಧ್ಯಾಯರು 4 - 5 ವರ್ಷಗಳ ಅನಂತರ ಬೋಧಿಸಲು ಶಕ್ತರಾಗುತ್ತಾರೆ. ಅಷ್ಟು ಮಟ್ಟಿಗೆ ಶೈಕ್ಷಣಿಕ ಪ್ರಗತಿಯೂ ಪ್ರಸಾರವೂ ಸ್ಥಗಿತವಾಗುತ್ತದೆ. ನಿಜವಾದ ಸತ್ವ ಇಲ್ಲಿ ಮುಖ್ಯ. ಹೊಸದಾಗಿ ಕಾಲೇಜಿನಿಂದ ಹೊರಬರುವ ಪದವೀಧರನಿಗೆ ಉತ್ಸಾಹವಿರುತ್ತದೆ. ಕೆಲಸದ ಮೇಲೆ ಪ್ರೀತಿಯಿರುತ್ತದೆ. ದೇಶ ಪ್ರೇಮವಿರುತ್ತದೆ. ಎಸ್. ಎಸ್. ಎಲ್. ಸಿ. ಉತ್ತೀರ್ಣನಾಗಿ ಬಂದವನಿಗಿಂತಲೂ ಹೆಚ್ಚು ತೃಪ್ತಿಕರವಾಗಿ ಅವನು ಪ್ರಾಥಮಿಕ ಶಾಲೆಯಲ್ಲಿ ಕಲಿಸಬಲ್ಲನು. ಈ ಬಗೆಯ ದೇಶ ಪ್ರೇಮದ ಹಾಗೂ ರಾಷ್ಟ್ರೀಯ ಕೆಲಸವನ್ನು ಈ ಪದವಿ ಮತ್ತು ಡಿಪ್ಲೊಮಾ ಧಾರಿಗಳಿಗೆ ಕೊಟ್ಟು ಪ್ರತಿವರ್ಷವೂ 2000 ದಿಂದ 3000 ಜನರಿಂದ ಉಚಿತವಾಗಿ ಶಿಕ್ಷಣವನ್ನು ಪಡೆಯುತ್ತೇವೆ. ವಿವಿಧ ಕಾಲೇಜುಗಳು ಮತ್ತು ಸಂಸ್ಥೆಗಳಿಂದ ಅರ್ಹತೆ ಗಳಿಸಿ ಹೊರಬರುವವರನ್ನು ಆಧರಿಸಿ ಈ ಸಂಖ್ಯೆ ಇನ್ನೂ ಹೆಚ್ಚಬಹುದು. ಇಲ್ಲೂ ಕೂಡ ಕೆಲಸ ನಡೆಯುತ್ತದೆ. ಆದರೆ ಸರ್ಕಾರಕ್ಕೆ ಅದರಿಂದ ವೆಚ್ಚವಿಲ್ಲ. ಈ ಕಾರಣಕ್ಕಾಗಿ ಪ್ರಜೆಗಳ ಮೇಲೆ ಯಾವ ತೆರಿಗೆಯನ್ನು ವಿಧಿಸಬೇಕಾಗಿಲ್ಲ, ಹೀಗೆ ಕೆಲವು ವಿಧಾನಗಳಿಂದ ನಾವು ರಾಜ್ಯದ ಜನತೆಯಿಂದ ಪ್ರತಿಫಲವನ್ನು ನಗದು ರೂಪದಲ್ಲಲ್ಲ, ಕೆಲಸದ ರೂಪದಲ್ಲಿ ಪಡೆಯುತ್ತೇವೆ. ಇದರಿಂದ ನಾವೆಲ್ಲರೂ ಬಯಸುವ ಶೈಕ್ಷಣಿಕ ಸುಧಾರಣೆಯನ್ನು ಯಶಸ್ವಿಗೊಳಿಸುತ್ತೇವೆ. ಸ್ವಾಮಿ, ಶಿಕ್ಷಣದ ಗುರಿ ಏನೆಂಬುದನ್ನು ಅನೇಕರು, ಅನೇಕ ವಿಧವಾಗಿ ವಿವರಿಸಿದ್ದಾರೆ. ನಾನು ಒಬ್ಬ ಸಾಮಾನ್ಯ ಮನುಷ್ಯನಾಗಿ ಹೀಗೆ ಹೇಳುತ್ತೇನೆ. ತೃಪ್ತದೇಹದಲ್ಲಿ ಪ್ರಬುದ್ಧ ಮನಸ್ಸು ಇರುವಂತೆ ನೋಡಿಕೊಳ್ಳುವುದೇ ಶಿಕ್ಷಣದ ಲಕ್ಷ್ಯ. ನಮ್ಮ ದೈಹಿಕ ಅಗತ್ಯಗಳು ತೃಪ್ತಿಕರವಾಗಿ ಪೂರೈಕೆಯಾಗಬೇಕು. ಅದೇ ಸಮಯದಲ್ಲಿ ಮನಸ್ಸು, ಜ್ಞಾನ ಪರಿಪೂರ್ಣವಾಗಬೇಕು. ಆಗ ನಾವು ದೇಶದ ಮತ್ತು ಸಮಾಜದ ಹಿತಾಸಕ್ತಿಗಳನ್ನು, ಅದರ ನಿಜವಾದ ಅರ್ಥದಲ್ಲಿ ಕಾಪಾಡಬಲ್ಲ ಪೌರರಾಗುತ್ತೇವೆ. ಈ ಉದ್ದೇಶದಿಂದ ನಾವು ಈ ಶೈಕ್ಷಣಿಕ ಸುಧಾರಣೆಗಳಲ್ಲಿ ನೈತಿಕ ಶಿಕ್ಷಣವನ್ನು ರೂಪಿಸಿದ್ದೇವೆ. ನೈತಿಕ ಶಿಕ್ಷಣವೆಂದರೆ

ತರಗತಿಯಲ್ಲಿ ಯಾವುದೇ ಒಂದು ನಿರ್ದಿಷ್ಟ ಧರ್ಮವನ್ನು ಕಲಿಸುವುದು ಎಂದರ್ಥವಲ್ಲ. ಅದರಿಂದ ಬಹುದೂರ. ಎಲ್ಲಾ ಧರ್ಮಗಳಿಂದಲೂ ಉತ್ತಮ ಬೋಧನೆ ಏನಿದೆಯೋ ಅದನ್ನು ತೆಗೆದುಕೊಳ್ಳೋಣ. ಅವುಗಳನ್ನು ಕಿರಿಯರ ಮನಸ್ಸಿನಲ್ಲಿ ನೆಡೋಣ. ಆದರಿಂದ ಅವರು ನಿಜವಾಗಿ ಧರ್ಮ ನಿರಪೇಕ್ಷವಾದ ದೇಶವನ್ನು ಕಟ್ಟಿಯಾರು. ಈ ವ್ಯವಸ್ಥೆಯು ಒಂದು ಹಂತಕ್ಕೆ ಬರುವ ವೇಳೆಗೆ ತಾವು ಯಾವುದೋ ಒಂದು ಜಾತಿಗೆ ಅಥವಾ ಧರ್ಮಕ್ಕೆ ಸೇರಿದವರು ಎಂಬುದನ್ನು ಮರೆಯುವಂತೆ ತರಬೇತಿ ಪಡೆದಿರುತ್ತಾರೆ. ಮಹಾತ್ಮಾ ಗಾಂಧೀಜಿಯವರು ನಮ್ಮೆದುರಿಗಿರುವ ಜಾತಿರಹಿತ, ವರ್ಗರಹಿತ ಸಮಾಜದ ಆದರ್ಶದ ಕಡೆಗೆ ಚಲಿಸಿರುತ್ತೇವೆ. ಆನೇಕ ಅಡ್ಡಿ ಅತಂಕಗಳು ಒದಗಿದರೂ ಸಗ್ಗದೆ ಆ ಆದರ್ಶಕ್ಕೆ ನಾನು ಕಷ್ಟಪಡುತ್ತೇನೆ. ಈ ಶಿಕ್ಷಣ ವ್ಯವಸ್ಥೆಯು ನಮ್ಮನ್ನು ಜಾತಿರಹಿತ ಹಾಗೂ ವರ್ಗರಹಿತ ಸಮಾಜದ ಸಂತೋಷಪ್ರದ ಲಕ್ಷ್ಯದತ್ತ ಒಯ್ಯಬೇಕು. ಅದಕ್ಕಾಗಿ, ನಮ್ಮ ಧರ್ಮಗಳು ಮತ್ತು ಜಾತಿಗಳಲ್ಲಿರುವ ಮೂಢನಂಬಿಕೆಯ ಭಾಗವು ಸೃಷ್ಟಿಸಿರುವ ತಡೆಗಳನ್ನು ಮೊದಲು ಮುರಿಯಬೇಕು. ಅದನ್ನು ಸಾಧಿಸಲು ಇರುವ ಒಂದೇ ಒಂದು ದಾರಿ, ಎಲ್ಲಾ ಧರ್ಮಗಳ ಸಾರವನ್ನು ಸ್ವೀಕರಿಸುವುದು. ನನಗೆ ತಿಳಿದಮಟ್ಟಿಗೆ ಅದು ಸಮಾನವಾಗಿದೆ. ಆ ತತ್ವಗಳನ್ನು ನಮ್ಮ ಎಳೆಯರ ಮನಸ್ಸುಗಳಲ್ಲಿ ಬಿತ್ತಿ ಬೆಳೆಸಬೇಕು. ಈ ಉದ್ದೇಶದಿಂದ ನಾವು ಶಿಕ್ಷಣ ವ್ಯವಸ್ಥೆಯಲ್ಲಿ ನೈತಿಕ ಶಿಕ್ಷಣಕ್ಕೆ ಅವಕಾಶ ಒದಗಿಸಿದ್ದೇವೆ.

ಸ್ವಾಮಿ, ಸದನವು ಒಪ್ಪುವುದಾದರೆ, ಸರಕಾರಕ್ಕೆ ಅದು ಒಪ್ಪಿಗೆಯಾಗಿರುತ್ತದೆಂಬ ಭರವಸೆಯೇನೋ ಇದೆ - ಈ ವರದಿಯಲ್ಲಿನ ಕೆಲವು ಸಲಹೆಗಳನ್ನು ನೇರವಾಗಿ ಜಾರಿಗೊಳಿಸಲು ಬಯಸುತ್ತೇವೆ. ಒಂದು ಕಡೆ ದಿನಗಳನ್ನು ಕೆಲಸದ ಗಂಟೆಗಳನ್ನು ವಿಚಾರಯುತವಾಗಿ ಕ್ರಮಗೊಳಿಸುವುದು. 3½ ಗಂಟೆಗಳ ಕಾಲದ ಬೋಧನೆ ಸಾಕಾಗದಿರಬಹುದು; ಎಂದು ಶ್ರೀ ಗೋಪಾಲಗೌಡರು ಹೇಳಿದರು. ಎಷ್ಟೆಲ್ಲಾ ಹೇಳಿದರೂ, ವಿದ್ಯಾರ್ಥಿಗಳು ಅಲ್ಲಿಗೆ ಹೋಗುವುದು ಪಾಠ ಕಲಿಯುವುದಕ್ಕೆ ಎಂಬುದನ್ನು ನಾನು ಒಪ್ಪುತ್ತೇನೆ. ಅವರು ಅದನ್ನು ತೃಪ್ತಿಕರವಾಗಿ ನಡೆಸಬೇಕು. ಆದ್ದರಿಂದ 3½ ಗಂಟೆ ಸಾಲದಾದರೆ ಇನ್ನೂ ಅರ್ಧಗಂಟೆಯೋ ಒಂದು ಗಂಟೆಯೋ ಹೆಚ್ಚಿಸೋಣ. ಈ ವಿಚಾರವನ್ನು ಪರಿಶೀಲಿಸುವಂತೆ ನಾನು ಇಲಾಖೆಗೆ ಹೇಳುತ್ತೇನೆ.

ಇನ್ನು ರಜೆಗಳಿಗೆ ಸಂಬಂಧಿಸಿದಂತೆ. ಈ ಮೊದಲು ನಮ್ಮನ್ನು ಆಳುತ್ತಿದ್ದವರ ಅಭಿರುಚಿಗಳು ಮತ್ತು ಮನೋಧರ್ಮಗಳಿಗೆ ಹೊಂದುವಂತೆ ಇಲ್ಲಿ ರಜೆಯ ದಿನಗಳನ್ನು ನಿಗದಿಪಡಿಸಲಾಗಿದೆ ಎಂದು ನಮಗೆ ತಿಳಿದಿದೆ. ಬ್ರಿಟಿಷ್ ಜನರು ಶೀತ ದೇಶದಿಂದ ಬಂದವರು. ಅವರಿಗೆ ತುಂಬಾ ಅಹಿತಕರವಾದ ಸಮಯವಾದ ಬೇಸಿಗೆಯಲ್ಲಿ ಅವರಿಗೆ ರಜೆ ಬೇಕಾಗಿತ್ತು. ಅವರು ಕ್ರೈಸ್ತಧರ್ಮಕ್ಕೆ ಸೇರಿದವರಾದ್ದರಿಂದ ಅವರಿಗೆ ಸುಮಾರು ಹದಿನೈದು ದಿನ ಕ್ರಿಸ್‌ಮಸ್ ರಜೆ ಬೇಕಾಗಿತ್ತು. ಈ ಎರಡು ಅಂಶಗಳು ಇಂದು ಇಲ್ಲ. ಇಂದು ನಾವು ಯಾವುದೇ ಧರ್ಮಕ್ಕೆ ಸಂಬಂಧಿಸಿದಂತೆ ರಜೆಯನ್ನು ನಿಗದಿಪಡಿಸುತ್ತಿಲ್ಲ. ಹಿಂದೂಗಳಿಗೆ ಧಾರ್ಮಿಕವಾಗಿ ಮಹತ್ವದ ದಿನವೆಂದೆ ಮುಸ್ಲಿಮರಿಗೆ ಅಥವಾ ಕ್ರಿಶ್ಚಿಯನ್ನರಿಗೆ ಧಾರ್ಮಿಕ ಮಹತ್ವದ ದಿನವೆಂದೇ ರಜೆಯನ್ನು ನಿರ್ಧರಿಸುವುದಿಲ್ಲ. ಈ ರಾಜ್ಯವನ್ನು ನಿಜವಾದ ಅರ್ಥದಲ್ಲಿ ಜಾತ್ಯಾತೀತವನ್ನಾಗಿ ಮಾಡಬೇಕಾದರೆ ಅದೇ ನಮ್ಮೆಲ್ಲರ ಆದರ್ಶವೂ ಆಗಿದೆಯಷ್ಟೆ, ನಾವು ಧರ್ಮವನ್ನು ಅವಲಂಬಿಸಿ ರಜೆ ನಿಗದಿಪಡಿಸಬಾರದು.

ಮಾನ್ಯರೆ, ಈಗ ಎರಡು ತಿಂಗಳ ಹಿಂದೆ ಮಲೆನಾಡು ಪ್ರಾಂತದಲ್ಲಿ ಪ್ರವಾಸ ಹೋಗಿದ್ದೆ. ಆಗ ಮುಂಗಾರು ಮಳೆ ಪ್ರಾರಂಭವಾಗಿತ್ತು. ಅಂದೇ ಶಾಲೆಗಳು ತೆರೆದಿದ್ದರಿಂದ ಮಕ್ಕಳು ಶಾಲೆಗೆ ಹೋಗುತ್ತಿದ್ದರು. ಈ ದೃಶ್ಯವನ್ನು ನಾನೇ ಕಣ್ಣಾರೆ ನೋಡಿದೆ. ಜನರು ನನಗೆ ಹೇಳಿದರು. ಮಲೆನಾಡಿನಲ್ಲಿ ಶಾಲೆಗಳು ಮನೆಯಿಂದ ಒಂದೋ ಎರಡೋ ಮೈಲು ದೂರದಲ್ಲಿರುತ್ತವೆ. ಮಳೆಯಲ್ಲಿ ನೆನೆದುಕೊಂಡು ಆ ಮಕ್ಕಳು ನಡೆದು ಹೋಗಬೇಕು. ಕೆಲವು ಸಲ ಪ್ರವಾಸದಿಂದ ತುಂಬಿ ಹರಿಯುವ ತೊರೆಗಳನ್ನು ದಾಟಬೇಕು. ಅದೇ ಮಲೆನಾಡಿನಲ್ಲಿ ಬಿತ್ತನೆ ಸಮಯವೂ ಕೂಡ. ಮಕ್ಕಳೆಲ್ಲ ಮನೆಯಿಂದ ದೂರ ಶಾಲೆಗೆ ಹೋಗಿರುತ್ತಾರೆ. ಶ್ರೀ ಹುಚ್ಚಮಾಸ್ತಿಗೌಡರು ಸೂಚಿಸಿದಂತೆ ನಾವು ವಾಸ್ತವವಾಗಿ ಮುಖ್ಯವಾದ ಕೆಲಸವೇನೂ ಇಲ್ಲದ ಸಮಯದಲ್ಲಿ ರಜೆ ಕೊಟ್ಟರೆ ಸಮಸ್ಯೆಗಳು ಪರಿಹಾರವಾಗುತ್ತವೆ. ರಾಜ್ಯದಾದ್ಯಂತ ಬಿತ್ತನೆ ಸಮಯದಲ್ಲಿ ಶಾಲೆಗಳಿಗೆ ರಜೆ ನೀಡಿದರೆ ನಮ್ಮ ಮಕ್ಕಳು ತಮ್ಮ ಕುಟುಂಬಕ್ಕೆ ಅವಶ್ಯವಾದ ಸೇವೆ ಸಲ್ಲಿಸುವುದಕ್ಕೆ ಅವಕಾಶವಾಗುತ್ತದೆ. ಹಾಗೆಯೇ ವೃತ್ತಿಯಲ್ಲಿ ತರಬೇತಿ ಪಡೆಯಲು ಸಾಧ್ಯವಾಗುತ್ತದೆ. ಸಾಂದರ್ಭಿಕವಾಗಿ ಇದರಿಂದ ಕೃಷಿ ರಂಗದಲ್ಲಿ ಉತ್ಪಾದನೆ ಅಧಿಕವಾಗುತ್ತದೆ. ಯಾವಾಗ ತಂದೆತಾಯಿಗಳಿಗೆ ಮಕ್ಕಳ ಸೇವೆ ಅಗತ್ಯವಾಗಿದೆಯೋ ಆಗ ನಾವು ಶಾಲೆಗಳಿಗೆ ಬಿಡುವು ಕೊಡೋಣ. ಅದು ಮಿತವಾಗೂ ಇರಲಿ, ಎರಡು ತಿಂಗಳೋ, ಒಂದು ತಿಂಗಳೋ ಅಷ್ಟನ್ನು ಮೀರದ

ಹಾಗೆ. ಏಕೆಂದರೆ ಶಾಲಾ ಕಾಲೇಜುಗಳಲ್ಲಿ ಬೆಳಗಿನ ಸಮಯ ತರಗತಿಗಳನ್ನು ನಿಗದಿಪಡಿಸಿದ್ದೇ ಆದರೆ ಮಧ್ಯಾಹ್ನಗಳು ವಾಸ್ತವವಾಗಿ ರಜೆ ತಾನೆ? ಆದ್ದರಿಂದ ನಮ್ಮ ಆರ್ಥಿಕ ಜೀವನಕ್ಕೆ ಸಹಾಯವಾಗುವ ರೀತಿಯಲ್ಲಿ ನಾವು ರಜೆಗಳನ್ನು ಹೊಂದಿಸಿಕೊಳ್ಳಬೇಕು. ಅನಾದಿಕಾಲದಿಂದ ಅನುಸರಿಸುತ್ತಿರುವ ವೃತ್ತಿಗೆ ಅದು ಸಮರಸವಾಗಿ ಹೊಂದಿಕೊಳ್ಳಬೇಕು. ಈ ಕೆಲವು ಸಲಹೆಗಳಿಗೆ ಯಾವ ವೆಚ್ಚವೂ ತಗಲುವುದಿಲ್ಲ. ಆದರೆ ಅದೇ ಸಮಯಕ್ಕೆ ಅವು ಉಪಯುಕ್ತವಾಗಿವೆ. ಇವುಗಳಿಗೆ ಪ್ರತ್ಯೇಕ ಶಾಸನದ ಅಗತ್ಯವಿಲ್ಲವಾದ್ದರಿಂದ ಒಡನೆಯೇ ಸರ್ಕಾರೀ ಆದೇಶವನ್ನು ಹೊರಡಿಸಿ ಜಾರಿಗೆ ತರಬಹುದು.

ಮಾನ್ಯರೆ, ಶಿಕ್ಷಣ ಸಮಸ್ಯೆಯ ಎಲ್ಲಾ ಮುಖಗಳನ್ನು ಕುರಿತು ಪರಿಶೀಲಿಸುವುದು ನನಗೆ ಸಾಧ್ಯವಿಲ್ಲ. ಅಥವಾ ಸದನವೂ ನನ್ನಿಂದ ಅದನ್ನು ನಿರೀಕ್ಷಿಸಲಾರದು. ನಾನು ಇದುವರೆಗೆ ಮಾತನಾಡಿರುವುದು ನಿದರ್ಶಕವಾಗಿದೆಯೇ ಹೊರತು ವಿವರವಾಗಿಲ್ಲ. ಇಲ್ಲಿ ನಾನೊಂದು ವೈಯಕ್ತಿಕ ಮನವಿ ಮಾಡಿಕೊಳ್ಳಬಯಸುತ್ತೇನೆ. ಅದನ್ನು ಮಾನ್ಯ ಸದಸ್ಯರು ತಪ್ಪಾಗಿ ಭಾವಿಸಲಾರರೆಂದು ನಂಬುತ್ತೇನೆ.

ನಮಗೆ ಸಲಹೆ ನೀಡಲು ಬಂದಿದ್ದ ಡಾ. ರಾಧಾಕೃಷ್ಣನ್ ಅವರು ತಮ್ಮ ಉಪನ್ಯಾಸದಲ್ಲಿ ಹೀಗೆ ಹೇಳಿದರು :

''ನಿಮ್ಮ ಮುಖ್ಯಮಂತ್ರಿಗಳಿಗೆ ಕಳಕಳಿಯಿದೆ, ಉತ್ಸಾಹವಿದೆ. ಆ ಗುಣಗಳನ್ನು ಮೈಸೂರಿನ ಸರ್ಕಾರಕ್ಕೂ ಜನತೆಗೂ ಸಂವಹಿಸಲು ಶಕ್ಯವಾಗುತ್ತದಾದರೆ, ಈ ರಾಜ್ಯದ ಶಿಕ್ಷಣದ ವಿಷಯದಲ್ಲಿ ನಾನು ಕಳವಳಪಡಬೇಕಾಗಿಲ್ಲ''.

ಈ ಹೊಗಳಿಕೆಯ ಮಾತುಗಳನ್ನು ಅವರು ಆಡಿದರೂ, ನೀವು ನನ್ನ ಒಡೆಯರಾದ್ದರಿಂದ ನಿಮ್ಮ ಮುಂದೆ ಒಪ್ಪಿಕೊಳ್ಳುತ್ತೇನೆ. ಈ ಸದನಕ್ಕೆ ಉತ್ಸಾಹವನ್ನು ತುಂಬಲು ನಾನು ಸಮರ್ಥನಲ್ಲ; ನಾನು ಉಪಚಾರಕ್ಕೆ ಹೇಳುತ್ತಿಲ್ಲ ಇದು ತುಟಿಯ ಮೇಲಿನ ಮಾತಲ್ಲ. ನನ್ನ ಕೊರತೆಗಳೇನೆಂಬುದು ನನಗೆ ಗೊತ್ತಿದೆ. ಕೆಲವು ವಲಯಗಳಲ್ಲಿ ಎಷ್ಟು ಮಟ್ಟಿಗೆ ನನಗೆ ಜನಪ್ರಿಯತೆಯಿಲ್ಲ ಎಂದು ತಿಳಿದಿದ್ದೇನೆ. ಆದ್ದರಿಂದ ನನ್ನಿಂದ ನಿರೀಕ್ಷಿಸಿರುವ ಈ ಗುಣಗಳನ್ನು ಈ ಗೌರವಾನ್ವಿತ ಸದನವು ವ್ಯಕ್ತಪಡಿಸುತ್ತದೆ ಎಂದು ಆಶಿಸಿದ್ದೇನೆ.

**ಅಧ್ಯಕ್ಷರು** : ದಯವಿಟ್ಟು ಜನ ವಿರೋಧಿಯಾಗಿ ಮುಂದುವರಿಯಲು ಬಿಡಬೇಡಿ.

ಶ್ರೀ ಕೆ. ಹನುಮಂತಯ್ಯ : ಅದು ವಿಧಿಗೆ ಬಿಟ್ಟಿದ್ದು. ಡಾ. ರಾಧಕೃಷ್ಣನ್ ಅವರ ವಾಕ್ಯವನ್ನು ಸ್ವಲ್ಪ ಬದಲಿಸಿ ಹೇಳುತ್ತೇನೆ. ಈ ಶಿಕ್ಷಣ ವ್ಯವಸ್ಥೆಯ ವಿಷಯದಲ್ಲಿ ಕಾಳಜಿಯನ್ನು ಉತ್ಸಾಹವನ್ನು ಈ ಸದನವು ಜನತೆಯಲ್ಲಿ ತುಂಬಿದರೆ ಅದು ಖಂಡಿತವಾಗಿಯೂ ಯಶಸ್ವಿಯಾಗುತ್ತದೆ. ಇಲ್ಲವಾದರೆ ಇಲ್ಲ. ವೈಯಕ್ತಿಕವಾದ ದ್ವೇಷವನ್ನು ಪಕ್ಷ ಸಂಘರ್ಷವನ್ನು ಮರೆಯೋಣ. ಕೊನೆಯ ಪಕ್ಷ ಶೈಕ್ಷಣಿಕ ಸುಧಾರಣೆಯ ಈ ರಾಷ್ಟ್ರ ಪ್ರೇಮದ ಕ್ಷೇತ್ರದಲ್ಲಿ ವ್ಯಕ್ತಿಗತ ಭಾವನೆಗಳನ್ನು ಬಿಟ್ಟು, ಯಾವುದೇ ಪಕ್ಷಕ್ಕೆ ಸೇರಿದ್ದರೂ ಒಟ್ಟುಗೂಡಿ ನಮ್ಮ ಕಿರಿಯ ಪೀಳಿಗೆಗೆ ಹೊಸ ತಿರುವನ್ನು ಹೊಸ ದರ್ಶನವನ್ನು ನೀಡೋಣ. ಅವರು ತಾನೇ ಮುಂದಿನ ಪ್ರಜೆಗಳು ಮತ್ತು ದೇಶವನ್ನಾಳುವವರು.

ಈಗ ಚರ್ಚೆ ಮುಕ್ತಾವಾಗುತ್ತಿದೆ. ನಾನು ಇಷ್ಟರಲ್ಲಿ ಇನ್ನೊಂದು ಶೈಕ್ಷಣಿಕ ಸಮಾವೇಶವನ್ನು ಕರೆಯಲಿದ್ದೇನೆ. ಅದರಲ್ಲಿ ಇಲಾಖೆಯವರು ಮಾತ್ರ ಇರುತ್ತಾರೆ. ಇನ್ಸಪೆಕ್ಟರುಗಳು, ಜಿಲ್ಲಾ ಶಿಕ್ಷಣಾಧಿಕಾರಿಗಳು ಮತ್ತು ಇಲಾಖೆಯ ಇತರ ಜವಾಬ್ದಾರಿಯುತ ಅಧಿಕಾರಿಗಳು ತಾನೆ ಅಂತಿಮವಾಗಿ ಈ ಜವಾಬ್ದಾರಿಯುನ್ನು ಹೊರಬೇಕು? ಕಾರ್ಯಗತಗೊಳಿಸಬೇಕಾದ ಸಲಹೆಗಳನ್ನು ಅವರೊಂದಿಗೆ ಕೊನೆಯ ಸುತ್ತಿನ ಚರ್ಚೆ ನಡೆಸಿದ ನಂತರ, ಸರಕಾರಿ ಆದೇಶವು ಅಗತ್ಯವಾಗಿರುವಂಥವಕ್ಕೆ ಆದೇಶ ಹೊರಡಿಸಲಾಗುವುದು. ಶಾಸನವು ಅಗತ್ಯವಾಗಿರುವ ವಿಚಾರಗಳನ್ನು ಮುಂದೆ ಈ ಸದನದ ಮುಂದೆ ತರಲಾಗುವುದು.

ಮಾನ್ಯರೆ, ನಾವೆಲ್ಲರೂ ಬಯಸುತ್ತಿರುವ ಈ ಶಿಕ್ಷಣ ಸುಧಾರಣೆಯನ್ನು ಯಶಸ್ವಿಗೊಳಿಸಬೇಕೆಂದು ಮತ್ತೊಮ್ಮೆ ಸದನಕ್ಕೆ ವಿನಂತಿ ಮಾಡಿಕೊಳ್ಳುತ್ತೇನೆ.

(ವಿಧಾನ ಸಭೆ ಕಲಾಪ, ದಿ : 6-8-1953)

## 5. ರಾಜ್ಯಗಳ ಪುನರ್ವಿಂಗಡಣೆ ಮಸೂದೆ 1956

ಶ್ರೀ ಕೆ. ಹನುಮಂತಯ್ಯ (ಮುಖ್ಯಮಂತ್ರಿಗಳು) : ನಾನು ಸಂವಿಧಾನದ 3ನೇ ಅನುಚ್ಛೇದದ ಮೇರೆಗೆ ರಾಷ್ಟ್ರಪತಿಗಳು ಕಳುಹಿಸಿರುವ ರಾಜ್ಯಗಳ ಪುನರ್ವಿಂಗಡಣೆ ಮಸೂದೆ, 1956 ಇದನ್ನು ಸಭೆಯ ಅಂಗೀಕಾರಕ್ಕಾಗಿ ವಿನಯ ಪೂರ್ವಕವಾಗಿ ಮಂಡಿಸಿದ್ದೇನೆ.

ಸ್ವಾಮಿ, ಸಂಸ್ಥಾನಗಳ ಪುನರ್ ವ್ಯವಸ್ಥೆಯ ಮಾರ್ಗದಲ್ಲಿ ಇಂದು ಎರಡನೆಯ ಘಟ್ಟವನ್ನು ಮುಟ್ಟಿದ್ದೇವೆ. ಕೆಲವು ತಿಂಗಳ ಹಿಂದೆ ಸಭೆ ಈ ವಿಷಯವನ್ನು ವಿಪುಲವಾಗಿ ಚರ್ಚೆ ಮಾಡಿ ಒಂದು ತೀರ್ಮಾನವನ್ನು ಅಂಗೀಕರಿಸಿತು. ಮೈಸೂರು ಸಂಸ್ಥಾನ ವಿಸ್ತಾರದಲ್ಲಿ ದ್ವಿಗುಣವಾಗಿ ಪರಿಣಮಿಸಬೇಕು ಮತ್ತು ವಿವಾದದಲ್ಲಿರತಕ್ಕಂಥ ಕೆಲವು ಸ್ಥಳಗಳು ಮೈಸೂರಿನಲ್ಲಿ ಉಳಿಯಬೇಕು. ಇವರೆಡು ತೀರ್ಮಾನಗಳೂ ಬಹಳ ಮುಖ್ಯವಾದವು. ಮತ್ತೊಂದು ತೀರ್ಮಾನ ಮೈಸೂರು ಎಂಬ ಹೆಸರು ಮುಂದುವರಿಯಬೇಕೆಂಬುದು. ಈ ಮೂರು ವಿಷಯಗಳಲ್ಲೂ ಕೂಡ ಕೇಂದ್ರ ಸರ್ಕಾರದವರು ಈ ಸಭೆಯ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟಿದ್ದಾರೆ. ಇದು ಬಹಳ ಸಂತೋಷ ಸಂಗತಿ. ಬಳ್ಳಾರಿಯ ನಾಲ್ಕು ತಾಲ್ಲೂಕುಗಳ ವಿಚಾರದಲ್ಲಿ ಬಹಳವಾಗಿ ಚರ್ಚೆ ಎದ್ದು ವಿಪರೀತವಾದ ವಿವಾದಕ್ಕೆ ಅವಕಾಶವಾಯಿತು. ಈ ಸಭೆಯವರಾದರೋ ಈ ಪ್ರಶ್ನೆಯನ್ನು ಒಂದು ನೈತಿಕ ದೃಷ್ಟಿಯಿಂದ ಪರಿಶೀಲಿಸಿದರೆ ಹೊರತು ಒಂದು ರಾಜ್ಯದ ದಾಹದಿಂದ ಅಲ್ಲ. ನೈತಿಕ ನೀತಿಗೆ ಜಯ ದೊರೆಯುತಕ್ಕದ್ದು ಖಂಡಿತ ಎನ್ನುವುದಕ್ಕೆ ಇದು ನಿದರ್ಶನ. ಈ ದಿವಸ ಹಿಂದೆ ಈ ಸಭೆ ಯಾವ ತೀರ್ಮಾನಗಳನ್ನು ಮಾಡಿತೋ ಈ ತೀರ್ಮಾನವನ್ನೊಳಗೊಂಡ ಮಸೂದೆ ನಮ್ಮ ಮುಂದೆ ಪುನಃ ಕಾನೂನು ಪ್ರಕಾರ ಅಭಿಪ್ರಾಯಕ್ಕೆ ಬಂದಿದೆ. ಹಿಂದೆ ಯಾವ ತತ್ವವನ್ನು ಒಪ್ಪಿಕೊಳ್ಳಬೇಕೆಂದು ಹೇಳಿ ಪ್ರತಿಪಾದಿಸಿ ದೊಡ್ಡ ಭಾಷಣವನ್ನು ನಾನು ಮಾಡಿದೆನೋ ಅದು ಇಂದು ಅನಾವಶ್ಯಕ. ಇಂದು ಉದ್ಭವಿಸಿರತಕ್ಕದ್ದು ಒಂದು ಹೊಸ ಪ್ರಶ್ನೆ. ಈ ಸಭೆ ಎಸ್. ಆರ್. ಸಿ. ಸ್ಟೇಟ್ ರೀಆರ್ಗನೈಜೇಷನ್ ಕಮಿಟಿ, ಶಿಫಾರಸಿನ ಮೇಲೆ ತೀರ್ಮಾನ ತೆಗೆದುಕೊಂಡ ಮೇಲೆ ಪ್ರಾಂತಗಳ ಪುನರ್ ವ್ಯವಸ್ಥೆ ಮತ್ತ[illegible]ಟ್ಟ ದೊಡ್ಡ ಪ್ರಮಾಣದಲ್ಲಿ ಆಗಬೇಕು ಎನ್ನತಕ್ಕ ಸಲಹೆ ಇಂಡಿಯಾ ದೇಶದಲ್ಲೆಲ್ಲಾ ಚರ್ಚಿಸಲ್ಪಟ್ಟಿದೆ. ಈ ಅಭಿಪ್ರಾಯವನ್ನು ಪ್ರತಿಪಾದಿಸುವವರಾದರೂ ಕೂಡ ಪ್ರೈವೆ[illegible]ಮಿನಿಸ್ಟರು ಮ[illegible] ಇಂಡಿಯಾ ಸರ್ಕಾರದ ಮಂತ್ರಿಗಳು. ಈ ವಿಷಯದಲ್ಲಿ ಚರ್ಚೆ [illegible]ದಲ್ಲೆಲ್ಲಾ [illegible]ವಾಗಿ ನಡೆಯಿತು. ಬಂಗಾಳ, ಬಿಹಾರ ಎರಡೂ ಸಂಸ್ಥಾನ[illegible] ಕೂಡ [illegible]ನೀತಿಗನುಗುಣವಾಗಿ ಒಂದಾಗುತ್ತೇವೆ ಎಂದು ಹೇಳತಕ್ಕ ಘೋಷಣೆಯನ್ನು ಹೊರ[illegible]. ಅವರಿಬ್ಬ[illegible] ದೇಶದ ಎಲ್ಲಾ ಕಡೆಗಳಿಂದಲೂ ಅಭಿನಂದನೆಗಳು [illegible]ಲ್ಪಟ್ಟವು. ಇಂದು ನೋಡಿದರೆ ಆ ಘೋಷಣೆಯ ಬಿಗಿ [illegible] ಸಡಿಲ[illegible] ಹೋಗಿದೆ. ಒಂದೇ ಮನಸ್ಸಿನಿಂದ ಹೊರಟ ಈ ಘೋಷಣೆ[illegible]ಗ ಹತ್ತಾರು [illegible]ತಂಕಗಳು, ಅದರ

ಪ್ರಭಾವವು ಈಗ ಕಡಿಮೆಯಾಗಿದೆ. 'ದಕ್ಷಿಣ ಪ್ರದೇಶ' ಎನ್ನತಕ್ಕದ್ದನ್ನು ದಕ್ಷಿಣ ಭಾರತದಲ್ಲಿ ರಚಿಸುವುದು ಸೂಕ್ತ ಎಂದು ಹೇಳಿ ಆ ಮುಖಂಡರುಗಳೇ ದೇಶಕ್ಕೆ ಬುದ್ಧಿವಾದವನ್ನು ಹೇಳಿದರು. ದಕ್ಷಿಣ ಇಂಡಿಯಾ ದೇಶದಲ್ಲೂ ಸಂಬಂಧಪಟ್ಟ ಮಂತ್ರಿಗಳು, ಮುಖ್ಯ ಮಂತ್ರಿಗಳು ಮತ್ತು ಮುಖಂಡರು ಪರ್ಯಾಲೋಚನೆ ಮಾಡಿದರು. ಪರ್ಯಾಲೋಚನೆ ಮಾಡುತ್ತಾ ಮಾಡುತ್ತಾ ಅದರ ಪ್ರಾಮುಖ್ಯತೆಯೂ ಕೂಡ ಕಡಿಮೆಯಾಗುತ್ತಾ ಇರುವುದು ನಮ್ಮೆಲ್ಲರ ಕಣ್ಣಿಗೂ ಕಟ್ಟಿದ ಹಾಗೆ ಕಾಣುತ್ತಾ ಇದೆ. ಯಾವ ಒಂದು ಸಮಸ್ಯೆಯಾಗಲಿ ಅದು ಒಳ್ಳೆಯದಾಗಿರಬೇಕು ಆದರೆ ಜನಗಳ ಬೆಂಬಲವನ್ನು ಅದು ಪಡೆಯದೆ ಇದ್ದರೆ ಅದು ಕಾರ್ಯರೂಪಕ್ಕೆ ಬರಲು ಸಾಧ್ಯವಾಗುವುದಿಲ್ಲ. ದಕ್ಷಿಣ ಇಂಡಿಯಾ ದೇಶದಲ್ಲಿರತಕ್ಕ ಸಂಸ್ಥಾನಗಳು, ಎರಡಾಗಲಿ, ಮೂರಾಗಲಿ, ನಾಲ್ಕಾಗಲಿ ಸೇರಿ, ಒಂದು ಸಂಸ್ಥಾನ ಆಗಬೇಕು ಎಂದು ವಾದ, ಅದು ಸರಿಯಾದ ವಾದ ಅಲ್ಲ ಎಂದು ಹೇಳುವುದಕ್ಕಾಗುವುದಿಲ್ಲ.

ನಾನಾದರೋ ಹಿಂದಿನಿಂದಲೂ ಒಂದೇ ಸ್ಪಷ್ಟವಾದ ನೀತಿಯನ್ನು ಪ್ರತಿಪಾದಿಸಿ ಕೊಂಡು ಬಂದಿದ್ದೇನೆ. ಆ ನೀತಿ ನನ್ನ ಮನಸ್ಸಿನಲ್ಲಿ ರೂಪಿತವಾಗಿದುದ್ದು ಯಾರ ಹೆದರಿಕೆಯಿಂದಲೂ ಅಲ್ಲ, ಅಥವಾ ಯಾರ ಉತ್ತೇಜನದಿಂದಲೂ ಅಲ್ಲ, ಸ್ವಾಭಾವಿಕವಾಗಿ ದೇಶದ ಹಿತಚಿಂತನೆಯಿಂದ ಮನಸ್ಸಿನಲ್ಲಿ ಹುಟ್ಟಿದ ಯೋಚನೆ. ಈ ಸಭೆಯಲ್ಲಿ ನಾನು ಅದನ್ನು ಅನೇಕಸಲ ಹೇಳಿದ್ದೇನೆ, ಮಿಕ್ಕ ರಾಜಕೀಯ ತತ್ವಗಳು ಯಾವುವು ಬೇಡ ದೊಡ್ಡ ಶಾಸ್ತ್ರಗಳ ಮಾತುಗಳೂ ಬೇಡ. ಸಾಧಾರಣಾವಾಗಿ ಕೆಲವು ಅತಿಥಿಗಳು ಮನೆಗೆ ಬಂದರೆ ನೀವು ಬರಬಾರದು ಎಂದು ಹೇಳಿ ಬಾಗಿಲು ಮುಚ್ಚಿಕೊಳ್ಳತಕ್ಕದ್ದು, ಯಾವರೀತಿ ಸಜ್ಜನರ ಲಕ್ಷಣವಲ್ಲವೋ ಅದೇ ರೀತಿ ನಮ್ಮ ಸಂಸ್ಥಾನಕ್ಕೆ ಅಕ್ಕಪಕ್ಕದ ಪ್ರಾಂತ್ಯಗಳ ಜನರು ಬರುತ್ತೇವೆ ಎಂದು ಹೇಳಿದರೆ ಬೇಡ ಎನ್ನುವುದು ಅಷ್ಟೇ ಅಸಂಸ್ಕೃತಿಯ ಮಾರ್ಗ ಎಂದು ಹೇಳಿದೆ. ಈ ದಿವಸವೂ ಹೇಳತಕ್ಕದ್ದು, ಅಷ್ಟೆ, ಅಕ್ಕಪಕ್ಕದ ಪ್ರದೇಶದ ಜನರು ಹಿಂದೆ ಹೈದ್ರಾಬಾದ್ ಕನ್ನಡಿಗರಾಗಿರಬಹುದು. ಇಂದು ಕೇರಳದವರು, ತಮಿಳುನಾಡಿನವರು, ಆಂಧ್ರರು, ಮೈಸೂರಿನ ಜೊತೆಯಲ್ಲಿ ನಾವು ಸೇರಿಕೊಂಡು ಮತ್ತೊಂದು ದೊಡ್ಡ ಒಟ್ಟು ಕುಟುಂಬ ಮಾಡುತ್ತೇವೆ ಎಂದು ಹೇಳಿದರೆ ಅದನ್ನು ಬೇಡ ಎನ್ನತಕ್ಕದ್ದು ಸರಿಯಾದ ದೇಶಾಭಿಮಾನವನ್ನು ತೋರಿಸಿದಂತಾಗಲಿಲ್ಲ ಎಂದು ನಿಸ್ಸಂಕೋಚವಾಗಿ ಹೇಳುತ್ತೇನೆ.

ಧಾರವಾಡದ ಕನ್ನಡಿಗರು, ಬೊಂಬಾಯಿ ಕನ್ನಡಿಗರು. ಹೈದ್ರಾಬಾದಿನ ಕನ್ನಡಿಗರ, ಕೊಡಗಿನ ಕನ್ನಡಿಗರು, ದಕ್ಷಿಣ ಕನ್ನಡ ಜಿಲ್ಲೆಯ ಕನ್ನಡಿಗರು, ಇವರು ಯಾವ ರೀತಿ ಭಾರತೀಯರೋ ಅದೇ ರೀತಿ ಭಾರತೀಯರು ಕೇರಳ, ತಮಿಳುನಾಡಿನಲ್ಲಿರತಕ್ಕವರು ಮತ್ತು ಆಂಧ್ರದಲ್ಲಿರತಕ್ಕವರು, ಇವರನ್ನು ಯಾರಾದರೂ ಸೇರಿಸಿಕೊಳ್ಳುವುದಕ್ಕೆ ಹಿಂಜರಿದರೆ ಆ ಮನಸ್ಸು ಸಂಕುಚಿತವಾದ ಮನಸ್ಸು ಎಂದು ನಿರ್ಧಾರವಾಗಿ ಹೇಳಬಹುದು. ಒಬ್ಬನಿಗೆ ಮನಸ್ಸಿನ ಸಂಕಚಿತತ್ವವನ್ನು ಆರೋಪಣೆ ಮಾಡತಕ್ಕವರು ತಮ್ಮ ಮನಸ್ಸು ಎಂದು ನಿರ್ಧಾರವಾಗಿ ಹೇಳಬಹುದು. ಒಬ್ಬನಿಗೆ ಮನಸ್ಸಿನ ಸಂಕಚಿತತ್ವವನ್ನು ಆರೋಪಣೆ ಮಾಡತಕ್ಕವರು ತಮ್ಮ ಮನಸ್ಸು ವಿಶಾಲವಾಗಿದೆಯೇ ಎಂದು ಪರಿಶೀಲನೆ ಮಾಡಿ ಮನಸ್ಸನ್ನು ಶೋಧಿಸಿ ಮಾತನಾಡಬೇಕು. ಆದುದರಿಂದ ಭಾರತೀಯರು ಎಂದು ಪರಿಗಣಿಸಿ ಭಾವಿಸಿ ನಡೆಯುತ್ತಾ ಇರತಕ್ಕ ಕಾಲದಲ್ಲಿ ಒಂದು ಪ್ರಾಂತದ ಜನರು ಬೇರೆ ಎಂದು ಪಾಗಿಸತಕ್ಕದ್ದು A Indian Citizenship ಭಾರತದ ಪ್ರಜೆ ಎನ್ನತಕ್ಕ ಸದ್ಭಾವನೆಗೆ ವಿರುದ್ಧವಾಗಿದೆ. ಆದರೆ ಇದು ಎಲ್ಲರೂ ಒಪ್ಪತಕ್ಕ ವಿಷಯ. ಒಂದು ದಾರಿ ಏನಿದೆಯೋ ಆ ದಾರಿ ಸರಿಯಾದುದಲ್ಲ ಎಂದು ಹೇಳತಕ್ಕ ಮಾನ್ಯ ಸದಸ್ಯರು ಈ ಸಭೆಯಲ್ಲಿ ಒಬ್ಬರಾದರೂ ಇಲ್ಲವೆಂದು ನನಗೆ ನಂಬಿಕೆ ಇದೆ. ವಿವಾದಬರತಕ್ಕದ್ದು ಎರಡನೇ ಘಟ್ಟದಲ್ಲಿ: ಸೇರಿಕೊಳ್ಳುವಾಗ ಯಾರಾದರೂ ಒಬ್ಬರು ನಾವು ಮೈಸೂರಿನ ಜೊತೆಗೆ ಸೇರುವುದಿಲ್ಲವೆಂದರೆ ಅವರನ್ನು ಬಲಾತ್ಕಾರ ಮಾಡುವುದಕ್ಕಾಗುವುದಿಲ್ಲ. ಸ್ವಾಭಾವಿಕವಾಗಿ ಸಹಜವಾಗಿ, ಪ್ರೀತಿಯಿಂದ ಸ್ವಾಗತಿಸುವುದು ನಮ್ಮ ಕರ್ತವ್ಯವೇ ಹೊರತು ಮನಸ್ಸಿಲ್ಲದಿರುವವರನ್ನು ಬಲಾತ್ಕಾರಮಾಡಿ ಯಾವ ಪ್ರಾಂತಕ್ಕೆ ಅಗಲಿ ಯಾವ ಸಂಸ್ಥಾನಕ್ಕಾಗಲಿ ಸೇರಿಸುವುದಕ್ಕಾಗುವುದಿಲ್ಲ. ಇರತಕ್ಕ ನಿಜವಾದ ಕಷ್ಟ ಅಲ್ಲಿ. ನಮ್ಮ ಸುತ್ತಮುತ್ತಲೂ ಇರತಕ್ಕ ಪ್ರದೇಶಗಳನ್ನು ತೆಗೆದುಕೊಳ್ಳೋಣ ನಾನು ಮದರಾಸು ಅಸೆಂಬ್ಲಿಯಲ್ಲಿ ಯಾವ ರೀತಿ ವಾದ ನಡೆಯುತ್ತಿದೆ ಎನ್ನುವುದನ್ನು ಬಹಳ ಕಾದು ನೋಡುತ್ತಿದ್ದೇನೆ. ನಾನು ಪರಿಸ್ಥಿತಿಯನ್ನು ಎಷ್ಟೇ ಯೋಚನೆ ಮಾಡಿದರೂ ಕೂಡ. ಈ pictureನಲ್ಲಿ ಮದರಾಸು ಸಂಸ್ಥಾನದ ಪಾತ್ರ ಬಹಳ ಮುಖ್ಯವಾದ ಪಾತ್ರ. ಮದರಾಸಿನ ಫೈನಾನ್ಸ್ ಮಿನಿಸ್ಟರ್ ಅವರು ಈ S. R. Billನ್ನು ಪ್ರತಿಪಾದಿಸುತ್ತಿರುವಾಗ ಸ್ಪಷ್ಟವಾಗಿ ಹೇಳಿದ್ದಾರೆ. ಹಿಂದೆ ಅವರೇ ದಕ್ಷಿಣ ಪ್ರದೇಶವಾಗಿರತಕ್ಕದ್ದು ಸೂಕ್ತ, ಸರಿಯಾದದ್ದು ಎಂದು ಬಹಳ ಹೇಳಿಕೆಗಳನ್ನು ಕೊಟ್ಟಿದ್ದಾರೆ. ಭಾಷಣಗಳನ್ನು ಮಾಡಿದ್ದಾರೆ, ದೇಶದ ಅಭಿಪ್ರಾಯವನ್ನು ಅಳೆದಿದ್ದಾರೆ, ಅನಂತರ ಅವರೇ ಅಸೆಂಬ್ಲಿಯಲ್ಲಿ ದಕ್ಷಿಣ ಭಾರತದ ಸೃಷ್ಟಿಯಾಗಬೇಕೆಂಬ ಸೂಚನೆ ಏನಿದೆಯೋ ಅದು ಜನಾನುರಾಗಿಯಾಗಿಲ್ಲ, ಅದನ್ನು ಕಾರ್ಯಗತಮಾಡುವುದು ಕಷ್ಟ

ಎನ್ನತಕ್ಕ ಪದಗಳನ್ನು ಪ್ರಯೋಗ ಮಾಡಿದ್ದಾರೆ. He has said ``It is either popular nor practicable" That is the hard fact that faces as from Madras. ಅದರಲ್ಲಿ ತಮಗೆ ಗೊತ್ತಿರುವ ಹಾಗೆ, ಅಲ್ಲಿನ ಮಂತ್ರಿ ಮಂಡಲದಲ್ಲಿ , ಶಾಸನ ಸಭೆಯಲ್ಲಿ ಭಿನ್ನಾಭಿಪ್ರಾಯವಿದ್ದು ಯಾರೂ ದಕ್ಷಿಣ ಪ್ರದೇಶಕ್ಕೆ ಪರವಾಗಿದ್ದರೋ ಅವರೇ ಈ ವಾದಸರಣಿಯನ್ನು ಹೂಡಿದರೆ ನಾವು ವಿಚಾರದಲ್ಲಿ ಹೇಗೆ ವರ್ತಿಸಬೇಕು ಎನ್ನತಕ್ಕದ್ದನ್ನು ಆಲೋಚನೆ ಮಾಡಬೇಕು. ಇನ್ನು ತಿರುಕೊಚ್ಚಿ ವಿಷಯವನ್ನು ಪ್ರಸ್ತಾಪ ಮಾಡಿದರೆ ತಿರುಕೊಚ್ಚಿ ಮಂತ್ರಿ ಮಂಡಲದವರು ಕಾಂಗ್ರೆಸ್ ಸಂಸ್ಥೆಯವರು ಮೈಸೂರಿನ ಜೊತೆ ಸೇರಿಕೊಳ್ಳುವುದಕ್ಕೆ ಅಥವಾ ಎರಡು ಮೂರು ಪ್ರಾಂತ್ಯಗಳಿಂದ ಕೂಡಿದ ದೊಡ್ಡ ಪ್ರಾಂತ್ಯವನ್ನು ಎಂದರೆ, ದಕ್ಷಿಣ ಪ್ರದೇಶವನ್ನು ಮಾಡುವುದಕ್ಕೆ ಸಿದ್ಧರಾಗಿದ್ದರು, ಒಪ್ಪಿದರು, ಅದೇನೂ ಗುಟ್ಟಿನ ಮಾತಲ್ಲ. ಈ ದಿವಸದ ಪರಿಸ್ಥಿತಿ ಏನಾಗಿದೆ ಎಂದರೆ ಯಾರು ಯಾರು ಈ ವಾದಕ್ಕೆ ಒಪ್ಪಿ ಕಾರ್ಯೋನ್ಮುಖರಾಗಿದ್ದರೊ ಅವರು ದುರದೃಷ್ಟವಶಾತ ಪದಚ್ಯುತರಾಗಿದ್ದಾರೆ. ಅಲ್ಲಿ ಶಾಸನ ಸಭೆಗಳಲ್ಲಿ ರಾಜಕೀಯ ದೃಷ್ಟಿಯಿಂದ ನೋಡಿದರೆ ಕೇರಳ ಕೇರಳವಾಗಿಯೇ ಉಳಿಯಬೇಕು ಎನ್ನತಕ್ಕವರ ಅಭಿಪ್ರಾಯ ಬಹುಮತವಾಗಿದ್ದ ಹಾಗೆ ಕಾಣುತ್ತದೆ. ಬಹುಮತವೆನ್ನತಕ್ಕದ್ದನ್ನು Majority ಏನ್ನುವ ಅರ್ಥದಲ್ಲಿ ಉಪಯೋಗಿಸುತ್ತೇನೆ. Majority ಸ್ವಲ್ಪಮಾತ್ರ ಇರಬಹುದು, ಬಹುಸಂಖ್ಯೆಯಲ್ಲಿಲ್ಲದೆ ಇರಬಹುದು. ಆದರೆ ಕೇರಳ ಪ್ರಾಂತ್ಯ ಮತ್ತೊಂದು ಸಂಸ್ಥಾನದೊಡನೆ ಸೇರಿ ದ್ವಿಭಾಷಾ ಅಥವಾ ತ್ರಿಭಾಷಾ ಪ್ರಾಂತ್ಯವಾಗಬೇಕು ಎನ್ನತಕ್ಕವರ ಅಭಿಪ್ರಾಯಕ್ಕೆ ಎಷ್ಟು ಬಲ, ಶಕ್ತಿ ಒತ್ತಾಯ ಇರಬೇಕೋ ಅಷ್ಟು ಇದ್ದ ಹಾಗೆ ನನಗೆ ಕಾಣುವುದಿಲ್ಲ. ಇನ್ನು ಉಳಿದಿರತಕ್ಕದ್ದು ಆಂಧ್ರಪ್ರಾಂತ. ಈ ಮಹತ್ವದ ಪ್ರಶ್ನೆಯಲ್ಲಿ ಈ ಸಭಾಸದರಿಗೆ ಎಲ್ಲ ವಿಷಯಗಳನ್ನು ಕಳಿಸತಕ್ಕದ್ದು ನನ್ನ ಕರ್ತವ್ಯ. ನಾನಾದರೂ ಈ ವಿಚಾರದಲ್ಲಿ ತಟಸ್ಥನಾಗದೆ ಅವರೊಡನೆ ಸಮಾಲೋಚನೆ ಮಾಡಿದ್ದೇನೆ. ಸಮಾಲೋಚನೆ ಮಾಡಿದ್ದರ ಫಲವಾಗಿ ಆಂಧ್ರ ನಾಯಕರುಗಳು ಈ ಒಂದು ದೊಡ್ಡ ದ್ವಿಭಾಷಾ ಅಥವಾ ತ್ರಿಭಾಷಾ ಪ್ರಾಂತವನ್ನು ಸ್ಥಾಪನೆ ಮಾಡೋಣವೆನ್ನುವ ಸೂಚನೆಗೆ ಅಷ್ಟಾಗಿ ಮನಸ್ಸನ್ನು ಕೊಡಲಿಲ್ಲ. ಹಾಗೂ ಈ ವಿಷಯದಲ್ಲಿ ಅಧಿಕೃತವಾದ ಪ್ರತಿನಿಧಿಯುತವಾದ ಪ್ರಜಾಭಿಪ್ರಾಯ ಹೊರಪಟ್ಟ ಹಾಗೆ ನನಗೆ ಕಾಣುವುದಿಲ್ಲ. ಆದುದರಿಂದ ಇತರರನ್ನು ಸ್ವಾಗತಿಸುವುದಕ್ಕೆ ಸ್ವಾಭಾವಿಕವಾಗಿರತಕ್ಕ ಸತ್‌ಸಂಪ್ರದಾಯವನ್ನು ಹಾಕಿರತಕ್ಕ ಈ ಸಭೆಯವರು ಸತ್ಸಂಪ್ರದಾಯ ಮಾರ್ಗದಲ್ಲಿ ನಡೆದುಕೊಂಡು ಹೋಗತಕ್ಕದ್ದು, ಶ್ರೇಯಸ್ಕರ. ನಾವು ಈ ವಿಷಯದಲ್ಲಿ ಒತ್ತಾಯವನ್ನು ಮಾಡತಕ್ಕದ್ದು ಸರಿಯಲ್ಲವೆನ್ನುವುದನ್ನು ಎಲ್ಲರೂ ಒಪ್ಪಿಕೊಳ್ಳುತ್ತೇವೆ. ಕೆಲವರು ಹೇಳಬಹುದು

ತೆರೆದ ಬಾಗಿಲನ್ನು ಮುಚ್ಚದೆ ಯಾವರೀತಿ ಹೇಳಿದೆಯೋ ಹಾಗೆ ತೆರೆದಿರೋಣವೆಂದು. ಅದು ನ್ಯಾಯವಾದ ಸೂಚನೆ. ಸರ್ವಸಮ್ಮತವಾದ ಸೂಚನೆ, ಅಧಿಕೃತವಾಗಿ ಶಾಸನ ಸಭೆಯಿಂದ ತಿರುಕೊಚ್ಚಿ ಪ್ರಾಂತದವರಾಗಲಿ, ಮದರಾಸು ಪ್ರಾಂತದವರಾಗಲಿ, ಆಂಧ್ರ ಪ್ರಾಂತದವರಾಗಲಿ ಎಲ್ಲರೂ ಒಪ್ಪಿ ಒಂದು ದೊಡ್ಡ ಪ್ರಾಂತವನ್ನು ದೇಶದ ಹಿತದೃಷ್ಟಿಯಿಂದ ಮಾಡೋಣವೆಂದು ಹೇಳಿದರು. ಆ ಸೂಚನೆಯ ವಿಷಯದಲ್ಲಿ ನಾವು ಸದಾ ತೆರೆದ ಮನಸ್ಸು, ತೆರೆದ ಬಾಗಿಲು ಇಟ್ಟು ಕೊಂಡಿರತಕ್ಕವರಾಗಿರತಕ್ಕದ್ದು ಒಳ್ಳೆಯದು. ಈ ವಿಷಯದಲ್ಲಿ ನಾನು ಪುನಃ ಪುನಃ ಪ್ರಾರ್ಥಿಸಿ ಹೇಳಿಕೊಳ್ಳುತ್ತೇನೆ. ಇದು ಬಹಳ ವಿವಾದಯುತವಾದ ಪ್ರಶ್ನೆ. ಈ ಪ್ರಶ್ನೆಯಲ್ಲಿ ನನ್ನ ಅಭಿಪ್ರಾಯವೇ ಸರಿ ಎಂದು ಯಾರು ವಾದಿಸುವುದಕ್ಕೆ ಹೋಗುತ್ತಾರೆಯೋ ಅವರು ದೇಶದಲ್ಲಿ ಶಾಂತಿ ಸೌಹಾರ್ದಗಳಿಗೆ ಸಹಾಯ ಮಾಡಿದಂತಾಗುವುದಿಲ್ಲ. ಯಾವಾಗಲೂ ಎಲ್ಲಾ ಪ್ರಶ್ನೆಗಳಲ್ಲಿಯೂ ಎರಡು ಇರುತ್ತವೆ, ತಿರುಳು ಮತ್ತು ಸಿಪ್ಪೆ (form and substance). ಎಲ್ಲಾ ಶಾಸನಸಭೆಗಳೂ ಕಾನೂನು ಮಾಡತಕ್ಕದಕ್ಕೆ, ತೀರ್ಮಾನ ಮಾಡತಕ್ಕದಕ್ಕೆ ಒಂದು ಉದ್ದೇಶ (Substance) ಯಾವುದೆಂದರೆ ದೇಶಕ್ಕೆ ಒಳ್ಳೆಯದಾಗಲಿ, ಜನಗಳಲ್ಲಿ ಶಾಂತಿ ಮತ್ತು ನೆಮ್ಮದಿ ಇರಲಿ ಎಂಬುದು ಹಾಗೆ ನಾವು ಮಾಡತಕ್ಕ ತೀರ್ಮಾನ `This is merely a means to an end this is not an end in itself', ಎಂದು ಅನೇಕರು ವಾದಿಸುತ್ತಾರೆ.

ಕರ್ನಾಟಕ ಏಕೀಕರಣ `Is an end in itself' ಎಂದು ವಾದಿಸತಕ್ಕದ್ದೂ ಸರಿಯಲ್ಲ. Even in the minds of these two sections. If they anatyre the situation, these proposals are merely a means to an end, the end being the happiness and well-being of the people. ಅದನ್ನು ನಾವು ಸರಿಯಾಗಿ ಅರ್ಥ ಮಾಡಿಕೊಂಡು ಮನಸ್ಸಿಗೆ ಅಂಟಿಸಿಕೊಂಡರೆ ತೀರ್ಮಾನ ಯಾವ ರೂಪತಾಳಬೇಕು ಎನ್ನತಕ್ಕವರಲ್ಲಿ ಒಂದು ಹಠವೇನಿದೆಯೋ ಆ ಹಠ ಕ್ರಮ ಕ್ರಮವಾಗಿ ಹೋಗಿ ಎಲ್ಲರಲ್ಲಿಯೂ ಶಾಂತಿ ಸೌಹಾರ್ದ ಭಾವವುಂಟಾಗುತ್ತದೆ. ಈ ದಿವಸ ನಾವು ಮಾಡತಕ್ಕ ತೀರ್ಮಾನಗಳನ್ನು ಹೊರಗಡೆಯಿಂದ ಅಕ್ಟೋಬರು ತಿಂಗಳಿನಿಂದ ಆಚೆಗೆ ಬಂದು ಸೇರತಕ್ಕಂಥವರು ಒಪ್ಪಿಕೊಂಡಿಲ್ಲವೆಂದು ನನ್ನ ಮನಸ್ಸಿಗೆ ಬಹಳ ವ್ಯಥೆಯಾಗುತ್ತದೆ. ನಮ್ಮ [illegible] ಇಲ್ಲಿನ [illegible] ಪರಿಸ್ಥಿತಿಯನ್ನು ಅವರು ಅರಿತುಕೊಂಡಿಲ್ಲ. ಮೈಸೂರು ಎಂದು [illegible] ಸತ್ಯಾಗ್ರಹ ಮಾಡುತ್ತೇವೆ ಎಂದು ಪತ್ರಿಕೆಗಳಲ್ಲಿ ಸಂಪಾದಕೀಯಗಳನ್ನು ಬರೆದಿರುತ್ತಾರೆ. ಇದನ್ನು ಒಪ್ಪಬಾರದು ಎಂದು ಅಗ್ರ ಲೇಖನಗಳನ್ನು ಬರೆದಿರುತ್ತಾರೆ.

ಅನೇಕ ಮುಖಂಡರುಗಳು ಸಹ ತಪ್ಪು ಅರ್ಥ ಮಾಡಿಕೊಂಡಿರುತ್ತಾರೆ. ಇಂದು ಮೈಸೂರು ಸಭೆಯವರು ಒಮ್ಮತವಾದ ಒಂದು ತೀರ್ಮಾನವನ್ನು ತೆಗೆದುಕೊಂಡಿದ್ದಾರಲ್ಲ ಅದನ್ನು ನಾವೆಲ್ಲ ಕಲೆತುಕೊಂಡಾಗ ಸಮಾಲೋಚನೆ ಮಾಡೋಣವೆನ್ನುವ ಮಟ್ಟದಲ್ಲಿಯೂ ಅವರು ಇಲ್ಲ.

ಮೈಸೂರು ಸರ್ಕಾರದವರು ಸರ್ವಾನುಮತದಿಂದ ಮಾಡಿರುವ ತೀರ್ಮಾನವಿರುವಾಗ ನಾವೆಲ್ಲಾ ಕುಳಿತುಕೊಂಡು ಯೋಚನೆ ಮಾಡೋಣ ಎಂದು ಹೇಳಿದ್ದರೆ ನನ್ನ ಮನಸ್ಸಿಗೆ ಬಹಳ ಸಂತೋಷವಾಗುತ್ತಿತ್ತು. ಮೈಸೂರು ಶಾಸನ ಸಭೆಗಳು ಒಂದು ಬಹುಮತದ ತೀರ್ಮಾನವನ್ನು ಕೈಗೊಂಡಿರುವಾಗ ಮಿಕ್ಕವರ ಅಭಿಪ್ರಾಯ ತೆಗೆದುಕೊಳ್ಳುವುದು ಸೂಕ್ತವಲ್ಲ. ನಿಮ್ಮ ಕುದುರೆ ಯಾವ ಕಡೆ ಬೇಕಾದರೂ ಓಡಲಿ ನಮ್ಮ ದಾರಿ ನಮ್ಮದು ಎಂದು ವಾದಿಸುವವರಿದ್ದರೆ ಏನು ಮಾಡುವುದು? ಇಲ್ಲಿ ಕೆಲ ಅಧಿಕಾರ ಸ್ಥಾನಗಳಲ್ಲಿರುವ ಮುಖಂಡರಾದ ನಾವೆಲ್ಲರೂ ಒಗ್ಗಟ್ಟಾಗಿ ಒಟ್ಟು ಕುಟುಂಬದವರಂತೆ ಬಾಳಬೇಕೆಂಬ ಅಭಿಪ್ರಾಯ ಸೂಚಿಸಿದರೆ ಅದು ಬೇಡವೆಂದು ಹೇಳಿದರೆ ಅದಕ್ಕೇನು ಮಾಡಬೇಕು? ಯಾವ ಕಾರಣದಿಂದಲೋ ಏನೋ 35 ಜನ ಅಸೆಂಬ್ಲಿ ಸದಸ್ಯರು ಜವಾಹರಲಾಲ್ ನೆಹ್ರೂ ಅವರಿಗೆ ಒಂದು ಸ್ಟೇಟ್‌ಮೆಂಟ್ ಕಳುಹಿಸಿದರು. ಇಷ್ಟು ಕಷ್ಟಪಟ್ಟು ನಾವು ಒಂದು ತೀರ್ಮಾನಕ್ಕೆ ಬಂದಿರುವಾಗ ನಮ್ಮನ್ನು ಕೇಳುವ ಮನಸ್ಸು ಸಹ ಆ ಮಾನ್ಯ ಸದಸ್ಯರಿಗೆ ಬರಲಿಲ್ಲ. ಅದೇನೋ ಆಗಿ ಹೋಯಿತು. ಮೈಸೂರಿನವರನ್ನು ಕಟ್ಟಿಹಾಕಿ ದರದರ ಎಳೆದುಕೊಂಡು ಹೋಗೋಣ ಎಂಬ ಭಾವನೆಯಿದ್ದರೆ ಹೇಗೆ? ಸರಿಯಾದ ರೀತಿಯಲ್ಲಿ ನಿರ್ದೇಶನ ಕೊಡಲಿಲ್ಲವಲ್ಲ ಎಂಬುದೇ ಈ ದಿವಸ ಒಂದು ದೊಡ್ಡ ಚಿಂತೆಯಾಗಿದೆ. ಆದರೆ ನಾವು ನಿರಾಶರಾಗಿರಬಾರದು. ಮನುಷ್ಯನ ಗುಣ ಅನೇಕಾವರ್ತಿ ಸಮಯಕ್ಕೆ ಸರಿಯಾಗಿ ಪ್ರವರ್ತಿಸುವುದೇ ಆಗಿದೆ. ಇಬ್ಬರು ಕಲೆತು ಮಾತನಾಡುವ ಉದ್ದೇಶವೇನು? ಆದರಿಂದ ಅನೇಕ ಸಾರಿ ಅಭಿಪ್ರಾಯ ಮಾರ್ಪಾಡಾಗುತ್ತದೆ. ಇದು ನಮ್ಮೆಲ್ಲರ ಅನುಭವ? ಆದುದರಿಂದ ಉದ್ವೇಗದಿಂದ ಕೂಡಿರತಕ್ಕ ಉತ್ತರ ಕರ್ನಾಟಕದವರು ನಮ್ಮಲ್ಲಿಗೆ ಬಂದು ನಮ್ಮೊಡನೆ ಕಲೆತು ಸಮಾಲೋಚನೆ ಮಾಡಬಹುದೆಂದು ಹೇಳಿದ ಮೇಲೆ ಅವರ ಉದ್ವೇಗ ಸ್ವಲ್ಪ ಕಡಿಮೆಯಾಗಬಹುದು. ಅವರೂ ನಾವು ಎಲ್ಲರೂ ಭಾರತೀಯರೇ ಆಗಿರುವುದರಿಂದ ಯಾವುದಾದರೂ ಒಂದು ತೀರ್ಮಾನಕ್ಕೆ ಬಂದೇಬರಬೇಕು. ಗತ್ಯಂತರವಿಲ್ಲ. ಪಾಕಿಸ್ಥಾನ ಹಿಂದೂಸ್ಥಾನ ಹರಿದುಹಂಚಿದ ಹಾಗೆ ಇಂಡಿಯಾ ದೇಶದಲ್ಲಿರುವ ನಾವು, ನಾವೇ ಬೇರೆ, ನೀವೇ ಬೇರೆ ಎಂದು ಉತ್ತರ

ಕರ್ನಾಟಕದವರೂ ಮತ್ತು ದಕ್ಷಿಣ ಕರ್ನಾಟಕದವರೂ ಒಂದು ಚೈನೀಸ್ ವಾಲ್ ಕಟ್ಟಿಕೊಳ್ಳುವುದಕ್ಕಾಗುವುದಿಲ್ಲ. ಒಂದು ವೇಳೆ ಅವರು ಉದ್ವೇಗತೋರಿಸಿದರೂ ಅವರ ಮನಸ್ಸನ್ನು ಒಲಿಸಿಕೊಂಡು ಅವರ ಅನುಮಾನ ಪರಿಹಾರ ಮಾಡಿ ನೆಮ್ಮದಿಯಿಂದ ಬಾಳತಕ್ಕಂಥ ಒಂದು ಪರಿಸ್ಥಿತಿಯನ್ನು ರೂಪಿಸಬೇಕಾಗಿರತಕ್ಕ ಜವಾಬ್ದಾರಿ, ನಮ್ಮದೇ ಆಗಿದೆ. ಈ ದಿವಸ ನಾವು ಈ ಎಲ್ಲ ದೃಷ್ಟಿಗಳನ್ನು ಗಮನದಲ್ಲಿಟ್ಟುಕೊಂಡು ತೀರ್ಮಾನ ಮಾಡಬೇಕು. ಇತರರ ಉದ್ವೇಗ ಕಡಿಮೆ ಮಾಡಲು ಯಾವುದಾದರೂ ದಾರಿ ಇದೆ ಎಂಬುದನ್ನು ನಾವು ಯೋಚನೆ ಮಾಡಬೇಕು. ಎಷ್ಟೇ ಹೇಳಿದರೂ ಕೂಡ ಈ ದಿವಸ ಮೈಸೂರು ಸಂಸ್ಥಾನಕ್ಕೆ ಮತ್ತು ಈ ಸಭೆಗೆ ಬಹಳ ಪ್ರಾಮುಖ್ಯವಾದ ಸ್ಥಾನವಿದೆ. ಮಿಕ್ಕವರು ಏನೇ ಹೇಳಿದರೂ ಕೂಡ ಈ ಸಭೆಯ ಅಭಿಪ್ರಾಯಕ್ಕೆ ದೇಶದಲ್ಲಿ, ಪಾರ್ಲಿಮೆಂಟಿನಲ್ಲಿ, ಇಂಡಿಯಾ ಸರ್ಕಾರದಲ್ಲಿ ಹೆಚ್ಚಾದ ಮಾನ್ಯತೆ ದೊರೆತಿದೆ. ಆದುದರಿಂದಲೇ ಈ ಜವಾಬ್ದಾರಿ, ಈ ರೀತಿ ರೂಪಿತವಾಗಿರತಕ್ಕ ದೊಡ್ಡ ಜವಾಬ್ದಾರಿ ನಮ್ಮ ಮೇಲೆ ಬಿದ್ದಿರುವುದರಿಂದ ನಾವು ಜವಾಬ್ದಾರಿಯುತವಾಗಿಯೇ ವರ್ತಿಸಬೇಕು. ಇಷ್ಟೇ ನಾನು ಪ್ರಾರ್ಥಿಸಿಕೊಳ್ಳುವುದು. ಈ ಸಭೆಯವರೇನು ತೀರ್ಮಾನ ಕೈಗೊಂಡಿದ್ದೇರೋ, ಆ ವಿಚಾರದಲ್ಲಿ ಸದಾ ಒಮ್ಮನಸ್ಸಿನಿಂದ, ಒಗ್ಗಟ್ಟಿನಿಂದ ವರ್ತಿಸದೇ ಹೋದರೆ ಅದು ನಮ್ಮ ಅತ್ಮಕ್ಕೆ ನಾವೇ ವಂಚನೆಯನ್ನು ಮಾಡಿಕೊಂಡ ಹಾಗಾಗುತ್ತದೆ. ನಮ್ಮ ಭಾಷೆಗೆ ನಾವೇ ತಪ್ಪಿದ ಹಾಗಾಗುತ್ತದೆ. ನಾಳೆಯ ದಿವಸ ಮೈಸೂರಿನ ಹೆಸರಿನ ವಿಷಯ ಬರಬಹುದು ಅಥವಾ ಮೈಸೂರಿನ ಹಿನ್ನಲೆ ವಿಷಯ ಬರಬಹುದು. ಇಲ್ಲಾದ ತೀರ್ಮಾನಕ್ಕೆ ಒಪ್ಪಿರುವವರು, ಇಲ್ಲಿ ತೀರ್ಮಾನ ಮಾಡಿರುವವರು ನಾಳೆ ತಮ್ಮ ಮನಸ್ಸನ್ನು ಬದಲಾಯಿಸುವುದು ಸೂಕ್ತವಲ್ಲ, ಬದಲಾಯಿಸಿದ್ದೇ ಆದರೆ ಮನಸ್ಸನ್ನು ನೋಯಿಸಿದಂತಾಗುವುದೂ ಅಲ್ಲದೆ, ಆ ನೋವು ಮಾಯುವುದಕ್ಕೆ ಅವಕಾಶವೂ ಇರುವುದಿಲ್ಲ. ಯಾವಾಗ ಮನಸ್ಸು ನೋಯುತ್ತದೋ ಯಾರಿಂದಲೂ ತಪ್ಪಿಸುವುದಕ್ಕಾಗುವುದಿಲ್ಲ. ಅದರ ಪರಿಣಾಮ ಆಟಂಬಾಂಬ್, ಹೈಡ್ರೋಜನ್ ಬಾಂಬಿಗಿಂತ ವಿಪರೀತವಾಗಬಹುದು. ಆದುದರಿಂದ ಮನಸ್ಸಿನ ಸಹಜಗುಣವರಿತು ಸರಿಯಾದ ರೀತಿಯಲ್ಲಿ ವರ್ತಿಸಿದರೆ ಮುಂದೆ ಶಾಂತಿಯಿಂದ ಸೌಹಾರ್ದವಿದೆ. ಈ ಶಾಂತಿ ಸೌಹಾರ್ದವನ್ನು ಕಾಪಾಡುವ ಬಹುಮಟ್ಟಿನ ಜವಾಬ್ದಾರಿ ಈ ಸಭೆಯ ಸದಸ್ಯರದೇ ಆಗಿದೆ. ಈ ಸಭೆಯಲ್ಲಿರತಕ್ಕ ಎಲ್ಲಾ ಸದಸ್ಯರೂ ಜಾತಿ, ಕೋಮು, ಪ್ರದೇಶ ಇವುಗಳ ಅಭಿಮಾನವನ್ನೆಲ್ಲಾ ಬಿಟ್ಟು ಮೈಸೂರು ಅಸೆಂಬ್ಲಿ ಏನೊಂದು ತೀರ್ಮಾನ ಮಾಡಿದೆಯೋ ನಮ್ಮ ಸರ್ವಾನುಮತ ತೀರ್ಮಾನವೇನಿದೆಯೋ ಅದರ ಪ್ರಕಾರ ಸದಾ ನಡೆದುಕೊಂಡು ಹೋಗೋಣ ಎಂದು ಮನಸ್ಸುಳ್ಳವರಾಗಿದ್ದರೆ ಅದರ

ವಾತಾವರಣವೇ ಬೇರೆಯಾಗುತ್ತದೆ. ದಕ್ಷಿಣ ಪ್ರದೇಶದ ಸೂಚನೆ, ಅದರ ಸಮಸ್ಯೆ ಇವುಗಳನ್ನು ನಾವುಗಳೆಲ್ಲರೂ ಒಪ್ಪಿ ಅದರ ತತ್ವ ಸರಿಯಾಗಿದೆಯೆಂದು ಒಪ್ಪಿಕೊಂಡರೂ ಕೂಡ ಅದನ್ನು ಕಾರ್ಯರೂಪಕ್ಕೆ ತರತಕ್ಕುದರಲ್ಲಿ ಬೇಕಾದಷ್ಟು ಅಡಚಣೆಯಿದೆ, ಅದಕ್ಕೆ ಅವಕಾಶವಿಲ್ಲ ಎಂಬುದನ್ನೂ ಕೂಡ ಮನಸ್ಸಿಗೆ ತಂದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ ಬಹುಶಃ ಇನ್ನೂ ಕೆಲವು ದಿವಸ ಕಾದುನೋಡೋಣ. ಮದರಾಸ್ ಅಸೆಂಬ್ಲಿಯಲ್ಲಿ It is neither practicable nor popular. ಎಂದು ತೀರ್ಮಾನ ಮಾಡಿದರು. ಆಂಧ್ರ ಅಸೆಂಬ್ಲಿಯಲ್ಲಿ ಏನು ಹೇಳುತ್ತಾರೋ ನೋಡೋಣ, ಕೇರಳದ ವಿಷಯ ಈ ದಿವಸ ಪ್ರಸ್ತಾಪ ಮಾಡುವುದಕ್ಕೇ ಆಗುವುದಿಲ್ಲ, ಆದುದರಿಂದ ಮೈಸೂರು ದೊಡ್ಡ ಮೈಸೂರಾಗತಕ್ಕ ಸಂದರ್ಭದಲ್ಲಿ ಇದೇ ಹೆಸರನ್ನೇ ಉಳಿಸಿಕೊಳ್ಳಲಿ ಅಥವಾ ಬೇರೆ ಹೆಸರನ್ನಿಡತಕ್ಕ ಸಂಭವ ಬರಲಿ, ಆಗ ನಾವು ಮನಸ್ಸಿನಲ್ಲಿ ಭಿನ್ನತೆ ಇಟ್ಟುಕೊಳ್ಳಬಾರದು. ಇದಕ್ಕೆ ಯಾವಾಗಲೂ, ಒಂದು ಹಠವನ್ನು ಬಿಟ್ಟು ತಾವೀಗ ಕಾಲ ಪರಿಸ್ಥಿತಿಯನ್ನು ಪರಿಗಣನೆಗೆ ತೆಗೆದುಕೊಂಡು ಈ ಸಂದರ್ಭದಲ್ಲಿ ಒಂದು ಸರಿಯಾದ ನಿರ್ಧಾರಕ್ಕೆ ಬರುವುದಕ್ಕೆ ಸಾಧ್ಯವಿದೆಯೆಂದು ನನ್ನ ಅಭಿಪ್ರಾಯ.

(ವಿಧಾನ ಸಭೆಕಲಾಪ - ದಿ : 31-3-1956)

'ಮೈಸೂರು ಎನ್ನತಕ್ಕ ಹೆಸರು ಇರಲಿ, ಈ ಹೆಸರು ಏನಿದ್ದರೆ ಏನು ಎಂದು ಹೇಳಿ, ಇದು ಇರಬೇಕು ಎನ್ನಲು ಕಾರಣ ಏನು ಹೇಳಿರೆಂದರೆ 'ಮೈಸೂರು ದೇಶದಲ್ಲಿರುವ ನೂರಾರು ಶಾಸನಗಳು ಏನಿವೆಯೋ ಅವುಗಳ ಹೆಸರನ್ನು ಬದಲಾಯಿಸಬೇಕಾಗುತ್ತದೆ. ಅದು ಒಂದು ದೊಡ್ಡ ಕಷ್ಟ ಎಂದು ಹೇಳಿದರು. ಅದೇನು ದೊಡ್ಡ ಕಷ್ಟವಲ್ಲ. ಒಂದು ಹಾಳೆ ಇರತಕ್ಕ ಒಂದು ಮಸೂದೆಯನ್ನು ತೆಗೆದುಕೊಂಡು ಬಂದು ಎಲ್ಲೆಲ್ಲಿ ಮೈಸೂರು ಎಂದು ಇದೆಯೋ ಅಲ್ಲೆಲ್ಲಾ ಕರ್ನಾಟಕ ಎಂದು ಸೇರಿಸಬೇಕೆಂದರೆ ಈ ಸಭೆ ಐದು ನಿಮಿಷದಲ್ಲಿ ಒಪ್ಪಬಹುದು. ಡಿಸೆಂಬರ್ 1ನೇ ತಾರೀಖಿನ ದಿವಸ ಈ ಸಭೆ ಯಾವ ನಿರ್ಣಯವನ್ನು ಅಂಗೀಕರಿಸಿತ್ತೋ, ಅದನ್ನು ಅವರು ಮರೆತಿದ್ದಾರೆ. ಅದಕ್ಕೆ ಅವರ ಜ್ಞಾಪಕಕ್ಕಾಗಿ ಓದುತ್ತೇನೆ.

This Assembly is further of opinion that in order to preserve its composite character the new state should continue to be called Mysore State.

ಹೆಸರು 'ಮೈಸೂರು' ಎನ್ನುವುದಕ್ಕೆ ಈ ಸಭೆ ಒಪ್ಪಲು ಮುಖ್ಯ ಕಾರಣವಾದರೂ ಒಂದು ಸಮ್ಮಿಶ್ರ ಸಂಪ್ರದಾಯ ಈ ಸಂಸ್ಥಾನದಲ್ಲಿ ಏನು ಬೆಳೆದುಕೊಂಡು ಬಂದಿದೆಯೋ ಅದನ್ನು ಉಳಿಸುವುದಕ್ಕೆ ಹೆಸರಿನಲ್ಲಿ ಏನಿದೆ? ಯಾವ ಹೆಸರನ್ನಾದರೂ ಇಟ್ಟುಕೊಳ್ಳಬಹುದು ಎಂಬ ವಾದ ಇದಿದ್ದರೆ ನಾನಾದರೂ ಇದಕ್ಕೆ ಇಷ್ಟು ಮಹತ್ವ ಕೊಡುತ್ತಾ ಇರಲಿಲ್ಲ. ಯಾವ ದೇಶದಲ್ಲಿ ಭಾಷೆಯ ಆಧಾರದ ಮೇಲೆ ಯಾವ ಘರ್ಷಣೆಯೂ ಯಾರಲ್ಲೂ ಉಂಟಾಗಲಿಲ್ಲವೋ ಅಂಥ ಒಳ್ಳೆಯ ಪರಿಸ್ಥಿತಿಯನ್ನು ಮುಂದುವರಿಸಿಕೊಂಡು ಬರುವುದು ಶ್ರೇಯಸ್ಕರ ಎನ್ನುವುದು ನಮ್ಮೆಲ್ಲರ ಉದ್ದೇಶ, ಈ ಉದ್ದೇಶವನ್ನು ಉತ್ತರ ಕರ್ನಾಟಕದ ಪ್ರತಿನಿಧಿಗಳಿಗೆ ಪ್ರೀತಿಪೂರ್ವಕವಾಗಿ ವಿವರಿಸಿದರೆ ಅವರು ಒಪ್ಪಿಕೊಳ್ಳುತ್ತಾರೆ ಎಂದು ನಾನು ನಂಬಿದ್ದೇನೆ. ಅನೇಕ ಸಾರಿ ಹೇಳಿದ್ದೇನೆ. ಉತ್ತರ ಕರ್ನಾಟಕದಲ್ಲಿ ಸುಮಾರು 25 ವರ್ಷಗಳ ಕಾಲ ಕರ್ನಾಟಕವಾಗಬೇಕೆಂದು ಹೇಳಿ ಪ್ರಚಾರ ನಡೆಸಿ, ನಡೆಸಿ ಅದು ಬಾಯಿಪಾಠ ಆಗಿ ಹೋಗಿದೆ. ಆ ಬಾಯಿಪಾಠವನ್ನು ಬಿಡಿಸತಕ್ಕದ್ದು ಪ್ರಯಾಸದ ಕೆಲಸ. ಭಾರತೀಯರೆಲ್ಲರೂ ಒಂದೇ ಜನಾಂಗ ಎನ್ನತಕ್ಕ ಮನಸ್ಸನ್ನು ನಾವು ಬೆಳಸಿಕೊಂಡರೆ ಭೇದಗಳಿಗೆ ಅವಕಾಶವಿರುವುದಿಲ್ಲ.

ಶ್ರೀ ವೀರಣ್ಣ ಗೌಡರು ಆಗಾಗ್ಗೆ ಎತ್ತು ಏರಿಗೆ ಎಳೆದರೆ ಎಮ್ಮೆ ನೀರಿಗೆ ಎಳೆಯಿತು. ಎಂದು ಹೇಳುತ್ತಾರೆ. ಉತ್ತರ ಕರ್ನಾಟಕದ ಜನರಾಗಲಿ, ದಕ್ಷಿಣ ಕರ್ನಾಟಕದ ಜನಗಳಾಗಲಿ, ಎತ್ತು ಎಮ್ಮೆಗಳಲ್ಲ ಎಲ್ಲರೂ ಮನಷ್ಯರೇ. ಆದ್ದರಿಂದ ಎತ್ತು ಎಮ್ಮೆಗಳ ಸಾಮ್ಯ ಈ ಸಂದರ್ಭದಲ್ಲಿ ಹೊಂದಿಕೊಳ್ಳುವುದಿಲ್ಲ. ಉತ್ತರ ಕರ್ನಾಟಕದಲ್ಲಿ ಇರತಕ್ಕವರೂ ಭಾರತೀಯರು ಇಲ್ಲಿರತಕ್ಕವರೂ ಭಾರತೀಯರು. ತಮಿಳು ನಾಡಿನಲ್ಲಿರತಕ್ಕವರೂ, ಭಾರತೀಯರು. ಆಂಧ್ರರೂ ಭಾರತೀಯರು. ಇದು ರಾಜ್ಯಾಂಗದಲ್ಲಿ ಅಂಗೀಕಾರವಾಗಿದೆ. ಆದುದರಿಂದ ಇವರೆಲ್ಲರೂ ಒಂದೇ ವರ್ಗಕ್ಕೆ ಅಥವಾ ಜಾತಿಗೆ ಸೇರತಕ್ಕವರು. ಆದುದರಿಂದ ಸಹಬಾಳ್ವಿಕೆ ಸಹಜವಾಗಿಯೇ ಇದೆ. ಎತ್ತಿನ ಪ್ರಶ್ನೆ, ಎಮ್ಮೆಯ ಪ್ರಶ್ನೆ ಇಲ್ಲಿ ಇಲ್ಲ. ನಾನು ಈ ಸಭೆಯ ಅಭಿಪ್ರಾಯವನ್ನು ಇಂಡಿಯಾ ಸರ್ಕಾರಕ್ಕೆ ತಿಳಿಸುವಾಗ ಬರೆದಿರತಕ್ಕ ಕಾಗದದಲ್ಲಿ ಈ ಅಭಿಪ್ರಾಯವನ್ನು ತಿಳಿಸಿದ್ದೇನೆ. ಆದುದರಿಂದ ಹೆಸರಿನಲ್ಲೇನಿದೆ ಎನ್ನತಕ್ಕ ತಾತ್ಸಾರ ಭಾವನೆಯಿಂದ ಈ ಪ್ರಶ್ನೆಯನ್ನು ಬಗೆಹರಿಸುವುದಕ್ಕೆ ಪ್ರಯತ್ನ ಮಾಡಬಾರದು. ಹೆಸರಿನಲ್ಲಿ ಯಾವ ಭಾಷೆಯವರಾಗಲಿ, ಯಾವ ಪ್ರಾಂತ್ಯದವರಾಗಲಿ ಎಲ್ಲರೂ ಇಂಡಿಯಾ ದೇಶದವರೇ ಆಗಿದ್ದಾರೆ. ಎಲ್ಲರೂ ಒಂದುಗೂಡಿ ಸೌಹಾರ್ದದಿಂದ ಬಾಳುವುದಕ್ಕೆ ಅವಕಾಶವಿರಬೇಕು ಎನ್ನತಕ್ಕ ದೊಡ್ಡ ತತ್ವದ ಮೇಲೆ ಈ ಹೆಸರನ್ನು ನಾವು ಒಪ್ಪಿಕೊಂಡಿದ್ದೇವೆ.

ಆದ್ದರಿಂದ ಆ ತತ್ವವನ್ನು ಅಂಗೀಕರಿಸಿರತಕ್ಕ ನಾವೆಲ್ಲರೂ ಕೂಡ ಅದನ್ನು ತಿಳಿಯದೇ ಇರತಕ್ಕವರಿಗೆ ಅರ್ಥವನ್ನು ವಿವರಿಸಿ ಅವರಿಗೆ ತಿಳಿಸಬೇಕಾದದ್ದು ನಮ್ಮ ಕರ್ತವ್ಯ. ಈ ದಿವಸ ಒಂದು ಅಪೇಕ್ಷಣೀಯವಾದ, ಸಂತೋಷಕರವಾದ ವಾತಾವರಣ ಈ ಸಭೆಯಲ್ಲಿ ಉಂಟಾಗಿದೆ ಎಂದು ಶ್ರೀಮಾನ್ ಲಿಂಗಾರೆಡ್ಡಿಯವರು ಹೇಳಿದರು. ಅದು ನಿಜ. ಶ್ರೀಮಾನ್ ಶಿವನಂಜೇಗೌಡರು ನಮ್ಮದು ಒಂದು ವಿಲೀನ ವಿರೋಧ ಸಮಿತಿ ಎಂದು ಇದೆ ಎಂದು ಹೇಳಿದರು. ಅದು ಇತ್ತು. ಅದು ಏನಾಯಿತು ಎಂದರೆ ಡಾ. ಬಿ. ಸಿ. ರಾಯ್ ಮತ್ತು ಸಿನ್ಹರವರು ಎರಡು ಪ್ರಾಂತ್ಯಗಳು ಸೇರಿ ಒಂದಾಗಬೇಕು ಎಂದು ಘೋಷಣೆ ಹೊರಡಿಸಿ ಅದಕ್ಕೆ ವರ್ಕಿಂಗ್ ಕಮಿಟಿಯ ಬೆಂಬಲ ದೊರಕಿ ನೆಹರೂ ಇತ್ಯಾದಿ ಪ್ರಮುಖರು ದೇಶದ ಎಲ್ಲಾ ಕಡೆಗಳಲ್ಲೂ ಆ ಮಾರ್ಗವನ್ನು ಅನುಸರಿಸುವುದು ಉತ್ತಮ ಎಂದು ಹೇಳಿದ ಮೇಲೆ ಈ ವಿಲೀನ ವಿರೋಧ ಸಮಿತಿ ಏನಾಯಿತು ಎಂದರೆ ವಿರೋಧ ಹೊರಟು ಹೋಯಿತು. ಮೈಸೂರು ವಿಲೀನ ಸಮಿತಿ ಆಯಿತು. ಈಗ ಎಲ್ಲಿಗೆ ಬಂದಿದೆ ಎಂದರೆ, ಮೈಸೂರಿಗೆ ಉತ್ತರ ಕರ್ನಾಟಕವೇ ಅಲ್ಲ ಕೇರಳ ಬೇಕಾದರೂ ಸೇರಲಿ, ಆಂಧ್ರ ಬೇಕಾದರೂ ಸೇರಲಿ, ತಮಿಳು ದೇಶ ಬೇಕಾದರೂ ಸೇರಲಿ ಎಂದು ಹೇಳಿ ''ಮೈಸೂರು ಮಹಾವಿಲೀನ ಸಮಿತಿ'' ಆಗಿದೆ. ಯಾವಾಗಲೂ ವಿಲೀನಕ್ಕೆ ಸಿದ್ಧವಾಗಿದ್ದ ನಾವೆಲ್ಲರೂ ಕೂಡ ಅವರ ಮಾರ್ಗವನ್ನು ಒಪ್ಪಿದ್ದೇವೆ. ನಾವು ವಿಲೀನ ಎಂದು ಹೇಳಿದಾಗ ಅದು ಸರಿ, ಮತ್ತೊಬ್ಬರು ವಿಲೀನ ಎಂದು ಹೇಳಿದಾಗ ತಪ್ಪು ಎಂಬ ಗೋಜಿಗೆ ಹೋಗಬಾರದು. ವಿಲೀನದ ಸಾಧ್ಯಾಸಾಧ್ಯತೆಯನ್ನು ಬೇರೆಯಾಗಿ ಪ್ರಸ್ತಾಪ ಮಾಡೋಣ. ಆದರೆ ಯಾವ ವಿಲೀನ ತತ್ವಕ್ಕೆ ಈ ಸಭೆ ಬಹುಮತದ ಒಂದು ನಿರ್ಣಯವನ್ನು ಅಂಗೀಕರಿಸಿತೋ ಅದೇ ರೀತಿ ಮತ್ತೂ ವಿಲೀನವಾದರೆ ಮತ್ತೂ ಸಂತೋಷ ಎನ್ನುವುದನ್ನು ಮನಸ್ಸಿನಲ್ಲಿಟ್ಟುಕೊಂಡು ಅದನ್ನು ಬೇರೆ ಪ್ರಸ್ತಾಪ ಮಾಡೋಣ.

ಜೋನಲ್ ಕೌನ್ಸಿಲ್ ಇತ್ಯಾದಿ ವಿಚಾರಗಳನ್ನು ಪ್ರಸ್ತಾಪ ಮಾಡಿದ್ದಾರೆ. ಅವುಗಳನ್ನು ನಾನು ಈಗ ಪ್ರಸ್ತಾಪ ಮಾಡುವುದಿಲ್ಲ. ಏಕೆಂದರೆ ಈ ವಿಚಾರಗಳಲ್ಲಿ ತಿದ್ದುಪಡಿಗಳು ಬಂದಿವೆ. ನಾನು ಕೂಡ ತಿದ್ದುಪಡಿಗಳನ್ನು ಕಳುಹಿಸಿದ್ದೇನೆ. ತಿದ್ದುಪಡಿಗಳು ಬಂದಾಗ ಆಯಾ ಪ್ರಶ್ನೆಗಳನ್ನು ನಾವು ಪ್ರಸ್ತಾಪ ಮಾಡಬಹುದು.

ಈ ದಿವಸ ಯಾವ ಒಂದು ಮಸೂದೆಯನ್ನು ಮಂಡನೆ ಮಾಡಿ ವಿಮರ್ಶೆಗೆ ಸಭೆಯ ಮುಂದೆ ಇಟ್ಟಿದ್ದೇನೋ ಅದನ್ನು ಸರ್ವಾನುಮತದಿಂದ ಅಂಗೀಕರಿಸಬೇಕೆಂದು ನಾನು ಪ್ರಾರ್ಥನೆ ಮಾಡುತ್ತೇನೆ.

ಸ್ವಾಮಿ, ನಾನು ಈ ನಿರ್ಣಯವನ್ನು ಸಭೆಯ ಪರಿಶೀಲನೆಗೆ ಇಡುವುದಕ್ಕೆ ಅಪ್ಪಣೆ ಬೇಡುತ್ತೇನೆ.

''ಭಾರತದಲ್ಲಿರುವ ಈಗಿನ ಸನ್ನಿವೇಶಗಳಲ್ಲಿ ಬೇರೆ ಬೇರೆ ಪ್ರದೇಶಗಳು ಶೀಘ್ರವಾಗಿ ಅಭಿವೃದ್ಧಿಗೆ ಬರುವುದಕ್ಕಾಗಿಯೂ ಮತ್ತು ಭಾರತದ ಏಕತೆ ಮತ್ತು ಭದ್ರತೆಯನ್ನು ದೃಢಪಡಿಸಿಕೊಳ್ಳುವುದಕ್ಕಾಗಿಯೂ ಎಲ್ಲೆಲ್ಲಿ ಮತ್ತು ಯಾವಾಗ ಸೂಕ್ತವೆಂದು ಕಂಡು ಬರುತ್ತದೆಯೋ ಅಲ್ಲಲ್ಲಿ ಮತ್ತು ಆಗಾಗ ಪ್ರತಿಯೊಂದು ಭಾಷಾವಾರು ಪ್ರದೇಶಕ್ಕೂ ಪ್ರಾದೇಶಿಕ ಕೌನ್ಸಿಲ್ ಸಭೆಯನ್ನೊಳಗೊಂಡ ದ್ವಿಭಾಷಾ ರಾಜ್ಯಗಳನ್ನು ಏರ್ಪಡಿಸುವುದು ಸೂಕ್ತವೆಂದು ಈ ಸಭೆಯವರು ಅಭಿಪ್ರಾಯ ಪಡುತ್ತಾರೆ.''

(ವಿಧಾನ ಸಭೆ ಕಲಾಪ ದಿನಾಂಕ 03-04-1956)

## 6. ಸಾಹಿತ್ಯ ಮತ್ತು ಸಂಸ್ಕೃತಿ

ಆಗಲಿ, ತತ್ವವೆಲ್ಲ ಒಂದೇ ವಿಮರ್ಶೆ ಮಾಡೋಣ, ಆದರೆ ಶ್ರೀಮಾನ್‌ರುದ್ರಪ್ಪನವರು ಪಬ್ಲಿಷ್ ಮಾಡಿರುವುದನ್ನು (ಮುಮ್ಮಡಿ ಕೃಷ್ಣರಾಜ ಒಡೆಯರ ವಾಣಿ ವಿಲಾಸ ಭಾರತದ ಬಗ್ಗೆ) ಹಿಂದೆಯೇ ನಾನು ಓದಿದ್ದೆ. ಅದರ ಭಾಷೆ ಬಹಳ ಹಿಂದಿನ ಭಾಷೆ. ಈಗ ಆಧುನಿಕ ಭಾಷೆಗೆ ಹೊಂದಿಕೊಳ್ಳುವುದಿಲ್ಲ. ಅದಕ್ಕೆ ಬದಲಾಗಿ ಭಾಷೆ ಚೆನ್ನಾಗಿದ್ದು ಆಧುನಿಕ ರೀತಿಯಲ್ಲಿರುವ ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿಗಳು ಬರೆದಿರುವ ಗದ್ಯ ಭಾರತಕ್ಕಿಂತ ಉತ್ತಮವಾದ ಗ್ರಂಥ ಸಿಕ್ಕುವುದಿಲ್ಲ. ಅದು ಈಗಿನ ಸ್ಟ್ಯಾಂಡರ್ಡಿಗೆ ಸರಿಯಾಗಿದೆ. ಅದನ್ನು ಬೇಕಾದರೂ ತೆಗೆದುಕೊಳ್ಳೋಣ, ಈಗ ಗದುಗಿನ ಭಾರತ, ಜೈಮಿನಿ ಭಾರತ ಇವುಗಳ ಬಗ್ಗೆ ಮುಕ್ಕಾಲು ಕೆಲಸವಾಗಿದೆ. ಇದಕ್ಕೆ ಸ್ವಲ್ಪ ಹಣ ಬೇಕಾಗಿದೆ. ಹಾಗೆಯೇ ಭಗವದ್ಗೀತೆ ವಿಚಾರದಲ್ಲಿ ಶ್ರೀಮಾನ್ ಪುಟ್ಟಪ್ಪನವರನ್ನು ಒಂದು ಪುಸ್ತಕ ಬರೆಯುವಂತೆ ಹೇಳಿದ್ದೇವೆ. ಅವರು ಬರೆದ ಮೇಲೆ ಅಚ್ಚು ಹಾಕಿಸಿ ಅದನ್ನು ಹಂಚ ಬೇಕೆಂಬ ಆಸೆಯಿದೆ. ಹೀಗೆ ಸಾಹಿತ್ಯ, ನೀತಿ ಮತ್ತು ಆಧುನಿಕ ವಿಜ್ಞಾನ ಈ ಮೂರು ವಿಷಯಗಳಿಗೆ ಸಂಬಂಧಪಟ್ಟ ಪುಸ್ತಕಗಳನ್ನು ಅಚ್ಚು ಹಾಕಿಸಿ ಹಂಚುವುದಕ್ಕೆ ಅಥವಾ ಮಾರುವುದಕ್ಕೆ ವ್ಯವಸ್ಥೆ ಮಾಡಲು ಮಿಕ್ಕ ಹಣವನ್ನು ಉಪಯೋಗಿಸಬೇಕು. ಒಟ್ಟಿನಲ್ಲಿ ಈ ಸಭೆ ಯಾವ ಅಭಿಪ್ರಾಯವನ್ನು ಹಣದ ಹಂಚಿಕೆ ವಿಷಯದಲ್ಲಿ ಸೂಚಿಸಿದೆಯೋ ಅದನ್ನು ಕಾರ್ಯರೂಪಕ್ಕೆ ತರುವುದಕ್ಕೆ ನಾನಾದರೂ ಸಿದ್ಧವಾಗಿದ್ದೇನೆಂದು ವಿನಯಪೂರ್ವಕವಾಗಿ ಅರಿಕೆ ಮಾಡಿಕೊಳ್ಳುತ್ತೇನೆ.

ಮತ್ತೊಂದು ವಿಷಯ. ಶ್ರೀ ಇಮಾಂರವರು ಮೊಟ್ಟಮೊದಲು ಒಂದು ಸಮಲೋಚನಾ ಸಮಿತಿ ಸೇರಿಸೋಣವೆಂದು ಪ್ರಸ್ತಾಪ ಮಾಡಿದರು. ಅದಕ್ಕೆ ಕೆಲವು ಮಂದಿಯನ್ನು ನಾನು ಅಹ್ವಾನಿಸಿದ್ದೆ. ಅನಂತರ ಒಂದು ಸಮಿತಿ ಮಾಡಿದರು. ಅಡ್ವೈಜರಿ ಕಮಿಟಿಯೊಂದನ್ನು 20-30 ಜನರನ್ನೊಳಗೊಂಡಿರುವಂತೆ ಈ ಇಲಾಖೆಗೆ ಮಾಡಿದರು. ಶ್ರೀ ಇಮಾಂ ಮತ್ತು ಇತರ ಈ ಸಭೆಯ ಸದಸ್ಯರನ್ನು ಆಹ್ವಾನಿಸಿದರು. ಆ ಸಮಿತಿ ಸದಸ್ಯತ್ವ ಅವರು ಒಪ್ಪಲಿಲ್ಲ. ಯಾವ ಮಾನ್ಯ ಸಭಾ ಸದಸ್ಯರು ಆ ಸಮಿತಿ ಬೇಡ, ಅದರ ಸದಸ್ಯತ್ವ ಬೇಡ ಎಂದು ಹೇಳಿದರೋ ಆ ಸಮಿತಿಯನ್ನು ನಾನಾದರೂ ಮುಂದುವರಿಸುವುದು ಉಚಿತವಲ್ಲ. ಆದ್ದರಿಂದ ಸೆಂಟ್ರಲ್ ಅಡ್ವೈಜರಿ ಕಮಿಟಿಯೆಂದೇನಿದೆ ಅದನ್ನು ರದ್ದು ಮಾಡುತ್ತೇನೆ. ಪುನಃ ತಾವೆಲ್ಲಾ ಆಲೋಚಿಸಿ ಪಬ್ಲಿಕೇಷನ್ನಿನ ಮೇಲ್ವಿಚಾರಣೆಗಾಗಿ ಒಂದು ಸಮಿತಿ ಅವಶ್ಯಕವೆಂದು ಹೇಳಿದರೆ ಪುನಃ ರಚಿಸೋಣ. ಇಷ್ಟು ಭರವಸೆಗಳನ್ನು ತಮಗೆ ಕೊಟ್ಟಿದ್ದೇನೆ. ಸಂಸ್ಕೃತಿ ಪ್ರಚಾರದ ಸದುದ್ದೇಶವನ್ನು ತಾಲ್ಲೂಕು ರೂರಲ್ ಡೆವಲಪ್‌ಮೆಂಟ್ ಕಮಿಟಿ ವಹಿಸಿಕೊಂಡರೆ ಅದಕ್ಕೆ ಮತ್ತುಷ್ಟು ಶಕ್ತಿ, ಕಳೆ, ಬೆಂಬಲ ದೊರಕುತ್ತದೆಂಬ ಆಸೆಯಿಂದ ಈ ಕಾರ್ಯಕ್ರಮವನ್ನು ಅನುಸರಿಸುವುದಾಗಿ ಭರವಸೆ ಕೊಟ್ಟಿರುವುದರಿಂದ ಈ ನಿರ್ಣಯವನ್ನು ಮಂಡಿಸಿರುವ ಶ್ರೀಮಾನ್ ಮರಿಯಪ್ಪನವರು ಅದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ.

(ವಿಧಾನ ಸಭೆ ಕಲಾಪ ದಿನಾಂಕ : 5-4-1956)

## 7. ವಿಧಾನ ಸೌಧ ನಿರ್ಮಾಣದ ಬಗ್ಗೆ ವಿವರಣೆ

ಸ್ವಾಮಿ, ಪ್ರತಿಪಕ್ಷದ ನಾಯಕರಾದ ಶ್ರೀಮಾನ್ ಇಮಾಂ ಅವರು ವಿಧಾನ ಸೌಧದ ಪ್ರಸ್ತಾಪವನ್ನು ಮಾಡಿದ ಮೇಲೆ ಅದಕ್ಕೆ ಉತ್ತರ ಕೊಡತಕ್ಕದ್ದು ನನ್ನ ಕರ್ತವ್ಯವಾಯಿತು. ತಾವು ದಯಮಾಡಿ ಕಾಲವನ್ನು ಕೊಟ್ಟದ್ದಕ್ಕಾಗಿ ಕೃತಜ್ಞನಾಗಿದ್ದೇನೆ. ಇಂದು, ಯಾವ ವಿಧಾನ ಸೌಧವನ್ನು ಕಟ್ಟುವುದಕ್ಕೆ ಕಾರಣ ಭೂತ ಎಂದು ಹೇಳಿ ನನ್ನನ್ನು ಕರೆಯುತ್ತಾರೋ, ಇದೇ ಮಂದಿರದಲ್ಲಿ ನಿಂತು ನಾನು ಅಪರಾಧ ಮಾಡಿಲ್ಲ ಎಂಬ ಮೊರೆಯನ್ನು ಈ ಸಭೆಯ ಮುಂದೆ ಇಡತಕ್ಕ ಒಂದು ದೌರ್ಭಾಗ್ಯ ನನಗೆ ಬಂದಿದೆ, ಈ ದೌರ್ಭಾಗ್ಯ ಗ್ರಹಗತಿಯ ಫಲ ಎಂದು ಪುರಾಣದಲ್ಲಿ ಹೇಳುತ್ತಾರೆ. ಅನೇಕರು ಪುರಾಣ ಎಂದು ಹೇಳಿದರೆ ಹಾಸ್ಯ ಮಾಡುತ್ತಾರೆ. ನಾನಾದರೋ ಹಾಸ್ಯ ಮಾಡತಕ್ಕ ಮನೋವೃತ್ತಿಯುಳ್ಳವನಲ್ಲ. ಗ್ರಹಗತಿ ಚೆನ್ನಾಗಿಲ್ಲದೆ ಇರುವಾಗ ಸ್ನೇಹಿತರು ಶತ್ರುಗಳಾಗುತ್ತಾರೆ. ಒಳ್ಳೆಯ

ಕೆಲಸ ಅನೇಕರಿಗೆ ಕೆಟ್ಟದಾಗಿ ಕಾಣುತ್ತದೆ. ಮೊದಲು ತಮಗೆ ಅರಿಕೆ ಮಾಡಿಕೊಳ್ಳುತ್ತೇನೆ. ಸ್ವಾಮಿ, ಹನ್ನೆರಡು ಮಂದಿ ಸದಸ್ಯರು ಎಸ್ಟಿಮೇಟ್ಸ್ ಕಮಿಟಿಯಲ್ಲಿ ಇದ್ದರು. ಆ ಹನ್ನೆರಡು ಮಂದಿಯಲ್ಲಿ ಎಸ್ಟಿಮೇಟ್ಸ್‌ಕಮಿಟಿಯ ವರದಿಗೆ ರುಜು ಮಾಡಿದಾಗ, ನಾನು ತಿಳಿದುಕೊಂಡಿದ್ದೇನೆ. ಈ ಸಭೆಯಲ್ಲೂ ಕೂಡ ಸದಸ್ಯರು ಇದ್ದಾರೆ. ಆರು ಮಂದಿ ಅದನ್ನು ಓದದೆಯೇ ರುಜು ಹಾಕಿದರು. ಅದರಲ್ಲಿ ಕೆಲವರು ಖಾಯಂ ಇದ್ದರು. ಕೆಲವರಿಗೆ ಇಂಗ್ಲೀಷು ಬಾರದು. ಈ ರೀತಿ ಅದು ಪ್ರಾರಂಭವಾದಾಗಲೇ ಯಾರು ನನ್ನ ನಿಜವಾದ ಸ್ನೇಹಿತರೋ ಅವರು ಗ್ರಹಗತಿಯ ದೆಸೆಯಿಂದ ಅದನ್ನು ಓದದೆ ರುಜು ಮಾಡಿ ಈ ಒಂದು ದೊಡ್ಡ ಹುಣ್ಣು ಆಗುವುದಕ್ಕೆ ಅವಕಾಶವಾಯ್ತು.

**ಅಧ್ಯಕ್ಷರು** : ವಾಸ್ತವಾಂಶವೇನೇ ಇರಲಿ, ಅವರು ಓದಿ ತಿಳಿದುಕೊಳ್ಳಲಾರದೆ ರುಜು ಹಾಕಿದರೆಂದು ತಾವು ಹೇಳುವುದು ಅಷ್ಟು ಸರಿಯಲ್ಲ. ಆದ್ದರಿಂದ ತಾವು ಎಸ್ಟಿಮೇಟ್ಸ್ ಸಮಿತಿಯ ವರದಿಯ ಮೇಲಾಗಲಿ ವಿಧಾನ ಸೌಧ ಸಮಿತಿಯ ವರದಿಯ ಮೇಲಾಗಲಿ ಯಾವ ವಿಚಾರದಲ್ಲೇ ಆಗಲಿ ತಮಗೆ ನಿಜವೆಂದು ತೋರುವುದನ್ನು ಹೇಳಬೇಕೇ ಹೊರತು ಸಭಾ ಸದಸ್ಯರ ಮೇಲೆ ಅಥವ ಎಸ್ಟಿಮೇಟ್ಸ್ ಸಮಿತಿ ಸದಸ್ಯರ ಮೇಲೆ ಈ ತರಹ ಅಲಿಗೇಷನ್ ಮಾಡುವುದು ಅಷ್ಟು ಯೋಗ್ಯವಾಗುವುದಿಲ್ಲ.

**ಶ್ರೀ ಕೆ. ಹನುಮಂತಯ್ಯ** : ಚರ್ಚೆ ಮಾಡುವಾಗ ವಿಷಯಗಳನ್ನೆಲ್ಲ ಹೇಳ ಬೇಕಾಗುತ್ತದೆ. ತಾವು ಸಾವಧಾನದಿಂದ ಕೇಳಿದರೆ ಉಪಕಾರ ಮಾಡಿದ ಹಾಗಾಗುತ್ತದೆ. ಈ ದಿವಸ ಎನ್‌ಕ್ವೈರಿ ಕಮಿಟಿ ವರದಿಯೇನಿದೆ ಅದರ ಅಂಶಗಳನ್ನು ಒಂದೊಂದಾಗಿ ಪರಿಶೀಲಿಸುತ್ತೇನೆ. ಮೊದಲು ಸಮಿತಿಯವರು ಮಾಡಿರತಕ್ಕ ದೊಡ್ಡ ಆರೋಪಣೆ ಏನೆಂದರೆ, ಮೊದಲು 50 ಲಕ್ಷ ರೂಪಾಯಿಗಳ ಅಂದಾಜಿತ್ತು. ಅನಂತರ 130 ಲಕ್ಷಕ್ಕೇರಿತ್ತು ಈಗ 160 ಅಥವಾ 180 ಲಕ್ಷ ರೂಪಾಯಿಗಳವರೆಗೆ ಹೋಗಬಹುದು ಎಂದು. ಅದು ವಾಸ್ತವ. ಈ ದಿವಸ ನಾನು ಈ ಸಭೆಯ ಮುಂದಿಡತಕ್ಕ ದೃಷ್ಟಿಯಿದು ಈ ಸಮಿತಿಯವರೇನು ವರದಿ ಕೊಟ್ಟಿದ್ದಾರೋ ಅದು ಏಕ ದೃಷ್ಟಿ ಮಾತ್ರ ಇಟ್ಟುಕೊಂಡು ಕೊಟ್ಟಿರತಕ್ಕದ್ದು. ಎಲ್ಲ ವಿಷಯಗಳನ್ನು ಗಮನಕ್ಕೆ ತೆಗೆದುಕೊಂಡು ನಿಷ್ಪಕ್ಷಪಾತವಾಗಿ ಬರೆದ ವರದಿಯಲ್ಲ. ಈ ರೀತಿ ಪಿ.ಡಬ್ಲ್ಯು.ಡಿ. ಇಲಾಖೆಯಲ್ಲಾ ಮಾಡಿದ ಅಂದಾಜುಗಳನ್ನು ಮೀರಿ ಖರ್ಚಾಗಿರತಕ್ಕ ಸಂದರ್ಭಗಳು ಈ ದಿವಸ ಅನೇಕವಾಗಿವೆ ಈ ವಿಧಾನ ಸೌಧದ ವಿಚಾರದಲ್ಲಿ ಮಾತ್ರ ಹೀಗಾಗಿಲ್ಲ. ಬಹುಶಃ ಪಿ.ಡಬ್ಲ್ಯೂ. ಇಲಾಖೆ ಮೈಸೂರು

ದೇಶದಲ್ಲಿ ಎಂದು ಹುಟ್ಟಿತೋ ಅಂದಿನಿಂದಲೂ ಇಂತಹದು ನಡೆದು ಕೊಂಡುಬಂದಿದೆ. ಇದು ಒಂದು ಅಪರಾಧವೂ, ಒಂದು ನ್ಯಾಯವೂ ಆಗಿದೆ. ನನ್ನ ಮಾನ್ಯ ಸ್ನೇಹಿತರಾದ ಶ್ರೀ ಕೆ. ಪಟ್ಟಾಭಿರಾಮನ್ ಅವರು ಸದಸ್ಯರಾಗಿದ್ದ ಒಂದು ಸಮಿತಿಯವರು ಶ್ರೀ ಮಾಧವರಾಯರ ಅಧ್ಯಕ್ಷತೆಯಲ್ಲಿ ನೇಮಿಕವಾಗಿದ್ದ ಮೈಸೂರು ಫೈನಾನ್ಸ್ ಎನಕ್ವೈರಿ ಕಮಿಟಿಯವರು ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದಾರೆ. 95ನೆಯ ಪುಟದಲ್ಲಿ ಅವರು ಹೀಗೆ ಹೇಳಿದ್ದಾರೆ :

``The preparation of works estimates has become notoriously perfunctory when the relative scheme, after years of incubation comes within the range of active consideration, the old estimates are dished up and sanction accorded in a hurry. Before work is started no serious attempt is made to verify the original date, to bring the rates to current levels or to compute realistically the cost of items for which provision had been made on a rough and ready bassionher the schemes had been only a distant possibility. Subsidiary works even those of an essential character are left out, to be included later in a separate estimate as for a new work. As a result of this projects large and small have been undertaken without any idea at the outset of the commitments involved. In the case of the irrigation works moreover the investigations and formalities enjoined by [illegible] are not attended to a neglect which might lead to serious embarrassment in determining [illegible] rates, [illegible] of [illegible], contribution etc.,

Several works for which estimates were prepared long ago have had to be revised more than once with a doubling or even trebling of the originally estimated cost. This is due mainly to lack of care in preparing the original estimates, partly also to

delays in the execution of works as a result of which much avoidable expenditure has been incurred."

ಹೀಗೆ ಹಿಂದೆ ಬಹಳ ವರ್ಷಗಳಿಂದಲೂ ನಡೆದಿರತಕ್ಕ ಕಾಮಗಾರಿಗಳ ವಿಷಯ ಈ ರೀತಿಯಾಗಿದೆಯೆಂದು ಅವರು ಅಭಿಪ್ರಾಯ ನೀಡಿದ್ದಾರೆ. ಈ ಅಭಿಪ್ರಾಯವನ್ನು ಮಾತ್ರ ಸೂಚಿಸಿ ಇತರ ಅಂಕಿ ಅಂಶ ಕೊಡದಿದ್ದರೆ ಅಷ್ಟು ಉಪಯೋಗವಾಗುವುದಿಲ್ಲ. ಸಮಿತಿಯವರು ಒಂದು ಕಡೆ ಹೀಗೆ ಹೇಳಿದ್ದಾರೆ :

``The Bhadra reservoir project Administrative Sanction was accorded to this project in November 1946. The estimated cost being Rs. 888.48 lakhs. The cost of labour and materials also went up, consequently the estimate was revised to Rs. 17.75 crores."

ಮೊದಲು ಸುಮಾರು ಒಂಬತ್ತು ಕೋಟಿ ರೂಪಾಯಿಗಳಿಗೆ ಅಂದಾಜಾಗಿದ್ದು ಆಮೇಲೆ ಅದು 17 ಕೋಟಿಯವರೆಗೂ ಏರಿತು ಇನ್ನೂ ಈ ಕೆಲಸ ನಡೆಯುತ್ತಿದೆ. ಈಗಾಗಲೇ ಈ ಕೆಲಸದ ಅಂದಾಜು ಎರಡರಷ್ಟಕ್ಕೆ ಮೀರಿ ಹೋಗಿದೆ. ಹಾಗೆಯೇ ತುಂಗಾ ಪ್ರಾಜೆಕ್ಟ್

``The Tunga Anicut project"

This project was sanctioned in the year 1946, the estimated cost being Rs. 70 Lakhs. Subsequently, the estimate has been revised to Rs. 232 lakhs.``

70 ಲಕ್ಷವಿದ್ದುದು 232 ಲಕ್ಷಕ್ಕೆ ರಿವೈಜ್ ಆಗಿದೆ. ಇನ್ನು ನುಗು ಪ್ರಾಜೆಕ್ಟ್ ನೋಡೋಣ.

"Nugu Project :- This was also sanctioned in the year 1946 at an estimated cost of Rs. 81 lakhs to irrigate an area of 20,000 acres.... subsequently the design was revised mainly on account of the increased cost of labour and materials, the revised estimate went up to Rs. 224 lakhs.

ಈ ಮೂರು ಉದಾಹರಣೆಗಳಲ್ಲದೆ, ಈ ಸಮಿತಿಯವರು ಮೈಸೂರು ದೇಶದಲ್ಲಿ ಕನ್ನಂಬಾಡಿಕಟ್ಟೆ, ಕೃಷ್ಣರಾಜ ಸಾಗರ ರಿಸರ್ವಾಯರ್ ಎಂದೇನು ಹೇಳುತ್ತಾರೋ ಅದನ್ನು ಪರಿಶೀಲಿಸಬೇಕಾಗಿತ್ತು. ಈ ರಿಸರ್ವಾಯರ್ ಕಟ್ಟಿದಾಗಿನಿಂದ ಸುಮಾರು 50 ವರ್ಷಗಳವರೆಗೆ ನಡೆದಿರುವ ಪ್ರಾಜೆಕ್ಟ್‌ಗಳನ್ನೆಲ್ಲಾ ದೃಷ್ಟಿಯಲ್ಲಿಟ್ಟು ನೋಡಿದರೆ ಕೊನೆಗೆ ಒಂದಕ್ಕೆ ಎರಡರಷ್ಟಾಗುವುದಲ್ಲದೆ ಅದಕ್ಕಿಂತಲೂ ಮೀರಿ ಎಸ್ಟಿಮೇಟಿಗಿಂತ ಹೆಚ್ಚಾಗಿ ಖರ್ಚಾಗಿರುವುದು ಕಂಡುಬರುತ್ತದೆ. ಈ ಒಂದು ಅಪರಾಧವೇನಾಗಿದೆಯೆಂದು ಕೆಲವರು ಪರಿಗಣಿಸಿದ್ದಾರೋ ಅದು ಮೈಸೂರು ಸಂಸ್ಥಾನಕ್ಕೆ ಮಾತ್ರ ಅನ್ವಯಿಸತಕ್ಕದ್ದಲ್ಲ. ಮೊದಲನೆಯ ಪಂಚಾವಾರ್ಷಿಕ ಯೋಜನೆಯಲ್ಲಿ ಭಾಕ್ರ ನಂಗಲ್, ಹಿರಾಕುಡ್ ಇಂಥ ದೊಡ್ಡ ದೊಡ್ಡ ಜಲಾಶಯಗಳಿಗಾಗಿ ಏನು ಎಸ್ಟಿಮೇಟ್ ಆಗಿತ್ತೋ ಅದು ರಿವೈಜ್ ಆಗಿ ಒಂದಕ್ಕೆ ಎರಡರಷ್ಟಾಗಿ ಅನೇಕ ವೇಳೆ ಮೂರರಷ್ಟು ಆಗಿ, ಕೆಲಸ ನಡೆದಿದೆ. ಭಾಕ್ರ ನಂಗಲ್ ಪ್ರಾಜೆಕ್ಟ್‌ನ ಅಂಕಿ ಅಂಶ ಈ ದಿವಸ ನನ್ನ ಹತ್ತಿರ ಇಲ್ಲ. ಆದರೆ ಅದನ್ನು ಓದಿ ತಿಳಿದುಕೊಂಡಿದ್ದೇನೆ. ಮೊದಲು ಸುಮಾರು 100 ಕೋಟಿಗಳಿಗೆ ಅಂದಾಜಾಗಿದ್ದುದು 200-250 ಕೋಟಿ ರೂಪಾಯಿಗಳಿಗೇರಿದೆ. ಇಂಡಿಯಾ ದೇಶದಲ್ಲಿ ಎಲ್ಲೆಲ್ಲಿ ಪಿ.ಡಬ್ಲ್ಯೂ ಇಲಾಖೆಯಿದೆಯೋ ಅಲ್ಲೆಲ್ಲಾ ಮೊಟ್ಟಮೊದಲು ಅಂದಾಜೇನು ಮಾಡಿದ್ದರೋ ಅದು ಪ್ರಾಜೆಕ್ಟ್ ಮುಗಿಯುವವರೆಗೆ ಈ ರೀತಿ ಅಧಿಕವಾಗಿದೆ. ಹೀಗೆ ಇಂಡಿಯಾ ದೇಶಕ್ಕೆಲ್ಲ ಅನ್ವಯಿಸತಕ್ಕ ಏನೊಂದು ಅಪರಾಧವಿದೆಯೋ ಅದನ್ನು ವಿಧಾನ ಸೌಧದ ವಿಚಾರದಲ್ಲಿ ಮಾತ್ರ ಅನ್ವಯಿಸಿ ಉತ್ಪ್ರೇಕ್ಷೆಮಾಡಿ ಒಂದೇ ದೃಷ್ಟಿಯಿಂದ ವರದಿ ಕೊಡುವುದು ಸತ್ಯಕ್ಕೆ ನ್ಯಾಯಕ್ಕೆ ಅನುಗುಣವಾಗಿಲ್ಲ. ಅಕೌಂಟ್ಸ್ ವಿಚಾರ ಇಷ್ಟು. ಈ ಮೈಸೂರು ದೇಶದಲ್ಲಿ ಎಷ್ಟು ಪ್ರಾಜೆಕ್ಟ್‌ಗಳು ಇದುವರೆಗೆ ಕಟ್ಟಲ್ಪಟ್ಟಿವೆಯೋ ಅಷ್ಟು ಪ್ರಾಜೆಕ್ಟ್‌ಗಳ ವಿಚಾರದಲ್ಲಿ ಕೂಡ ವಿಧಾನ ಸೌಧದ ವಿಚಾರದಲ್ಲಿ ಮಾಡಿರುವ ಒಂದು ಆರೋಪಣೆಯೇ ಅನ್ವಯಿಸುತ್ತದೆ. ಈ ಅಪರಾಧಕ್ಕೆ ಏನು ಕಾರಣವೆಂಬುದನ್ನು ಪ್ರತ್ಯೇಕವಾಗಿ ಪ್ರಸ್ತಾಪಿಸಿ ಬಹುದಾಗಿತ್ತು. ವಿಚಾರಣಾ ಸಮಿತಿಯವರು ಈ ಒಂದು ವಿಷಯವನ್ನು ಪ್ರಸ್ಥಾಪಿಸಿ ಅದಕ್ಕೆ ಏನೇನೋ ಕಾರಣಗಳನ್ನು ಕೊಟ್ಟಿದ್ದಾರೆ. ವಿಧಾನ ಸೌಧದ ಕಟ್ಟಡಕ್ಕೆ ಸಂಬಂಧಪಟ್ಟ ಎಲ್ಲ ಅಕೌಂಟುಗಳಲ್ಲೂ ಮೊದಲು ಇದ್ದಂಥ ಎಸ್ಟಿಮೇಟಿಗಿಂತ ಹೆಚ್ಚಾಗಿ ಖರ್ಚು ಆಗಿದ್ದರೂ ಯಾವುದೇ ಅಕೌಂಟು ಅಪ್‌ಟುಡೇಟಾಗಿ ಇಡಲ್ಪಟ್ಟಿಲ್ಲವೆಂದು ಹೇಳಿದ್ದಾರೆ. ಪ್ರತಿಯೊಂದು ಪ್ರಾಜೆಕ್ಟಿನಲ್ಲೂ ಅದು ಕಾರ್ಯಗತವಾಗುವ ಮುಂಚೆ ಈ ರೀತಿ ಆಗುತ್ತಿದೆ ಎಂಬುದನ್ನು ಸಭೆಯ ಗಮನಕ್ಕೆ ನಾನು ತರುತ್ತಲೇ ಇದ್ದೆನು. ಇಂತಹ ಪ್ರಾಜೆಕ್ಟಿನಲ್ಲಿ ಇಷ್ಟಿಷ್ಟು ಎಸ್ಟಿಮೇಟಿಗಿಂತ ಹೆಚ್ಚು ಖರ್ಚು ಆಗಿದೆ. ಅಕೌಂಟು ಈ ರೀತಿಯಾಗಿ ಇವೆ ಎಂದು ಒಂದು ಕಂಪೆರೇಟಿವ್

ಸ್ಟೇಟ್‌ಮೆಂಟ್‌ನ್ನು ಕೊಟ್ಟು ನಿಷ್ಪಕ್ಷಪಾತವಾಗಿರುವ ಒಂದು ಚಿತ್ರವನ್ನು ಜನತೆಯ ಮುಂದೆ ಇಟ್ಟಿದ್ದರೆ. ಅದು ಸೌಜನ್ಯದಿಂದ ಕೂಡಿದ ಸತ್ಯ ಮಾರ್ಗಕ್ಕೆ ಅನುಗುಣವಾಗುತ್ತಿತ್ತು. ವಿಧಾನ ಸೌಧ ಕಟ್ಟಡ ಕಟ್ಟುವಂಥ ಮಹಾ ಅಪರಾಧ ಮಾಡಬಾರದಾಗಿತ್ತು ಎನ್ನುವಂತಹ ಒಂದು ಚಿತ್ರವನ್ನು ವರದಿಯಲ್ಲಿ ಚಿತ್ರಿಸಿ ಎಲ್ಲರ ಮುಂದೆ ಇಟ್ಟಿದ್ದಾರೆ. ವಿಧಾನ ಸೌಧದ ಕಾರ್ಯವನ್ನು ಕೈಗೊಳ್ಳುವ ಮೊದಲು ಇದನ್ನು ಕಟ್ಟಿಸಬೇಕೆಂಬ ಬಗ್ಗೆ ಯೋಜನೆ ಬಂದಾಗ ನಾನು ಶಾಸನ ಸಭೆಯಲ್ಲಿ ಈ ಕಟ್ಟಡ ಕಟ್ಟಿಸುವ ಸ್ಥಳ, ಅದರ ಪ್ರಮಾಣ, ಅದರ ಸೌಂದರ್ಯ ಮುಂತಾದವುಗಳ ಬಗ್ಗೆ ಪ್ರಸ್ತಾಪ ಮಾಡಿದ್ದೇನೆ. ಅದಕ್ಕೆ ಈ ಶಾಸನ ಸಭೆಯು ಪದೇ ಪದೇ ಬಡ್ಜೆಟ್ಟಿಗೆ ತನ್ನ ಒಪ್ಪಿಗೆಯನ್ನು ಕೊಟ್ಟಿದೆ. ವಿರೋಧ ಪಕ್ಷದ ನಾಯಕರಾದ ಶ್ರೀ ಇಮಾಮ್ ಸಾಹೇಬರು ಯಾವುದಕ್ಕೂ ಒಪ್ಪಿಗೆ ಕೊಡುತ್ತಿರಲಿಲ್ಲ. ವಿರೋಧ ಪಕ್ಷದವರ ದೃಷ್ಟಿ ಬೇರೆ ರೀತಿಯಾಗಿರುವುದೇ ಇದಕ್ಕೆ ಕಾರಣ, ದೋಷಗಳನ್ನೇ ಎಣಿಸಬೇಕೆಂದಿರುವಾಗ ನ್ಯಾಯವಾದ ಬಗ್ಗೆ ಹೆಚ್ಚು ವಿವರಗಳನ್ನು ಕೊಡುವುದಕ್ಕೆ ಆಗುವುದಿಲ್ಲ. ಈಗ ಪ್ರಜಾ ಪ್ರಭುತ್ವದ ದಿವಸ ಪ್ರಜಾಪ್ರಭುತ್ವದ ಪ್ರಕಾರ ಯಾವುದೇ ಏನೇ ಪ್ರಶ್ನೆ ಇದ್ದರೂ ಕೂಡ ಅದನ್ನು ನಿರ್ಧರಿಸುವ ಹಕ್ಕು ಜನಗಳಿಗೆ ಸೇರಿದೆ ಎಂಬುದು ಸ್ಪಷ್ಟವಾಗಿ ಇದೆ. ಕಳೆದ ಐದು ವರ್ಷಗಳಲ್ಲಿ ಈ ಸಭೆಯು ಯಾವ ಯಾವ ಕಾರ್ಯಕಲಾಪಗಳನ್ನು ನಡೆಸಿದೆಯೋ ಅದಕ್ಕೆಲ್ಲಾ ಒಪ್ಪಿಗೆ ಕೊಟ್ಟಿದೆ. ಇದನ್ನು ಟೀಕಿಸುವುದರಲ್ಲಿ ಏನೂ ಪ್ರಯೋಜನವಿಲ್ಲ. ಇನ್ನು ಲೆಕ್ಕದ ವಿಚಾರದಲ್ಲಿ ಎರಡು ಮಾತುಗಳನ್ನು ಹೇಳುತ್ತೇನೆ. ಅಕೌಂಟ್ಸ್ ವಿಷಯದಲ್ಲಿ ತಪ್ಪುಗಳು ಆಗಬಹುದು. ಸ್ಪೆಷಲ್ ಇಂಜಿನಿಯರ್, ಚೀಫ್ ಇಂಜಿನಿಯರ್ ಇವರುಗಳು ಎಷ್ಟೇ ಸಿಬ್ಬಂದಿಯನ್ನು ಕೇಳಿದರೂ ಅದನ್ನು ಕೊಡುವ ಮನಸ್ಸು ಸರ್ಕಾರಕ್ಕೆ ಇತ್ತು. ಅವರು ಕೇಳಿದ ಎಲ್ಲ ಸಿಬ್ಬಂದಿಯನ್ನು ಕೊಡುತ್ತಾ ಬಂದರೂ ಹೆಚ್ಚು ಸಿಬ್ಬಂದಿಯನ್ನು ಲೆಕ್ಕ ಬರೆಯಲು ಕೇಳಬೇಕೆಂಬುದು ಅವರ ಗಮನಕ್ಕೆ ಬರಲಿಲ್ಲವೆಂದು ಕಾಣುತ್ತದೆ. ನನ್ನ ಗಮನಕ್ಕೂ ಸಹ ಬರಲಿಲ್ಲ. ಇದನ್ನು ಯಾರೂ ನಿರೀಕ್ಷಿಸಿರಲಿಲ್ಲ. ಗವರ್ನಮೆಂಟ್ ರೂಲ್ಸ್ ಪ್ರಕಾರ ಒಂದು ಡಿವಿಜನ್ನಿಗೆ ಎಷ್ಟು ಸಿಬ್ಬಂದಿ ಕೊಡುತ್ತಾರೆಯೋ ಅಷ್ಟು ಸಿಬ್ಬಂದಿಯನ್ನು ಇಟ್ಟು ಕೊಂಡು ಕೆಲಸ ಮಾಡುತ್ತಿದ್ದವು. ಅಕೌಂಟ್ಸ್ ವಿಷಯವನ್ನು ಇಡುವುದಕ್ಕೆ ಇಷ್ಟು ಸಿಬ್ಬಂದಿಯು ಸಾಕಾದಷ್ಟು ಆಗುವುದೆಂದು ಭಾವಿಸಲಾಗಿತ್ತು. ಅಕೌಂಟೆಂಟ್ ಜನರಲ್ಲರು ಲೆಕ್ಕಪತ್ರಗಳನ್ನು [illegible] ಮಾಡಿ[illegible] [illegible] ಇನ್ನು ಹೆಚ್ಚು ವಿವರಗಳನ್ನು ಇಡಬೇಕೆಂದು ಸೂಚಿಸಿದರೂ ಅಷ್ಟನ್ನು ಇಡುವುದಕ್ಕೆ ಹೆಚ್ಚಿನ ಸಿಬ್ಬಂದಿಯನ್ನು ತಕ್ಷಣ ಸರ್ಕಾರವು ಮಂಜೂರು ಮಾಡಿದೆ. ನನಗೂ ಹಾಗೆಯೇ ಎನಿಸಿದ್ದರಿಂದ ಅಕೌಂಟೆಂಟ್ ಜನರಲ್ಲರು ಸಿಬ್ಬಂದಿ ಹೆಚ್ಚು ಬೇಕು

ಎಂದು ಸೂಚಿಸಿದಾಗ ಸ್ಪೆಷಲ್ ಇಂಜಿನಿಯರ್‌ರು ಅಷ್ಟು ಬೇಕು ಎಂದು ಯಾವಾಗ ಕೇಳಿದರೋ ಆಗ ಅಷ್ಟು ಕೊಟ್ಟಿದೆ. ಇದು ನನ್ನ ಅಪರಾಧವು ಅಲ್ಲ. ಸರ್ಕಾರದ ಅಪರಾಧವೂ ಅಲ್ಲ. ಅಕೌಂಟ್ಸ್ ವಿಷಯದ ಬಗ್ಗೆ ಇಷ್ಟು ಮಾತ್ರ ನಾನು ಹೇಳ ಬಲ್ಲೆ. ಏನೂ ಅನ್ಯಾಯ ಆಗಿಲ್ಲ. ಅಚಾತುರ್ಯವು ನಡೆದಿಲ್ಲ. ಅಕೌಂಟ್ಸ್ ಸ್ಟಾಫಿನಲ್ಲಿ ಟ್ರೇನ್ಡ್ ಮತ್ತು ಎಕ್ಸ್‌ಪಿರಿಯನ್ಸ್ ಆದವರು ಇರಲಿಲ್ಲ. ಲೆಕ್ಕ ಪತ್ರಗಳಲ್ಲಿ ಏನೂ ಅನ್ಯಾಯವಾಗಿಲ್ಲ, ಬಹುಮಟ್ಟಿಗೆ ಇದಕ್ಕೆಲ್ಲ ಪರಿಸ್ಥಿತಿಯೇ ಕಾರಣ, ಲೆಕ್ಕವನ್ನು ಒಂದೇ ಪುಸ್ತಕದಲ್ಲಿ ಬರೆದಿಲ್ಲ. ರಿಜಿಸ್ಟರುಗಳನ್ನು ಅಪ್-ಟು-ಡೇಟಾಗಿ ಇಟ್ಟಿಲ್ಲ. ಖರ್ಚು ಮಾಡಿದ ಹಣಕ್ಕೆ ಏನೇನು ಓಚರ್ಸ್ ರಸೀತಿಗಳು ಇರಬೇಕೋ ಅವೆಲ್ಲಾ ಇವೆ. ಅವೆಲ್ಲವುಗಳನ್ನು ಸರಿಯಾದ ಪದ್ಧತಿಯಲ್ಲಿ ಅಪ್-ಟು-ಡೇಟಾಗಿ ಪುಸ್ತಕದಲ್ಲಿ ಬರೆಯುವುದಕ್ಕೆ ಸ್ವಲ್ಪ ನಿಧಾನವಾಗುತ್ತದೆ ಅನಂತರ ನೋಡಿದರೆ ಗೊತ್ತಾಗುವುದು. ಈಗ ಲೆಕ್ಕ ಬರೆಯುವ ಕೆಲಸ ನಡೆಯುತ್ತಲಿದೆ. ಸ್ವಲ್ಪ ಕಾಲದಲ್ಲಿ ವಾಲ್ಲ ಲೆಕ್ಕಗಳೂ ಬರೆಯಲ್ಪಟ್ಟ ಮೇಲೆ ಸಮರ್ಪಕವಾಗಿ ಆಗಿದೆ ಎಂಬುದು ಕಂಡು ಬರಬಹುದೆಂದು ನಾನು ನಂಬಿಕೆಯನ್ನು ಇಟ್ಟುಕೊಂಡಿದ್ದೇನೆ. ಅಕೌಂಟ್ಸ್ ಸರಿಯಾಗಿಲ್ಲ ಎಂಬ ಆಕ್ಷೇಪಣೆಯನ್ನು ಸಮಿತಿಯವರು ಎತ್ತಿದ್ದಾರೆ. ಅಕೌಂಟ್ಸ್‌ನಲ್ಲಿ ಖರ್ಚು ಆದದ್ದು ಸರಿಯಾಗಿ ಇದೆಯೋ ಇಲ್ಲವೋ ಎಂಬುದನ್ನು ವಿಚಾರ ಮಾಡದೆ ತಮ್ಮ ವ್ಯಾಪ್ತಿಗೆ ಬಾರದೆ ಇದ್ದ ಮಿಕ್ಕ ಎಲ್ಲ ಕೆಲಸಗಳನ್ನು ಮಾಡಿದ್ದಾರೆ. It is outside the scope of the committee. Any impartial member who reads the report will find that they have done anything other than what was entrusted to them.

ಏಳು ಎಂಟು ಪಟ್ಟಿಗಳನ್ನು ಹಾಕಿ ಎಂಟು ಹತ್ತು ನ್ಯೂನತೆಗಳನ್ನು ಹೇಳಿದ್ದಾರೆ. ಅವುಗಳನ್ನು ಕಂಡು ಹಿಡಿಯುವ ಪ್ರಯತ್ನಕ್ಕೆ ಹೋಗಲಿಲ್ಲ. ಅಕೌಂಟೆಂಟ್ಸ್ ಜನರಲ್ ಅವರು ಕಂಡುಹಿಡಿದು ಕೊಟ್ಟಿರುವ ಪಟ್ಟಿಯನ್ನೇ ಪುನಃ ಸಮಿತಿಯವರು reproduce ಮಾಡಿದ್ದಾರೆ. ಈ ಕೆಲಸವು ದಕ್ಷತೆಯಿಂದಲೂ ಪ್ರಾಮಾಣಿಕತೆಯಿಂದಲೂ ನಡೆದಿದೆ ಎಂಬುದು ಇಡೀ ಪ್ರಪಂಚಕ್ಕೆ ಸ್ಪಷ್ಟವಾಗಿದೆ. ಈ ಲೆಕ್ಕದ ವಿಚಾರದಲ್ಲಿ ಏನಾದರೂ ತಪ್ಪು ಇದೆಯೋ ಪ್ರತಿಯೊಂದು ಐಟೆಮ್ಮನ್ನೂ ನೋಡಿ ಪರಿಶೀಲಿಸಿ ಅದು ಸರಿಯಾಗಿ ನಮೂದು ಆಗಿದೆಯೇ ಎಂಬುದನ್ನು *ಮಾಡಿಲ್ಲ; ಯಾವ ಶ್ರಮವನ್ನು ವಹಿಸದೆ* ಅಕೌಂಟೆಂಟ್ ಜನರಲ್ಲರು ಬರೆದದ್ದನ್ನು ಕಾಪಿ ಮಾಡಿದ್ದಾರೆ, ಲೆಕ್ಕದಲ್ಲಿ ಏನಾದರೂ ಹಣದ ಛಪಾವಣಿಯು mis-appropration ಆಗಿದೆಯೇ

760-9

ದುರ್ವಿನಿಯೋಗವಾಗಿದೆಯೇ ನ್ಯೂನಾತಿರಿಕ್ತಗಳು ಇವೆಯೇ ಎಂಬುದನ್ನು ಕಂಡು ಹಿಡಿಯಲು ರಿಟೈಯರ್ಡ್ ಹೈ ಕೋರ್ಟ್ ನ್ಯಾಯಧೀಶರೊಬ್ಬರನ್ನು ಈ ಸಮಿತಿಯ ಚೇರ್‌ಮೆನ್ನರನ್ನಾಗಿ ನೇಮಿಸಲಾಯಿತು. ಏಕೆಂದರೆ ತಪ್ಪುಗಳನ್ನು ಕಂಡುಹಿಡಿಯುವುದೇ ಅವರ ಕಸಬು, ಆ ಸಮಿತಿಯ ಮೇಲೆ ಫೈನಾನ್ಸಿಯಲ್ ಎಕ್ಸಪರ್ಟ್ ಆದವರು ಒಬ್ಬರು ಮತ್ತು ಎಂಜಿನಿಯರಾದವರೂ ಒಬ್ಬರು ಹೀಗೆ ಮತ್ತೆ ಇಬ್ಬರು ಸದಸ್ಯರನ್ನು ನೇಮಿಸಲಾಯಿತು. ಇಂತಹ ಅಪಾದನೆಗಳನ್ನು ಹೊರಿಸುವುದಕ್ಕಾಗಿ ಈ ಸಮಿತಿಯನ್ನು ನೇಮಿಸಲಿಲ್ಲ. ಸಮಿತಿಯು ತಮ್ಮ ಎಲ್ಲೆ ಮೀರಿ ಕಾರ್ಯವನ್ನು ಮಾಡಿದೆ.

ಈ ವಿಧಾನ ಸೌಧದ ಕಟ್ಟಡ ಬಹಳ ದೊಡ್ಡದಾಗಿದೆ ಎನ್ನತಕ್ಕ ವಿಷಯವನ್ನು ಪ್ರಸ್ತಾಪ ಮಾಡಿದ್ದಾರೆ. ಮತ್ತು ಇಷ್ಟು ದೊಡ್ಡ ಬಿಲ್ಡಿಂಗ್ ಅವಶ್ಯಕವಾಗಿತ್ತೆ ಎಂದು ಪ್ರಶ್ನಿಸಿದ್ದಾರೆ, ಇಷ್ಟು ದೊಡ್ಡದಾಗಿರತಕ್ಕ ಕಟ್ಟಡವನ್ನು ಏಕೆ ಕಟ್ಟಬೇಕಾಗಿತ್ತು. ಇದು ಅನಾವಶ್ಯಕವಾಗಿತ್ತು, ಎನ್ನುವುದು ಇನ್ನೊಂದು ವಿಷಯ, ಈಗ ಕಟ್ಟಡದಲ್ಲಿ ಕಣ್ಣಿಟ್ಟು ನೋಡಿದರೆ, ಯಾವ ಭಾಗದ ಕಟ್ಟಡವೂ ಉಪಯೋಗವಾಗದೆ ಖಾಲಿ ಬಿದ್ದಿಲ್ಲ. ಇದರ ಜೊತೆಗೆ ಇನ್ನೂ ಕೆಲವು ಆಫೀಸುಗಳು ಬಾಡಿಗೆ ಮನೆಯಲ್ಲಿಯೇ ಇರಬೇಕಾಗಿ ಬಂದಿದೆ. ಇದರಿಂದ ನಮ್ಮ ಆವಶ್ಯಕತೆಗಳು ಸ್ವಯಂ ವೇದ್ಯವಾಗಿವೆ. ಇಂತಹ ಒಂದು ಕಟ್ಟಡ ಕಟ್ಟಿದ ಮಾತ್ರಕ್ಕೆ ಆರೋಪಣೆ ಮಾಡದೆ, ವಾಸ್ತವಾಂಶಗಳನ್ನು ಪರಿಶೀಲಿಸಿ ಕಣ್ಣಿನಿಂದ ನೋಡಿ ಅಭಿಪ್ರಾಯವನ್ನು ಕೊಡಬೇಕು. ಈ ಬಿಲ್ಡಿಂಗ್ ಇನ್ನೂ ಉತ್ತರಕ್ಕೆ ಇರಬೇಕಾಗಿತ್ತು ಎಂದು ಕೂಡ ಅವರು ಹೇಳುತ್ತಿದ್ದಾರೆ. ಈ ಕಟ್ಟಡವನ್ನು ಇಲ್ಲಿಯೇ ಕಟ್ಟುವುದಕ್ಕೆ ಮುಖ್ಯವಾಗಿ ಎರಡು ಕಾರಣಗಳಿವೆ, ಮೊದಲನೆಯದು ನಮ್ಮ ಪ್ರೈಮ್‌ಮಿನಿಸ್ಟರ್ ಅವರು ಈ ಕಟ್ಟಡಕ್ಕೆ ಆಸ್ತಿ ಭಾರ ಹಾಕಿದ್ದು ಇಲ್ಲಿಯೇ. ಎರಡನೆಯದು ಮುಂದೆಯಿರುವ ಅಠಾರಾ ಕಚೇರಿಗೂ ಮತ್ತು ಈ ಬಿಲ್ಡಿಂಗೂ ಒಂದು ಸಿಮೆಟ್ರಿ ಮಾದರಿಯಲ್ಲಿ ಪದ್ಯದಲ್ಲಿ ಪ್ರಾಸವಿರುವಂತೆ ಕಟ್ಟಿ ಇದರ ಮಧ್ಯೆ ಓಡಾಡುವುದಕ್ಕೆ ರಸ್ತೆಗಳು ಬಂದರೆ ನೋಡುವುದಕ್ಕೆ ಸುಂದರವಾಗಿ ಕಾಣುತ್ತದೆ ಎಂಬುದು. ಮಾನ್ಯ ಸಭೀಕರು ಹೇಳಿದಂತೆ, ಈ ಕಟ್ಟಡವನ್ನು ಇನ್ನೂ ಉತ್ತರಕ್ಕೆ ಹಾಕಿ ಬಿಟ್ಟರೆ ಈಗಿರತಕ್ಕ ರೆಸಿಡೆನ್ಸಿಯನ್ನು ಒಡೆದು ಹಾಕಬೇಕಾಗುತ್ತಿತ್ತು. ಇದರ ಸುತ್ತಲೂ ಓಡಾಡುವುದಕ್ಕೆ ಅನುಕೂಲವಾಗುವ ಹಾಗೆ ರಸ್ತೆಗಳನ್ನು ಮಾಡಬೇಕಾದದ್ದು ಅವಶ್ಯಕವಾಗಿದೆ. ಆದರೆ ರೆಸಿಡೆನ್ಸಿಯನ್ನು ಒಡೆದು ಹಾಕುವುದು ಅಷ್ಟು ಚೆನ್ನಾಗಿರುವುದಿಲ್ಲ ಎಂದು ತಿಳಿದು ಇಲ್ಲಿಯೇ ಕಟ್ಟಲಾಯಿತು, ಇಷ್ಟು ಸುಲಭವಾಗಿರುವುದನ್ನು ಅರ್ಥ ಮಾಡಿಕೊಳ್ಳದೇ ಏನೋ ಒಂದು ರೀತಿಯ ದೊಡ್ಡ ಆರೋಪಣೆಯನ್ನು ಮಾಡಿದ್ದಾರೆ. ಸಮಿತಿಯವರು

ಯಾವುದನ್ನು ಪರಿಶೀಲನೆ ಮಾಡಿಲ್ಲ. ಅವರು ಒಂದು ನಿಷ್ಪಕ್ಷಪಾತವಾದ ವರದಿಯನ್ನು ಕೊಡಬೇಕಾಗಿತ್ತು. ಏನೋ ಮನಸ್ಸಿಗೆ ಬಂದಂತೆ ಆರೋಪಣೆಗಳನ್ನು ಮಾಡಬೇಕು ಎನ್ನುವ ಆತುರತೆಯಿಂದ ಮಾಡಿದ್ದಾರೆ ಎನ್ನುವುದು ಇಲ್ಲಿ ಸ್ಪಷ್ಟವಾಗಿದೆ. ಈ ಬಿಲ್ಡಿಂಗಿಗೆ 160 ಲಕ್ಷ ರೂಪಾಯಿಗಳ ದೊಡ್ಡ ಮೊಬಲಗನ್ನು ತೋರಿಸಿ ಇದು ಬಹಳ ದುಂದು ವೆಚ್ಚವಾಗಿದೆ ಎಂದು ಹೇಳಿದ್ದಾರೆ. ಇದರಲ್ಲಿ ದುಂದು ವೆಚ್ಚವಾಗಿದೆಯೇ ಇಲ್ಲವೇ ಲೆಕ್ಕ ಪತ್ರಗಳು ಸರಿಯಾಗಿವೆಯೇ ಇಲ್ಲವೇ ದುಡ್ಡು ನ್ಯಾಯವಾಗಿ ಖರ್ಚು ಮಾಡಲಾಗಿದೆಯೇ ಇಲ್ಲವೇ ಇದನ್ನೆಲ್ಲ ಪರೀಕ್ಷೆ ಮಾಡಿ ಒಂದು ಆಡಿಗಲ್ಲನ್ನು ಇಟ್ಟುಕೊಂಡು ಪರಿಶೀಲನೆ ಮಾಡಿದ್ದರೆ ಒಪ್ಪಬೇಕು. ಈ ತರಹದ ಕಟ್ಟಡಕ್ಕೆ ಚದರ ಅಡಿಗೆ ಎಷ್ಟು ಖರ್ಚು ಆಗುತ್ತದೆ ಎಂಬುದನ್ನು ಯಾವನಾದರೂ ಒಬ್ಬ ಕಂಟ್ರಾಕ್ಟರನ್ನಾಗಲಿ ಇಂಜಿನೀಯರನ್ನಾಗಲಿ ಕೇಳಿದ್ದರೆ ಇಂತಹ ಬಿಲ್ಡಿಂಗಿಗೆ ಖರ್ಚು ಕಡಿಮೆಯಾಗುತ್ತದೋ ಜಾಸ್ತಿಯಾಗುತ್ತದೋ ತಿಳಿಯುತ್ತಿತ್ತು. ಈ ರೀತಿ ಲೆಕ್ಕ ಮಾಡಿ ಇಂತಹ ಒಂದು ಸೌಂದರ್ಯದಿಂದ ಕೂಡಿದ ಕಟ್ಟಡವನ್ನು ಕಟ್ಟಲು ಬಿದ್ದಿರತಕ್ಕಂಥ ಖರ್ಚು ಒಂದು ಚದರ ಗಜಕ್ಕೆ ಇಪ್ಪತ್ತು ರೂಪಾಯಿಗಳು ಎಂದು ಕೆಲವೆಡೆ ಲೆಕ್ಕ ಹಾಕಿದ್ದಾರೆ, ಅದೇ ರೀತಿ Architectural features ಇರುವಂತಹದು ಗೌರ್ನಮೆಂಟ್ ಆಫ್ ಇಂಡಿಯಾ ಬಿಲ್ಡಿಂಗ್ ಸುಮಾರು 20 ರಿಂದ 25 ರೂಪಾಯಿಗಳಾಗುತ್ತದೆಂದು ಲೆಕ್ಕ ಹಾಕಿದ್ದಾರೆ. ಆದರೆ ಈ ಸಮಿತಿಯವರು ಮಾಡುತ್ತಿರುವ ಪರೀಕ್ಷೆಯ ರೀತಿಯ ಅಳತೆಗೋಲನ್ನು ಅನುಸರಿಸದೆ ಏಕೆ ಪಕ್ಷೀಯವಾಗಿ ಬಿಲ್ಡಿಂಗಿಗೆ ಹೆಚ್ಚು ಖರ್ಚಾಗಿದೆ ಎಂದು ಹೇಳಿದ್ದಾರೆ. ನಾನು ಕಟ್ಟಡವನ್ನು ಕಟ್ಟಿಸುವುದಕ್ಕೆ ಮುಂಚೆ ಬಹಳ ಕಟ್ಟಡಗಳನ್ನು ನೋಡಿದ್ದೆ. ಅದೇನು ದೈವಲೀಲೆಯೋ ಏನೋ, ನಾನು ಪ್ರಪಂಚದಲ್ಲಿ ಇರತಕ್ಕಂಥ ಪ್ರಮುಖವಾದ ಪಾರ್ಲಿಮೆಂಟು ಬಿಲ್ಡಿಂಗ್‌ಗಳನ್ನೆಲ್ಲಾ ನೋಡಿದ್ದೇನೆ. ಲಂಡನ್ನಿನಲ್ಲಿರತಕ್ಕ ಉಭಯ ಶಾಸನ ಸಭಾ ಭವನಗಳನ್ನು ನೋಡಿದ್ದೇನೆ. ಇದಲ್ಲದೆ ನಾರ್ವೆ, ಸ್ವೀಡನ್ನಿಗೂ ಹೋಗಿದ್ದೆ ಮತ್ತು ಇಂಡಿಯಾ ದೇಶದಲ್ಲಿರತಕ್ಕ ಪ್ರಮುಖ ನಗರಗಳನ್ನೆಲ್ಲ, ಎಂದರೆ ಮುಂಬಾಯಿ ಡೆಲ್ಲಿ, ಮುಂತಾದ ಕಡೆಗಳಲ್ಲಿರುವ ಬಿಲ್ಡಿಂಗುಗಳನ್ನು ನೋಡಿಕೊಂಡು ಬಂದೆ, ಈ ರೀತಿ ಎಲ್ಲ ತರಹದ ಕಟ್ಟಡಗಳನ್ನು ನೋಡಿ ನನ್ನ ಮನಸ್ಸಿಗೆ ಬಂದ ಒಂದು ಕಲ್ಪನಾ ಚಿತ್ರವನ್ನು ಕಾರ್ಯರೂಪಕ್ಕೆ ತಂದೆ ಅಷ್ಟೇ. ಒಂದು ಜೇನುಹುಳ ಅನೇಕ ಹೂವುಗಳಿಂದ ಸೌರಭವನ್ನು ಆರಿಸಿ ಒಂದು ಜೇನು ತುಪ್ಪದ ಕೊಡವನ್ನು ಹೇಗೆ ಕೊಡುತ್ತದೆಯೋ ಹಾಗೆ ನಾನು ಒಂದು ಉದ್ಭಾವನೆಯಿಂದ ಮಾಡಿದೆ. ಇಂತಹದನ್ನು ಇಲ್ಲಿ ತಂದು ಮಿಕ್ಸ್ ಮಾಡಿ ಮಾತನಾಡಿರುವುದು ಸರಿಯಾಗಿಲ್ಲ., ಯಾವುದೋ ಒಂದು ಪುಷ್ಪದಿಂದ ತಂದ ಜೇನು ಸಿಹಿಯಾಗಿಲ್ಲ ಎಂದು ಹೇಳುವುದು ಅದು ಅಭಿರುಚಿಯ ಮಾತು. ಅದು ಹಾಗಿರಲಿ.

ಹಿಂದೆ 1952ನೆಯ ಇಸವಿಯಲ್ಲಿ ನನ್ನ ಹಿಂದೆ ಇದ್ದ ಶ್ರೀಮಾನ್ ಕೆ. ಸಿ. ರೆಡ್ಡಿಯವರು ಒಂದು ಪ್ಲಾನು ತಯಾರಿಸಿದ್ದರು. ಅದು ಬಹಳ ಚೆನ್ನಾಗಿತ್ತು. ಖರ್ಚು ಕಡಿಮೆಯಾಗಿತ್ತು. ಅದಕ್ಕೂ ಇದಕ್ಕೂ ಹೋಲಿಸಿ ಈ ಎರಡು ಪ್ಲಾನುಗಳೂ ಯಾವ ಯಾವ ರೀತಿಯಲ್ಲಿ ಚೆನ್ನಾಗಿದ್ದುವು ಎಂಬುದನ್ನು ಪ್ರಸ್ತಾಪಿಸುತ್ತೇನೆ.

The building is said to have cost an enormous amount, Mr. K. C. Reddy, Ministry's plan of the building had a floor area of 1,74,600sq. feet. Its estimated cost was 33 lakhs of rupees, the Vidhana Soudha has nearly five lakhs of sq. feet of floor area and has cost about 160 lakhs. The former was a brick building with many architectural features. In April 1952, when the estimate for the former building was prepared, the prices and wages were not as high as they were during the time of the construction of Vidhana Soudha. When so compared with the cost of the original plan of Mr. K. C. Reddy's Ministry it will show to any impartial mind that the cost of the Vidhana Soudha is cheaper.

ಇನ್ನೊಂದು ವಿಷಯ ಈ ವಿಧಾನ ಸೌಧದಂತಹ ಒಂದು ಕಟ್ಟಡ ಚಂಡಿಘರ್‌ನಲ್ಲಿದೆ. ಈ ಚಂಡಿಘರ್ ಪಂಜಾಬಿನಲ್ಲಿದೆ. ಈ ವಿಧಾನ ಸೌಧದ ಅರ್ಧ ಮುಕ್ಕಾಲರಷ್ಟು ಕೆಲಸವಾಗಿದ್ದಾಗ ನಾನು ಅಲ್ಲಿಗೆ ಹೋಗಿದ್ದೆ. ಅಲ್ಲಿ ಸೆಕ್ರೆಟೇರಿಯಟ್ ಬಿಲ್ಡಿಂಗ್ ಮತ್ತು ಪಾರ್ಲಿಮೆಂಟ್ ಕಟ್ಟಡಗಳನ್ನು ಕಟ್ಟಿಸುತ್ತಿದ್ದರು. ಅವುಗಳನ್ನೆಲ್ಲಾ ನೋಡಿಕೊಂಡು ಬರಲು ನಾನು ಹೋಗಿದ್ದೆ. ಅಲ್ಲಿಯ ಚೀಫ್ ಮಿನಿಸ್ಟರ್ ನನಗೆ ಆಮಂತ್ರಣವನ್ನಿತ್ತು, ಟೀ ಕೂಡ ಕೊಟ್ಟರು. ಆಗ ಆ ಕಟ್ಟಡಗಳಿಗೆ ಆಗಿದ್ದ ಖರ್ಚನ್ನು ವಿಚಾರಿಸಿದ್ದರಲ್ಲಿ ಬಿಲ್ಡಿಂಗ್ ಕಾಸ್ಟ್ ಮೇಲೆ ಅಲ್ಲಿ ಕಂಟ್ರಾಕ್ಟರುಗಳಿಗೆ ಮೂರು ಪರ್ಸೆಂಟು ಫೀಸನ್ನು ಕೊಡುತ್ತಾರೆ ಎಂದು ಹೇಳಿದರು. ಅದೆಲ್ಲಾ ಸೇರಿ ಸುಮಾರು ಎರಡು ಮೂರು ಕೋಟಿಗಳ ಮೇಲಾಗುತ್ತದೆ, ಎಲ್ಲ ಆರ್ಕಿಟೆಕ್ಚರಲ್ ಫೀಚರುಗಳನ್ನೊಳಗೊಂಡ ಒಂದು ಭವ್ಯವಾದ ಭವನವನ್ನು ಅಲ್ಲಿ ನಿರ್ಮಾಣ ಮಾಡಿದ್ದಾರೆ. ಆದರೆ ಆ ಕಟ್ಟಡಗಳು ಹೋಗುವುದಿಲ್ಲ, ಪಂಜಾಬಿನ ಅಸೆಂಬ್ಲಿ ಸ್ಪೀಕರ್ ಅವರು ಇಲ್ಲಿಯ ಈ ವಿಧಾನ

ಸೌಧವನ್ನು ನೋಡಿ ಇಂತಹ ಸುಂದರವಾದ ಕಟ್ಟಡ ಇನ್ನೆಲ್ಲಿಯೂ ಇಲ್ಲ. ಚಂಡಿಘರ್ ಕಟ್ಟಡಗಳಿಗಿಂತ ಉತ್ತಮವಾಗಿದೆ ಎಂದು ಪ್ರಶಂಸೆ ಮಾಡಿ ಬರೆದಿದ್ದಾರೆ. ''ನಮ್ಮ ಭಾರತದ ಇಂಜಿನಿಯರುಗಳಿಗೆ ಪರಕೀಯ ಇಂಜಿನಿಯರುಗಳಿಂತಲೂ ಮೇಲಾದ ಕಟ್ಟಡಗಳನ್ನು ಕಟ್ಟಿಸತಕ್ಕ ಶಕ್ತಿ ಇದೆ. ಈ ವಿಧಾನ ಸೌಧದ ಖರ್ಚು ಕಟ್ಟಡಕ್ಕಿಂತ ಕಡಿಮೆ ಪ್ರಮಾಣದಲ್ಲಿ'' ಎಂದು ಬರೆದ್ದಿದ್ದಾರೆ, ನಾನೊಂದು ಸಲ ಚಂಡಿಘರ್ ಹೈ ಕೋರ್ಟ್ ನೋಡುವುದಕ್ಕೆ ಹೋದೆ. ಅಲ್ಲಿಯ ಚೀಫ್ ಜಸ್ಟಿಸ್ ಅವರು ನನ್ನನ್ನು ಬರಮಾಡಿಕೊಂಡು ಕಟ್ಟಡಗಳನ್ನು ತೋರಿಸಿ, ''ಈ ಕಟ್ಟಡ ನಮಗೊಬ್ಬರಿಗೂ ಒಪ್ಪಿಗೆ ಇಲ್ಲ'' ಎಂದು ಹೇಳಿದರು. ನಾನು ಚಂಡಿಘರ್ ರಾಜಧಾನಿಯನ್ನಾಗಲಿ, ಅಲ್ಲಿನ ಕಟ್ಟಡಗಳನ್ನಾಗಲಿ ಟೀಕಿಸಬೇಕೆಂಬ ಉದ್ದೇಶದಿಂದ ಹೇಳುತ್ತಿಲ್ಲ. ಈ ವಿಧಾನ ಸೌಧ ಕಟ್ಟಡವನ್ನು ಅಲ್ಲಿಯ ಕಟ್ಟಡಗಳೊಡನೆ ಹೋಲಿಸಿ ನೋಡಿದರೆ ನಮ್ಮ ಕಟ್ಟಡವು ಎಲ್ಲ ದೃಷ್ಟಿಯಿಂದಲೂ ಉತ್ತಮ ಮಟ್ಟದ್ದಾಗಿದೆ ಎಂಬ ನಿರ್ವಿವಾದವಾದ ವಿಷಯವನ್ನು ಸಭೆಯ ಮುಂದೆ ಪ್ರತಿಪಾದಿಸುವುದಕೋಸ್ಕರ ಹೇಳುತ್ತಿದ್ದೇನೆ. ನನ್ನ ಸ್ನೇಹಿತರಾದ ಶ್ರೀ ಇಮಾಂ ಅವರು ದೆಹಲಿಯ ಲೋಕಸಭೆಗೆ ಹೋಗುತ್ತಾರೆ. ದೆಹಲಿಯಲ್ಲಿ ಅವರ ಕಾರ್ಯ ಕಲಾಪಗಳು ಯಶಸ್ವಿಯಾಗಿ ನಡೆಯಲಿ ಎಂದು ಆಶಿಸುತ್ತೇನೆ. ಆವರು ಈ ಕಟ್ಟಡಕ್ಕೆ ತಗುಲಿರುವ ಖರ್ಚು ವೆಚ್ಚಗಳೇನು ಇತ್ಯಾದಿ ವಿವರಗಳನ್ನೂ ಮತ್ತು ಕಟ್ಟಡದ ನಕ್ಷೆ ವಗೈರೆಗಳನ್ನೂ ತಮ್ಮ ಸಂಗಡ ತೆಗೆದುಕೊಂಡು ಹೋಗಿ ದೆಹಲಿಗೆ ಚಂಡಿಘರ್ ಸಮೀಪವಾಗಿರುವುದರಿಂದ ಅಲ್ಲಿಗೂ ಹೋಗಿ, ಈ ವಿಧಾನ ಸೌಧದ ಖರ್ಚು ಏನು, ಅಲ್ಲಿ ಕಟ್ಟಿರತಕ್ಕ ಕಟ್ಟಡಗಳ ಖರ್ಚು ಏನು ಎಲ್ಲಿ ಮಾಡಿರುವ ಕೆಲಸ ತೃಪ್ತಿಕರವಾಗಿದೆ ಎಂದು ಒಂದು ಹೇಳಿಕೆಯನ್ನು ಕೊಡಬೇಕೆಂದು ಪ್ರಾರ್ಥಿಸುತ್ತೇನೆ. ಅವರು ವಿಧಾನ ಸಭೆಯ ಇನ್ನೊಂದು ಅಧಿವೇಶನ ಕೂಡುವಾಗ ಇರುವುದಿಲ್ಲವಾದ್ದರಿಂದ ಈ ಸಭೆಯಲ್ಲಿ ಭಾಷಣ ಮಾಡುವುದಕ್ಕಾಗುವುದಿಲ್ಲ. ಶ್ರೀ ಇಮಾಂ ಆವರು ''ಮೈಸೂರು ದೇಶದ ಸೇವೆ ಮಾಡುವುದು ನನ್ನ ಧ್ಯೇಯ''ವೆಂದು ಹೇಳಿದರು. ಅದಕ್ಕನುಗುಣವಾಗಿ ಅಲ್ಲಿ ಹೋಗಿ ಅಲ್ಲಿಯೂ ನೋಡಿ ಒಂದು ಹೇಳಿಕೆಯನ್ನು ಕೊಟ್ಟರೆ ಎಲ್ಲರಿಗೂ ಉಪಕಾರವಾಗುತ್ತದೆ.

ಮತ್ತೊಂದು ಆಕ್ಷೇಪಣೆ ಏನೆಂದರೆ ಅನೇಕ architectural features ಏನಿವೆ ಅವು ಬರಿಯ ನೋಟಕ್ಕೋಸ್ಕರ ಆಗಿವೆಯೇ ಹೊರತು ಉಪಯೋಗಕ್ಕೋಸ್ಕರ ಆಗಿಲ್ಲವೆಂದು ವರದಿಯಲ್ಲಿದೆ, ಮತ್ತೆ ಕೆಲವರು ಹೇಳಿದ್ದಾರೆ. ನಾನಾದರೂ ಅರಿಕೆ ಮಾಡಿಕೊಳ್ಳುವುದಿಷ್ಟೆ ಯಾವ ಸ್ಥಳಕ್ಕೆ ಹೋದರೂ ಕೂಡ ಅದನ್ನು ಉಪಯೋಗಿಸಿಕೊಳ್ಳಬೇಕು ಎನ್ನತಕ್ಕ ದೃಷ್ಟಿಯಿಂದಲೇ ಸ್ವತಃ ನಾನು ಕಟ್ಟಿಸಿದ್ದೇನೆ.

ನಾಲ್ಕು ಗೋಪುರಗಳು ನಾಲ್ಕು ಕಡೆ ಇವೆ. ಇವು ಅನಾವಶ್ಯಕ ಎಂದು ಕಮಿಟಿಯವರು ಹೇಳಿದ್ದಾರೆ. ಈ ಗೋಪುರಗಳಲ್ಲಿ ಹೋಗಿ ನೋಡಿದರೆ ನಾಲ್ಕು ಕಡೆ ನಾಲ್ಕು ದೊಡ್ಡ ಹಾಲುಗಳಿವೆ. ಮೊದಲು ಪ್ಲಾನಿನಲ್ಲಿ ಇಂಜಿನಿಯರುಗಳು ಬರೆದಿದ್ದಾಗ ಈ ನಾಲ್ಕು ಗೋಪುರಗಳು ಮತ್ತು ಮುಂದೆ ಇರತಕ್ಕ foyer ಹಿಂದೆ ಇರತಕ್ಕ foyer ಇವಕ್ಕೆ ನಾಲ್ಕು ಅಂತಸ್ತಿಗೂ ಭಾವಣಿ ಇಲ್ಲದೆ ಮೇಲ್ಭಾವಣಿಯನ್ನು ಕಟ್ಟುವ ಹಾಗೆ ತೂತು ಬಿಟ್ಟ ಹಾಗೆ ಬಿಟ್ಟಿದ್ದರು. ನಾನು ಅದನ್ನು ನೋಡಿ ನೀವು ಹೇಳಿರುವ ಪ್ರಕಾರ ಮೇಲ್ಭಾವಣಿ ಮಾತ್ರ ಹಾಕಿ ಅಂತಸ್ತುಗಳಿಗೆ ಭಾವಣಿ ಹಾಕದೆ ಬಿಟ್ಟರೆ ನೋಡುವುದಕ್ಕೆ ಅಲಂಕಾರವಾಗಿರುತ್ತದೆಯೇ ಹೊರತು ಸ್ಥಳವನ್ನು ಉಪಯೋಗಿಸುವುದಕ್ಕಾಗುವುದಿಲ್ಲ; ಆದುದರಿಂದ ಅವೆಲ್ಲಕ್ಕೂ ಭಾವಣಿಗಳನ್ನು ಹಾಕಿದರೆ ಅವು ಪ್ರತಿಯೊಂದೂ ಒಂದೊಂದು Waiting room ಆಗುತ್ತದೆ ಎಂದು ಹೇಳಿದೆ. ಬೊಂಬಾಯಿ ಸೆಕ್ರೆಟೇರಿಯೇಟ್ ಕಟ್ಟಡದಲ್ಲಿ ಬೊಂಬಾಯಿ ವಿಧಾನ ಸಭೆಯಿಂದ ಬಂದಿರುವ ಮಾನ್ಯ ಸದಸ್ಯರು ನೋಡಿದ್ದಾರೆ. ಪ್ರತಿಯೊಂದು ಅಂತಸ್ತಿನಲ್ಲಿಯೂ ಒಂದೊಂದು Waiting room ಇದೆ. ಅದೇ ರೀತಿ ಇಲ್ಲಿಯೂ ಕೂಡ ಪ್ರತಿಯೊಂದು ಅಂತಸ್ತಿನಲ್ಲಿಯೂ Waiting room ಮಾಡುವುದಕ್ಕೆ ಇದನ್ನು ಪರಿವರ್ತಿಸಿ ಎಂದು ಸೂಚನೆ ಕೊಟ್ಟೆ. ತಾವು ಹೋಗಿ ಗೋಪುರಗಳನ್ನೆಲ್ಲ ನೋಡಬಹುದು. ಪ್ರತಿಯೊಂದು ಗೋಪುರದಲ್ಲಿಯೂ ಕೂಡ ಒಂದೊಂದು ರೂಮು ಇದೆ. ಅದರಲ್ಲಿ ಆಫೀಸುಗಳನ್ನು ಮಾಡಬಹುದು. ಈಗಾಗಲೇ Wireless station ಒಂದನ್ನು ಕೊಟ್ಟಿದ್ದಾರೆ. ಮುಂದುಗಡೆ ಇರತಕ್ಕ ಮೂರು ಗೋಪುರಗಳಲ್ಲಿ ಒಂದು lift Room ಆಗಿದೆ. ಇನ್ನೊಂದು ರೂಮು ಉಪಯೋಗಕ್ಕೆ ಅನುಕೂಲವಾಗಿದೆ ಮತ್ತು ಮಧ್ಯೆ ಇರತಕ್ಕ ಗೋಪುರ ಅಲಂಕಾರಕೋಸ್ಕರವಿದೆ. ಸರ್ಕಾರಿ ಕೆಲಸಕ್ಕೆ ಮತ್ತು ನೋಡುವುದಕ್ಕೆ ಬರತಕ್ಕ ಜನರು ಕುಳಿತು ಕೊಳ್ಳುವುದಕೋಸ್ಕರ foyer ನಲ್ಲಿ ಅವಕಾಶವಿರುವಂತೆ ಮಾಡಿದೆ, ಅಲ್ಲದೆ ನಾನು ನೋಡಿದ ಅನೇಕ ಪಾರ್ಲಿಮೆಂಟ್ ಕಟ್ಟಡಗಳಲ್ಲಿ ಏನು ಮಾಡಿದ್ದಾರೆಂದರೆ, ಆ ಕಟ್ಟಡಗಳಲ್ಲಿ ಆಯಾ ದೇಶದ ಚರಿತ್ರೆಯನ್ನು ಚಿತ್ರ ರೂಪದಲ್ಲಿ point ಮಾಡಿ ಇಟ್ಟಿದ್ದಾರೆ. ಅವರ ಸಂಸ್ಕೃತಿ ಅವರ ಪ್ರಗತಿ ಮುಂತಾದವುಗಳನ್ನು ಈ ಕಟ್ಟಡಗಳಲ್ಲಿ ಚಿತ್ರಿಸಿದ್ದಾರೆ. ನನಗಾದರೂ ಅದೇ ರೀತಿಯ ಒಂದು ಅಭಿಮಾನ. ಒಂದು ನಮ್ಮ ದೇಶದಲ್ಲಿ ಇದುವರೆಗೂ ನಡೆದಿರತಕ್ಕ ಚರಿತ್ರಾರ್ಹವಾದ ಘಟನೆಗಳನ್ನು ಕೂಡ ಒಂದು ಚಿತ್ರ ರೂಪದಲ್ಲಿ ಎಲ್ಲರ ಕಣ್ಣಿಗೂ ಕಾಣಿಸುವಂತೆ ಬರೆಸಬೇಕು ಎನ್ನುವ ಆಸೆಯಿಂದ ಮುಂದುಗಡೆ ಮತ್ತು ಹಿಂದುಗಡೆ ಆರಾಮು ಕೊಠಡಿ ಅಷ್ಟು ದೊಡ್ಡದಾಗಿ ಮಾಡಿ ಚಿತ್ರಗಳನ್ನು

ಬರೆಸುವುದಕ್ಕೋಸ್ಕರ ಬಿಟ್ಟಿದ್ದೇನೆ. ಪಾರ್ಲಿಮೆಂಟ್ ಕಟ್ಟಡದಲ್ಲಿ ಪ್ರತಿಮೆಗಳಿಗೋಸ್ಕರ ಗೂಡನ್ನು ಕಟ್ಟಿಸಿ ಬಿಟ್ಟಿದ್ದಾರೆ, ಇನ್ನು ಅನೇಕ ಪ್ರತಿಮೆಗಳನ್ನು ಪಾರ್ಲಿಮೆಂಟ್ ಭವನದಲ್ಲಿ ಇಟ್ಟಿಲ್ಲ, ಇಲ್ಲಿಯೂ ಕೂಡ ನಾಲ್ಕೈದು ಕಡೆ ಆ ರೀತಿ ಸ್ಥಳವನ್ನು ಬಿಟ್ಟಿದೆ. ಹಿಂದೆ ನಮ್ಮ ದೇಶಕೋಸ್ಕರ ಬಹಳವಾಗಿ ಕೆಲಸ ಮಾಡಿರತಕ್ಕ ಮುಖ್ಯ ವ್ಯಕ್ತಿಗಳ ಪ್ರತಿಮೆಗಳನ್ನು ಆದರೂ ಇಡಬೇಕು, ಮಹಾತ್ಮಗಾಂಧಿ ನೆಹರೂ ಪಟೇಲ್ ಮುಂತಾದವರ ಪ್ರತಿಮೆಗಳನ್ನು ಇಡಬೇಕೆಂಬ ಉದ್ದೇಶದಿಂದ ಅವಕಾಶ ಮಾಡಿ ಕೊಟ್ಟಿದ್ದೇನೆ. ಈ ರೀತಿಯ ಯಾವ ಒಂದು ಸಂಪ್ರದಾಯ ಪಾಶ್ಚಾತ್ಯ ದೇಶಗಳಲ್ಲಿ ಮತ್ತು ಈ ದೇಶದಲ್ಲಿ ಇದೆಯೋ ಅದೇ ಸಂಪ್ರದಾಯವನ್ನೇ ಇಲ್ಲಿಯೂ ಕೂಡ ಸ್ಥಾಪಿಸಲು ಪ್ರಯತ್ನ ಮಾಡಿದರೆ ಅದನ್ನು ಅವಹೇಳನ ಮಾಡತಕ್ಕದ್ದು - ನಾನು ಕಠಿಣ ಭಾಷೆಯನ್ನು ಉಪಯೋಗಿಸಬಾರದು - ಸರಿಯಲ್ಲ ಎಂದು ಮಾತ್ರ ವಿಜ್ಞಾಪಿಸಿಕೊಳ್ಳುತ್ತೇನೆ.

ಇಲ್ಲಿ ಒಂದು ಪ್ರಸ್ತಾಪವಿದೆ. ಆ ಪ್ರಸ್ತಾಪ ಈ ಇಡಿಯ ಮನೋವೃತ್ತಿ ಯಾವ ದಾರಿಯಲ್ಲಿ ಹೋಯಿತು ಎನ್ನುವುದಕ್ಕೆ ಸಾಕ್ಷಿಯಾಗಿದೆ. ರಿಟೈರ್ಡ್ ಚೀಫ್ ಇಂಜಿನಿಯರ್ ಎಂ. ನರಸಿಂಹಯ್ಯನವರು ಕಮಿಟಿಯ ಸದಸ್ಯರಾಗಿದ್ದರು, ಇವರು ಹಿಂದೆ ಮೈಸೂರಿನಲ್ಲಿ ಚೀಫ್ ಇಂಜನಿಯರ್ ಆಗಿದ್ದರು. ಮೈಸೂರು ಸರ್ಕಾರದ ರಿಟೈರ್ಡ್ ಚೀಫ್ ಇಂಜಿನಿಯರ್‌ಗಳನ್ನೊಳಗೊಂಡ ಒಂದು Technical Advisory Committee ಎಂದು ನೇಮಿಸಿತ್ತು. ಇವರಿಗೆ ಸ್ವಾಭಿಮಾನ ಎಲ್ಲಿಯವರೆಗೆ ಹೋಯಿತು ಎಂದರೆ ಈ ವಿಧಾನ ಸೌಧದ ಪ್ಲಾನನ್ನು ನನಗೆ ತೋರಿಸಲಿಲ್ಲವಲ್ಲ ಎಂಬ ಸ್ವಾಭಿಮಾನ ಇವರನ್ನು ಕಾಡುವುದಕ್ಕೆ ಪ್ರಾರಂಭಮಾಡಿತ್ತು. ಅದನ್ನು ನಮ್ಮ ಕಮಿಟಿ ಮುಂದೆ ಇಡಬೇಕಾಗಿತ್ತು ಎಂದು ಬರೆದಿದ್ದಾರೆ. ನಾಲ್ಕು ವರ್ಷಗಳ ಕಾಲ ಮಾತ್ರ ಅಡ್ಮಿನಿಸ್ಟ್ರೇಷನ್‌ನಲ್ಲಿ ಇದ್ದವನಿಗೆ ನನಗೆ ಗೊತ್ತಿಲ್ಲ, ರಿಟೈರ್ಡ್ ಚೀಫ್ ಇಂಜಿನಿಯರುಗಳಿಂದ ಕೂಡಿರತಕ್ಕ ಒಂದು Technical Advisory ಸಮಿತಿಯು ದೊಡ್ಡ ದೊಡ್ಡ ಜಲಾಯಶಗಳು, ಪ್ರಾಜೆಕ್ಟ್‌ಗಳು, ಇಂಥವಕ್ಕೆ ಸಂಬಂಧ ಪಟ್ಟದ್ದು, ಮೈಸೂರಿನಲ್ಲಿ ಕ್ರಾಫರ್ಡ್ ಹಾಲ್ ಕಟ್ಟಿದ್ದಾರೆ. ಇನ್ನೂ ಅನೇಕ ಕಡೆ ದೊಡ್ಡದೊಡ್ಡ ಕಟ್ಟಡಗಳನ್ನು ಹೈಸ್ಕೂಲು ಕಾಲೇಜು ಮತ್ತು ಇತರೆ ಕಟ್ಟಡಗಳನ್ನು ಕಟ್ಟಿದ್ದಾರೆ. ಇವುಗಳ ನಕ್ಷೆ ವಗೈರೆ ಈ ಸಮಿತಿಯವರ ಪರಿಶೀಲನೆಗೆ ಹೋಗಿದ್ದುದು.

Sir L. Siddappa (Chennagiri) : It is only for irrigation.

Sri K. Hanumanthaiya - I stand corrected Sir My friend Sri Siddappa who has been a minister and a member of this legislature for a number of years tells me that this committee is constituted only in relation to irrigation projects, I am thankful to him for the clarification.

ಈ ರೀತಿ ತಮ್ಮ ಸಮಿತಿಯ ವ್ಯಾಪ್ತಿಗೆ ಒಳಪಡದಿದ್ದರೂ ಕೂಡ ನಮ್ಮ ಸಮಿತಿಗೆ ತೋರಿಸಲಿಲ್ಲವಲ್ಲ ಎಂಬ ಒಂದು ಸ್ವಾಭಿಮಾನದಿಂದ ಉಂಟಾದ ಕೋಪವನ್ನು ನನ್ನ ಮೇಲೆ ತೋರಿಸಿದ ಹಾಗೆ ಕಾಣುತ್ತದೆ.

ಈ ವಿಧಾನ ಸೌಧವನ್ನು ನಿರ್ಮಿಸುವುದಕ್ಕೆ ಮೊದಲು ನನಗಾದರೂ ಪರಿಣತರು ಅನುಭವಸ್ಥರ ಸಲಹೆಯನ್ನು ಸಹಾಯವನ್ನು ಪಡೆಯಬೇಕೆಂಬ ಉದ್ದೇಶವಿತ್ತು. ಆದ್ದರಿಂದಲೇ ಇದಕ್ಕೆ ಸಂಬಂಧಪಟ್ಟ ಕಮಿಟಿಯನ್ನು ನಿಯಮಿಸುವುದಕ್ಕೆ ಪ್ರಸ್ತಾಪ ಮಾಡಿದೆ. ಕಮಿಟಿಯವರು rough plan ಮುಂತಾದುವನ್ನು ಮಾಡಿದರು. Even today this building has all the appearances of the original plan.

ಒಳಗಡೆ ಸ್ವಲ್ಪ ಕಂಬಗಳು ಇತ್ಯಾದಿಗಳ ಬದಲಾವಣೆ ಆಯಿತು. ಆದ್ದರಿಂದ ಪ್ಲಾನ್ ಎಲ್ಲವನ್ನು ಬದಲಾಯಿಸಿದ್ದೇವೆ ಎಂದು ಹೇಳುವುದು ಸುಳ್ಳು ಎಂದು ಹೇಳುವುದಕ್ಕೆ ರುಜುವಾತು ಅವರ ವರದಿಯಲ್ಲೇ ಇದೆ. ಹಿಂದೇ ಯಾವ ಪ್ಲಾನು ಇತ್ತು ಮುಂದೆ ಯಾವ ಪ್ಲಾನ್ ಆಯಿತು ಇತ್ಯಾದಿ ವಿವರಗಳನ್ನು ಆ ವರದಿಯಲ್ಲಿ ಮುದ್ರಿಸಿದ್ದಾರೆ. ಅದನ್ನು ನೋಡಿದವರಿಗೆ ಗೊತ್ತಾಗುತ್ತದೆ. ಸಮಿತಿಯವರ ರಫ್ ಪ್ಲಾನು ಫೈನಲೈಸ್ ಆಯಿತು. ಅದರ ಪ್ರಕಾರ ಕಟ್ಟಡ ಕಟ್ಟಲಾಯಿತು. ಇದರಲ್ಲಿ ನಾಲ್ಕು ಗೋಪುರಗಳು ನಾಲ್ಕು ಮೂಲೆಗಳಲ್ಲಿವೆ. ಅವನ್ನು ಕಟ್ಟಬಾರದಾಗಿತ್ತು ಎಂದು ಒಬ್ಬ ಸದಸ್ಯರು ಹೇಳಿದರೂ ಚೀಫ್ ಇಂಜನಿಯರ್ ಆಗಿ ಆಗ ಇದ್ದ ಶ್ರೀ ಗಂಗಾಧರ್ ಅವರು ಅದನ್ನು ಮುಂದೆ ಅಲೋಚನೆ ಮಾಡೋಣ ಎಂದು ಹೇಳಿದರು. ಆದರೂ ಕೂಡ ಈ ನಾಲ್ಕು ಗೋಪುರಗಳನ್ನು ಕಟ್ಟಲೇ ಬೇಕು ಎಂದು ಹೇಳಿದ್ದು ಒಂದು ದೊಡ್ಡ ಅಪರಾಧವಾಯಿತು. ಈ ನಾಲ್ಕು ಗೋಪುರಗಳು ಈ ಕಟ್ಟಡದ ಸೌಂದರ್ಯವನ್ನು ಎಷ್ಟರ ಮಟ್ಟಿಗೆ ಹೆಚ್ಚಿಸಿವೆ ಎಂಬುದು ಅಭಿಪ್ರಾಯದ ಮಾತು ಎಂದೇ ಹೇಳುತ್ತೇನೆ. ಕೆಲವರಿಗೆ ಅವು ಚೆನ್ನಾಗಿರಬಹುದು. ಕೆಲವರಿಗೆ ಚೆನ್ನಾಗಿಲ್ಲದೇ ಇರಬಹುದು. ಆದರೆ ಈ ನಾಲ್ಕು ಗೋಪುರಗಳು

ಉಪಯೋಗಕ್ಕೂ ಕೂಡ ಒಳಪಡುತ್ತವೆ ಎಂಬ ಅಂಶವನ್ನು ಆಗಲೇ ನಾನು ಅರಿಕೆ ಮಾಡಿಕೊಂಡೆ. ಅದನ್ನು ಅವರು ಪ್ರಸ್ತಾಪಿಸಲೇ ಇಲ್ಲ.

ಇನ್ನೂ ಈ ಸಮಿತಿಯವರು ಈ ಕಟ್ಟಡವನ್ನು ಮೊಟ್ಟ ಮೊದಲು ಪ್ಲಾನ್ ತಯಾರು ಮಾಡಿ ಎಸ್ಟಿಮೇಟ್ ಮಾಡಿ ಪ್ರತಿಯೊಂದು ವಿವರವನ್ನು ಕೂಡ ಬರೆದು ಕಟ್ಟಿಸಬೇಕಾಗಿತ್ತು. ಎಂದು ಸಾಂಪ್ರದಾಯಕವಾದ ವಾದವನ್ನು ಹೇಳಿದರು. This is what is called redtapism. ಈ ದಿವಸ ಹೇಳುತ್ತೇನೆ. ಆ ಸಂಪ್ರದಾಯವನ್ನು ಅನುಸರಿಸಿ ಈ ಕಟ್ಟಡ ಕಟ್ಟಲ್ಪಟ್ಟಿದ್ದರೆ ಇನ್ನು 8-10 ವರ್ಷಗಳೂ ಇದು ಮುಗಿಯುತ್ತಾ ಇರಲಿಲ್ಲ. ಇದಕ್ಕೆ ಒಂದು ಸಾಕ್ಷಿ ಹೇಳುತ್ತೇನೆ. ನಾನು ಆಗಸ್ಟ್ 18ನೆಯ ತಾರೀಖಿನ ದಿವಸ ರಾಜೀನಾಮೆ ಕೊಟ್ಟೆ. ಅಲ್ಲಿಂದೀಚೆಗೆ ಎಷ್ಟು ಪ್ರಮಾಣದಲ್ಲಿ ಕೆಲಸ ನಡೆದಿದೆ. ಅದಕ್ಕಿಂತ ಮೊದಲು ಯಾವ ವೇಗದಲ್ಲಿ ಯಾವ ಪ್ರಮಾಣದಲ್ಲಿ ಕೆಲಸ ನಡೆಯಿತು ಎಂಬುದನ್ನು ಮಾನ್ಯ ಸದಸ್ಯರೆಲ್ಲರೂ ನೋಡಬಹುದು. ಎಷ್ಟೋ ಸಾರಿ ನನಗೆ ಒಂದು ಅಭಿಮಾನ ಬರುತ್ತದೆ. ಈ ಭವನ ಸರ್ಕಾರದ ಆಡಳಿತ ನಡೆಯುವ ಮಂದಿರವಾಗುವುದರ ಜೊತೆಗೆ ಇತರ ಪಾರ್ಲಿಮೆಂಟರಿ ಕಟ್ಟಡಗಳ ಹಾಗೆ ಒಂದು ಕಲಾ ಭವನವು ಆಗಬೇಕು ಎನ್ನುವ ಉದ್ದೇಶದಿಂದ ಸರ್ಕಾರದ ದುಡ್ಡು ಮಾತ್ರವಲ್ಲದೆ ಅನೇಕ ಕಂಪನಿಗಳು ಮತ್ತು ಬ್ಯಾಂಕುಗಳವರನ್ನು ಕೂಡ ನಿಮಗೆ ಎಷ್ಟು ಸಾಧ್ಯವಾಗುತ್ತದೆಯೋ ಅಷ್ಟನ್ನು ಕೊಡಿ ಎಂದು ಪ್ರಾರ್ಥಿಸಿಕೊಂಡೆ. ಸುಮಾರು 75 ಸಾವಿರ ರೂಪಾಯಿಗಳಷ್ಟು ಹಣವನ್ನು ಅನೇಕ ಕಂಪನಿಗಳವರು ಮತ್ತು ಬ್ಯಾಂಕುಗಳವರು ಕೊಟ್ಟಿದ್ದಾರೆ. ಶ್ರೀ ಪೂಣಚ್ಚ ಅವರು ಆಗ ಕೊಡಗಿನ ಮುಖ್ಯ ಮಂತ್ರಿಗಳಾಗಿದ್ದರು. ಅವರನ್ನು ಒಂದು ಕಾವೇರಿ ವಿಗ್ರಹ ಮತ್ತು ಫೌನ್‌ಟನ್ ಅನ್ನು ನಿಮ್ಮ ಸಂಸ್ಥಾನದ ಜ್ಞಾಪಕಾರ್ಥವಾಗಿ ಕಟ್ಟಿಸಿ ಕೊಡಬೇಕೆಂದು ಕೇಳಿದೆ. ಅವರು ಒಪ್ಪಿಕೊಂಡು ಮಂಜೂರು ಮಾಡಿದರು. ಈ ದಿವಸ ಆ ವಿಗ್ರಹವೂ ಇಲ್ಲ. ಫೌನ್‌ಟನ್ನೂ ಇಲ್ಲ, ತಾವಾಗಿಯೇ ಕೊಡಲ್ಪಟ್ಟ ದುಡ್ಡಿನಿಂದ ದೊಡ್ಡ ಪೆಯಿಂಟಿಂಗ್ಸ್ ಬರೆಸಿದ್ದೆ. ಅವನ್ನೆಲ್ಲ ಈ ಕಟ್ಟಡದಲ್ಲಿ ಒಂದು ಕಡೆ ಹೊಟೆಲ್‌ನ ಸ್ಕ್ರೀನ್ ಆಗಿ ಇಟ್ಟಿದ್ದಾರೆ. ಅದನ್ನು ನೋಡಿ ನನಗೆ ಕಣ್ಣಿನಲ್ಲಿ ನೀರು ಬಂತು. ಯಾವ ಒಂದು ಮಹತ್ವಾಕಾಂಕ್ಷೆಯಿಂದ ಆ ಚಿತ್ರಗಳನ್ನು ಬರೆಸಲಾಯಿತೋ ಅದನ್ನು ಕಡೆಗಣಿಸಿ ಅವುಗಳನ್ನು ಹೋಟೇಲ್‌ನ ಸ್ಕ್ರೀನ್ ಆಗಿ ಉಪಯೋಗಿಸಿದ್ದಾರೆ. ಇದನ್ನು ಯಾರಾದರೂ ನೋಡ ಬಹುದು. ಒಂದೊಂದು ಚಿತ್ರಕ್ಕೆ 10-15-20 ಸಾವಿರ ರೂಪಾಯಿ ಆಗುತ್ತದೆಯೇನು? ಈ ಒಂದು ಆಕ್ಷೇಪಣೆ ಮಾಡಿದ್ದಕ್ಕೆ ಶ್ರೀ ಪಟ್ಟಾಭಿರಾಮನ್ ಅವರು ಏನು ಹೇಳಿದರೋ. ಆ ಒಳ ವ್ಯಾಜ್ಯ ಹೆಚ್ಚಾಗುತ್ತ ಇದೆಯಲ್ಲಾ ಅದು ಬೇಡ ಎಂದು ಹೇಳಿ ಈ 7-8

ತಿಂಗಳಿಂದ ನನ್ನ ದುಃಖವನ್ನು ನನ್ನ ಮನಸ್ಸಿನಲ್ಲಿಟ್ಟುಕೊಂಡಿದ್ದೇನೆ. ಒಂದೂ ಭಾಷಣವನ್ನು ಈ ಸಭೆಯಲ್ಲಿ ಮಾಡುವುದಕ್ಕೆ ಹೋಗಿಲ್ಲ. ಏಕೆಂದರೆ, ಒಂದು ಚಿತ್ರದಲ್ಲಿರತಕ್ಕ ಸೌಂದರ್ಯ ಒಂದು ಕಟ್ಟಡದಲ್ಲಿರತಕ್ಕ ಸೌಂದರ್ಯ ಎಷ್ಟು ಹಿತವೋ ಅದೇ ರೀತಿ ನನ್ನ ಸ್ನೇಹಿತರುಗಳು ಮನಸ್ಸಿನಲ್ಲಿ ಸಹೋದ್ಯೋಗಿಗಳ ಮನಸ್ಸಿನಲ್ಲಿ ಉಂಟಾಗತಕ್ಕ ಸ್ನೇಹ ಅದೂ ಮಹತ್ತಾದುದು. ಆ ಮಹತ್ತಾದ್ದನ್ನು ಸಾಧಿಸಬೇಕೆಂದು ನಾನು ಹಗಲೂ ರಾತ್ರಿ ದೇವರನ್ನು ಪ್ರಾರ್ಥಿಸುತ್ತಾ ಇದ್ದೇನೆ. ಎಷ್ಟೇ ಸರಿಯಾಗಿರಲಿ ನನ್ನ ಸ್ನೇಹಿತರಿಗೆ ಸೈರಿಸದೆ ಇರತಕ್ಕ ಕೆಲಸವಾದರೆ ಅದರಲ್ಲಿ ಸಾಮರಸ್ಯ ಇರುವುದಿಲ್ಲ. ಎಲ್ಲಿ ಸಾಮರಸ್ಯತೆ ಇರುವುದಿಲ್ಲವೋ ಅಲ್ಲಿ ಸಹಸ್ರಾರು ರೂಪಾಯಿಗಳಿದ್ದರೂ ಸುಖವಿಲ್ಲ ಎನ್ನುವ ಹಾಗೆ ಆಗಿದೆ. ಈ ದಿವಸ ನಾನು ನನ್ನ ಸ್ನೇಹಿತರಲ್ಲಿ ಭಿಕ್ಷೆ ಬೇಡುವುದು, ಯೋಚಿಸುವುದು ಏನೆಂದರೆ, ನನ್ನಲ್ಲಿ ಏನಾದರೂ ದೋಷವಿದ್ದರೆ ಯಾವತ್ತೂ ಖಂಡಿಸಿ ನಾನು ಏನಾದರೂ ಒಳ್ಳೆಯ ಕೆಲಸವನ್ನು ಮಾಡಿದ್ದರೆ ಅದನ್ನು ಒಳ್ಳೆಯ ಕೆಲಸ ಎಂದು ಹೇಳದಿದ್ದರೂ ಚಿಂತೆ ಇಲ್ಲ. ಅದನ್ನು ಮುಂದುವರಿಸಿಕೊಂಡು ಹೋಗಿ ಎಂದು ನನ್ನ ಪ್ರಾರ್ಥನೆ. ಈ ಕಟ್ಟಡದ ಮುಂದೆ ಒಂದು ಸರ್ಕಲ್ ಇದೆ. ಆ ರಸ್ತೆಯಲ್ಲಿ ಹೋದರೆ ಡಿಸ್ಟ್ರಿಕ್ಟ್ ಬೋರ್ಡ್ ರಸ್ತೆಯಲ್ಲೂ ಕೂಡ ಅಷ್ಟು ಮಟ್ಟಿನ ಕಲ್ಲುಗಳಿರುವುದಿಲ್ಲ. ವಿಪರೀತ ಧೂಳು ಏಳುತ್ತದೆ. ಒಂದು ದಿವಸದಲ್ಲಿ ಸರಿಪಡಿಸತಕ್ಕ ಕೆಲಸವನ್ನು ಈ ರೀತಿ ಅಲಕ್ಷ್ಯ ಮಾಡಿರುವುದನ್ನು ನೋಡಿದರೆ ಬಹಳ ವ್ಯಸನವಾಗುತ್ತದೆ. ಈ ವಿಧಾನ ಸೌಧದ ವಿಷಯದಲ್ಲೂ ಇನ್ನೂ ಅನೇಕ ಸಂಗತಿಗಳನ್ನು ಹೇಳ ಬಲ್ಲೆ. ಆದರೆ ದೇವರಲ್ಲಿ ಹೀಗೆ ಪ್ರಾರ್ಥಿಸುತ್ತೇನೆ. ಕೂಡಲ ಸಂಗಮದೇವ ನನ್ನನ್ನು ರಕ್ಷಿಸಬೇಕೆಂದು ಹೇಳಿದ್ದೇನೆ. ರಕ್ಷಿಸುತ್ತಾನೆ. ಆ ಕಾಲ ಬಂದಾಗ ಅವರನ್ನು ಪ್ರಾರ್ಥಿಸುತ್ತೇನೆ. ಸ್ನೇಹವುಂಟಾದ ಮೇಲೆ ಇಂಥ ಕೆಲಸ ಇಂಥ ಕಡೆ ಮಾಡಿ ಎಂದು ಆ ದಿವಸವಾದರೂ ನನ್ನ ಮಾತನ್ನು ಕೇಳತಕ್ಕ ಒಂದು ವಾತ್ಸಲ್ಯ ಒಂದು ತರಹ ಕರುಣೆ ಉಂಟಾಗ ತಕ್ಕ ಕಾಲವನ್ನು ಕಾಯುತ್ತೇನೆ.

ಮತ್ತೊಂದು ವಿಷಯವನ್ನು ಈ ಸಮಿತಿಯವರು ಅದ್ಭುತವಾಗಿ ಮಾಡಿದ್ದಾರೆ. ಈ ಪ್ಲಾನನ್ನು ಸ್ಪೀಕರ್ ಅವರಿಗೆ ಒಪ್ಪಿಸಿ ಅವರ ಅಪ್ಪಣೆ ಪಡೆಯಲಿಲ್ಲ ಎಂದು ಹೇಳಿದ್ದಾರೆ. ತಮಗೆ ಗೊತ್ತಿರುವ ಹಾಗೆ ಅವರ terms of referenceಗೆ ಇದು ಒಳಪಟ್ಟಿದ್ದಲ್ಲಿ ಯಾರು ಇದಕ್ಕೆ ಸಂಬಂಧಪಟ್ಟವರೋ ಅವರೂ ಕೂಡ ಇಲ್ಲ. ಹಿಂದೆ ಸ್ಪೀಕರ್ ಆಗಿದ್ದ ಶ್ರೀ ಸಿದ್ದಯ್ಯನವರು ಮತ್ತು ಶ್ರೀ ರುದ್ರಪ್ಪನವರು ಅವರಿಬ್ಬರನ್ನೂ ಎಷ್ಟೋ ಸಾರಿ ನನ್ನ ಜೊತೆಯಲ್ಲಿ ಇನ್‌ಸ್ಪೆಕ್ಷನ್ನಿಗೆ ಕರೆದುಕೊಂಡು ಹೋಗಿದ್ದೇನೆ. ಈ ಕಟ್ಟಡದ ಒಂದು ಡಾಕ್ಯುಮೆಂಟರಿ ಫಿಲ್ಮ್ ಮಾಡಿದ್ದಾರೆ. ಶ್ರೀ ಸಿದ್ಧಯ್ಯನವರ ಚಿತ್ರ

ಈಗಲೂ ಇದೆ. ಅದನ್ನು ನೋಡಿದಾಗಲೆಲ್ಲ ಶಾಸನ ಸಭೆಯ ಅಧ್ಯಕ್ಷರಾಗಿದ್ದ ಶ್ರೀ ಸಿದ್ದಯ್ಯ ಅವರನ್ನು ಆ ಚಿತ್ರದಲ್ಲಾದರೂ ಕಾಣಬಹುದಲ್ಲಾ ಒಂದು ಆ ಒಂದು ನೆನಪು ಬರುತ್ತದೆ. ಮತ್ತು ಶ್ರೀ ಭಾಷ್ಯಂ ಅವರು ಚೇರ್ಮನ್ ಆಗಿದ್ದರು. ಅವರೆಲ್ಲರೂ ಒಂದು ದಿವಸವಾದರೂ ಕೂಡ, ನನ್ನ ಜೊತೆಯಲ್ಲಿ ಬಂದಾಗ ಕಟ್ಟಡ ನೋಡಿ ಸಂತೋಷಪಟ್ಟು ಕಟ್ಟಿಸಿ ಎಂದು ಪ್ರೋತ್ಸಾಹ ಕೊಟ್ಟರೇ ಹೊರತು ನನ್ನನ್ನು consult ಮಾಡಲಿಲ್ಲ ಎನ್ನುವ ಪ್ರಶ್ನೆ ಅವರ ಮನಸ್ಸಿನಲ್ಲಿ ಹೊಳೆಯಲಿಲ್ಲ. ಎರಡನೆಯದಾಗಿ ಹಿಂದೆ ಇದ್ದ ಸ್ಪೀಕರ್ ಆಗಲಿ ಚೇರ್ಮನ್ ಆಗಲಿ ಯಾರೂ ಕೂಡ ಅದು ಒಂದು ಅಪರಾಧ ಎಂದು ಹೇಳದೇ ಇದ್ದ ವಿಷಯವನ್ನು ತಾವಾಗಿ ಹುಟ್ಟಿಸಿಕೊಂಡು, ಸ್ಪೀಕರ್ ಅವರನ್ನು Consult ಮಾಡಿದ್ದರೆ ಈ ರೀತಿ ಆಗುತ್ತಾ ಇತ್ತು, ಆ ರೀತಿ ಆಗುತ್ತಾ ಇತ್ತು, ಎಂದು ಒಂದು ಊಹೆ, ಕಲ್ಪನೆಯನ್ನು ಮಾಡಿ ಆಕ್ಷೇಪಣೆಯನ್ನು ಮಾಡತಕ್ಕದ್ದು ಸುಸಂಸ್ಕೃತರಿಗೆ ಮರ್ಯಾದೆ ತರತಕ್ಕದ್ದೇ ಎಂದು ನನಗೆ ಮನಸ್ಸಿನಲ್ಲಿ ಎನ್ನಿಸುತ್ತದೆ. ಇದು ಎಲ್ಲಿಯ ಸಂಪ್ರದಾಯ, ಸೆಕ್ರೆಟೇರಿಯಟ್ ಕಟ್ಟಡ , ಲೆಜಿಸ್ಲೇಚರ್ ಎಲ್ಲ ಒಂದಾಗಿ ಕಟ್ಟುವಾಗ ಈ ಕಟ್ಟಡ ಚೆನ್ನಾಗಿ ಆಗಬೇಕು, ಅನುಕೂಲವಾಗಿರಬೇಕು ಎನ್ನುವುದೇ ಮನಸ್ಸಿನಲ್ಲಿ ಮುಖ್ಯ ಪ್ರಶ್ನೆಯಾಗಿರುತ್ತದೆಯೇ ಹೊರತು ನನ್ನನ್ನು ಕೇಳಲಿಲ್ಲ ಎನ್ನುವ ಪ್ರಶ್ನೆ ಇರುವುದಿಲ್ಲ. ಅದಕ್ಕೆ ಒಂದು ದೊಡ್ಡ ಆರೋಪಣೆ ಮಾಡುವುದು ಬಹಳ ಸಂಕುಚಿತವಾದದ್ದು ಯಾರು ಒಪ್ಪದೇ ಇರತಕ್ಕ ಯಾವ ರೂಲ್‌ನಲ್ಲೂ ಇಲ್ಲದೇ ಇರತಕ್ಕ ಒಂದು ಆರೋಪಣೆ, ಸ್ಪೀಕರನ್ನು Consult ಮಾಡಬೇಕಾಗಿತ್ತು ಎನ್ನುವ ಆರೋಪಣೆಯನ್ನು ಅವರು ಮಾಡಬಾರದಾಗಿತ್ತು. ಅನೇಕ ಸಾರಿ ಸ್ಪೀಕರ್ ಅವರನ್ನು ಕರೆದುಕೊಂಡು ಬಂದು, ಲೆಜಿಸ್ಲೇಚರ್ ಸೆಕ್ರೆಟರಿಯವರನ್ನು ಕರೆದುಕೊಂಡು ಬಂದು ನಿಮ್ಮ ಅಸೆಂಬ್ಲಿ ಹಾಲ್ ಹೇಗಿರಬೇಕು ಸ್ಪೀಕರ್ ಅವರ ಸ್ಥಾನ ಎಲ್ಲಿರಬೇಕು, ಯಾವ ಭಾಗ ಬೇಕು ಎಂದು ಹೇಳಿ ಅನೇಕ ವಿಷಯಗಳನ್ನು ಪ್ರಸ್ತಾಪ ಮಾಡಿ ಕೇಳಿದ್ದೇನೆ. ಅವರೂ ಕೂಡ ಸಲಹೆಗಳನ್ನು ಕೊಟ್ಟರು. ಇದೊಂದು ನಿದರ್ಶನ - ಒಂದು ಮಡಕೆಯಲ್ಲಿ ಅನ್ನ ಮಾಡುತ್ತಿದ್ದರೆ ಅನ್ನವಾಗಿದೆಯೇ ಇಲ್ಲವೆ ಎಂಬುದನ್ನು ನೋಡಬೇಕಾದರೆ ಒಂದು ಅಗುಳನ್ನು ಮಾತ್ರ ನೋಡಿದರೆ ಸಾಕು. ಹೀಗೆ ಅಪ್ರಾಸಂಗಿಕವಾಗಿ ಆರೋಪ ಮಾಡುವ ಮನೋಭಾವದಿಂದ ಕೂಡಿ ಮಾಡಿರುವ ವರದಿಯನ್ನು ನೋಡಿ ಸೋಜಿಗವಾಗಿದೆ.

**ಅಧ್ಯಕ್ಷರು** - ನಿಮಗಿನ್ನು ಎಷ್ಟು ಕಾಲ ಬೇಕು?

Because I have got to accommodate other members. Sir K. Hanumanthaiah : I leave it to your judgement Sir because I should not be accused of overspending the time of the house, as I am already accused of overspending money.

**Mr. Speaker :** The point is I do not want to stifle the debate. I have got to accommodate other members. If the Hon'ble member were to finish by 5'0 clock it will bie all right - somewhere by 5'0 clockhe may take five or ten minutes this way or that it does not matter. But let him finish his speech today.

**ಶ್ರೀ ಕೆ. ಹನುಮಂತಯ್ಯ** : ಸ್ವಾಮಿ, ಮೊದಲು ಈ ಕಟ್ಟಡದ ಪ್ಲಾನ್ ತಯಾರಾದಾಗ ಮೂರು ಅಂತಸ್ತುಗಳಿಗೆ ಮಾತ್ರ ಅವಕಾಶ ಮಾಡಿತ್ತು, ನಾನು ಈ ಕಟ್ಟಡದ ಕೆಲಸವನ್ನು ಪ್ರಾರಂಭ ಮಾಡಿಸಿದಾಗ 1952ನೆಯ ಇಸವಿಯ ಕೊನೆಯ ಭಾಗದಲ್ಲಿ ಕರ್ನಾಟಕ ಏಕೀಕರಣವಾಗುವುದು ಅಸ್ಪಷ್ಟವಾಗಿತ್ತು. ಒಂದನೆಯ ಅಂತಸ್ತನ್ನು ಕಟ್ಟಿಕೊಂಡು ಬರುವ ಹೊತ್ತಿಗೆ ಕರ್ನಾಟಕ ಏಕೀಕರಣವಾಗಬೇಕೆಂದು ಎರಡು ಕೋಟಿ ಜನರ ಆಸೆ ಏನಿತ್ತೋ ಅದು ಕಾರ್ಯರೂಪಕ್ಕೆ ಬರುವ ಸನ್ನಿವೇಶ ಸೂಚನೆ ಕಂಡು ಬಂತು. ಆಗ ನಾನು ಈಗ ಕಟ್ಟಬೇಕೆಂದಿರುವ ಕಟ್ಟಡ ಸಾಲುವುದಿಲ್ಲ ಇನ್ನೊಂದು ಅಂತಸ್ತು ಕಟ್ಟಿ ಎಂದು ಸೂಚನೆ ಕೊಟ್ಟೆ. ಮೂರು ಅಂತಸ್ತು ಸಾಲುವುದಿಲ್ಲ ನಾಲ್ಕಾಗಬೇಕು ಎಂದು ಮುಂದಾಲೋಚನೆಯಿಂದ ಸೂಚನೆ ನೀಡಿದೆ. ಇಂಜಿನಿಯರುಗಳು ಅದರಂತೆ ವರ್ಕೌಟ್ ಮಾಡಿದರು, ಅನಂತರ ಅದಕ್ಕೆ ಅವಶ್ಯಕವಾದ ಮೊಬಲಗನ್ನು ಬಡ್ಜೆಟ್ಟಿನಲ್ಲಿ ಸೇರಿಸಲಾಯಿತು. ಸೆಕ್ರೆಟೇರಿಯಟ್ ಹಿಂದಿದ್ದ ಅಠಾರಾ ಕಚೇರಿಯ ಕಟ್ಟಡದಲ್ಲಿ ಎಲ್ಲರಿಗೂ ಸಾಕಾಗುವಷ್ಟು ಸ್ಥಳ, ಗ್ಯಾರೇಜುಗಳು ವಗೈರೆ ಇರಲಿಲ್ಲ. ಅಧ್ಯಕ್ಷರು ಸಭಾಪತಿಗಳು ಸಚಿವರುಗಳು ಇವರ ಕಾರುಗಳನ್ನು ಬಿಡುವುದಕ್ಕೆ ಜಾಗವಿರಲಿಲ್ಲ. ಅದನ್ನು ಎಲ್ಲಾದರೂ ಬಿಡಲಿ ಎಂಬ ಮನೋಭಾವವಿರಬಾರದು ಸರ್ಕಾರಿ ಕಾರುಗಳಿಗೆ ರಕ್ಷಣೆಯಿರಬೇಕು. ಡ್ರೈವರುಗಳು ಬೆಳಗ್ಗೆಯಿಂದ ಸಾಯಂಕಾಲದವರೆಗೂ ಬಿಸಿಲಿನಲ್ಲಿ ಒಣಗಬೇಕು. ಇದು ಸರಿಯಲ್ಲ. ಇದಕ್ಕಾಗಿ 50 ಗ್ಯಾರೇಜುಗಳನ್ನು ಕಟ್ಟಿಸಬೇಕು ಎಂದು ಮನಸ್ಸು ಮಾಡಿ ಅದನ್ನು ನಿರ್ಮಿಸಲು ಅವಕಾಶ ಕೊಟ್ಟೆ ಅನಂತರ ಮೆಟ್ಟಲುಗಳನ್ನು ಕಟ್ಟುವಾಗ ಮಣ್ಣನ್ನು ಭರ್ತಿ ಮಾಡಿ ಕಟ್ಟುವಂತೆ ಇಂಜಿನಿಯರುಗಳು ತಿಳಿಸಿದರು. ಆದರೆ ನಮ್ಮ ಬಡ ನೌಕರರಿಗೆ

ಗುಮಾಸ್ತರಿಗೆ ತಮ್ಮ ಸೈಕಲ್ಲುಗಳನ್ನು ಬಿಡುವುದಕ್ಕೆ ಸ್ಥಳವಿರಲಿಲ್ಲ. ಅವರಲ್ಲಿ ನೂರಾರು ಮಂದಿ ಬೈಸಿಕಲ್ಲುಗಳ ಮೇಲೆ ಬರುತ್ತಾರೆ. ಹಿಂದೆ ಅಠಾರಾ ಕಛೇರಿಯಲ್ಲಿ ವರಾಂಡಾದಲ್ಲಿ ಬೈಸಿಕಲ್ಲುಗಳನ್ನು ಬಿಡುತ್ತಿದ್ದುದರಿಂದ ಹೋಗಿ ಬರುವವರಿಗೆ ತೊಂದರೆಯಾಗುತ್ತಿತ್ತು. ಆದ್ದರಿಂದ ಸುಮಾರು 500 ಬೈಸಿಕಲ್ಲುಗಳನ್ನು ನಿಲ್ಲಿಸುವುದಕ್ಕೆ ಸರಿಯಾದ ಅವಕಾಶ ಮಾಡಬೇಕೆಂದು ಯೋಚಿಸಿ ಮೆಟ್ಟಲನ್ನು ಕಟ್ಟಲು ಮಣ್ಣು ತುಂಬುವುದು ಬೇಡ, ಸಿಮೆಂಟ್ ಕಾಂಕ್ರೀಟ್ ಹಾಕಿ ಕಟ್ಟಿ ಬೈಸಿಕಲ್ಲುಗಳನ್ನು ಬಿಡಲು ಅದರ ಕೆಳಗೆ ಅವಕಾಶ ಮಾಡಿ ಎಂದು ತಿಳಿಸಿದೆ. ಹಾಗೆಯೇ ರಸ್ತೆಗಳಾಗಬೇಕಾದದ್ದು ಅವಶ್ಯಕ, ರಸ್ತೆಗಳೇ ಇಲ್ಲದಿದ್ದರೆ ಕಟ್ಟಡದ ಬಳಿಗೆ ಹೋಗುವುದು ಹೇಗೆ? ಈ ನಾಲ್ಕು ಹಾಲುಗಳಿಂದ ಮೊದಲೇನು ಅಂದಾಜಾಗಿತ್ತೋ ಅದಕ್ಕೂ ಹೆಚ್ಚಾಯಿತು. ಹೀಗೆ ಇದಕ್ಕೆಲ್ಲ ಖರ್ಚಾಗಿರುವಾಗ ಈ ದಿವಸ ಗ್ಯಾರೇಜ್ ಇರಬಾರದಾಗಿತ್ತು ರಸ್ತೆ ಬೇಡ, ಸೈಕಲ್ ಸ್ಟ್ಯಾಂಡ್ ಬೇಡ ಎಂದು ಯಾರು ತಾನೆ ಹೇಳಲು ಸಾಧ್ಯ? ಈ ಸೌಂದರ್ಯವೇನು ಬೇಕಾಗಿತ್ತೋ ಅದನ್ನು ಮಾಡಿರುವುದನ್ನು ನೋಡಿಯೂ ಕೂಡ ಟೀಕೆ ಮಾಡುತ್ತಿದ್ದಾರೆ. ಈ ಟೀಕೆ ಎಷ್ಟು ಸಾಧುವಾದುದೆಂಬುದನ್ನು ನೋಡಬೇಕು.

ಇನ್ನೊಂದು ಮಾತು ಹೇಳುತ್ತೇನೆ. ಮಣ್ಣನ್ನು ತೆಗೆಯಲು ಎಷ್ಟೋ ಖರ್ಚಾಯಿತು. ಮೂರು ಮಂದಿ ಮಾನ್ಯ ಸದಸ್ಯರು ಮಣ್ಣು ಏನಾಯಿತೆಂದೂ ಅದರಿಂದೆಷ್ಟು ಆದಾಯ ಬಂದಿದೆಯೆಂದೂ ಪ್ರಶ್ನೆ ಮಾಡಿ, ಅದನ್ನು ವಿಚಾರ ಮಾಡದೆ ದುಂದು ವೆಚ್ಚವೆಂದು ಅಪ್ಪಣೆ ಕೊಡಿಸಿದರು, ಬುಲ್ಡೋಜರುಗಳು ಮತ್ತು ಸ್ಕ್ಯಾಪರ್ಸ್ ಇವುಗಳಿಂದ ತೆಗೆದ ಮಣ್ಣು ಎಷ್ಟು ಸದುಪಯೋಗವಾಗಿದೆಯೆಂಬುದು ಬೆಂಗಳೂರಿನ ನಾಗರಿಕರಿಗೆ ಗೊತ್ತು. ಇಂಟರ್ ಕಾಲೇಜ್ ಮತ್ತು ಸೆಂಟ್ರಲ್‌ಕಾಲೇಜ್ ಮುಂದೆ ದೊಡ್ಡ ಗುಂಡಿಯಿತ್ತು. ಸುಮಾರು 20-30 ಅಡಿ ಆಳವಾಗಿಯೂ ಮತ್ತು ಒಂದು ಕ್ರಿಕೆಟ್ ಫೀಲ್ಡಿನಷ್ಟು ದೊಡ್ಡದಾಗಿಯೂ ಗುಂಡಿಯಿತ್ತು. ಅಲ್ಲೆಲ್ಲ ಕಸ ಹಾಕುತ್ತಿದ್ದರು. ಈ ದಿವಸ ಅದು ಮಣ್ಣು ಭರ್ತಿ ಮಾಡಿದ ಮೇಲೆ ಆಟದ ಮೈದಾನವಾಗಿದೆ. ಕಸ್ತೂರಿ ಬಾಯಿ ರಸ್ತೆ ಮತ್ತು ಸಿಟಿ ಮತ್ತು ಕಂಟೋನ್ಮೆಂಟ್ ಲಿಂಕ್ ರಸ್ತೆ ಬಹಳ ಇಕ್ಕಟ್ಟಾಗಿತ್ತು ಈ ದಿವಸ ಅದೆಷ್ಟು ವಿಶಾಲವಾಗಿದೆ ಎಂದು ನೋಡಿದರವರು ಸಂತೋಷಪಡುತ್ತಿದ್ದಾರೆ. ಗಾಂಧೀನಗರದಲ್ಲಿ ಒಂದು ದೊಡ್ಡ ಕಲ್ಯಾಣಿಯಿದ್ದು ಅದರಲ್ಲಿ ನೀರು ನಿಂತು ಅನಾರೋಗ್ಯಕ್ಕೆ ಕಾರಣವಾಗಿತ್ತು. ಅದಕ್ಕೆ ಮಣ್ಣು ಭರ್ತಿ ಮಾಡಿದ ಮೇಲೆ ಎಷ್ಟೋ ಅನುಕೂಲವಾಯಿತು. ಈ ಮಣ್ಣನ್ನು ಒಂದು ಟನ್ನಿಗೆ ಇಷ್ಟು ಎಂದು ಮಾರಿದ್ದರಿಂದ ಸುಮಾರು ಒಂದು ಲಕ್ಷ ರೂಪಾಯಿಗಳ ಆದಾಯ ಬಂತು. ಅನೇಕ ಖಾಸಗಿ ಜನರೂ ತೆಗೆದುಕೊಂಡಿದ್ದಾರೆ ಮತ್ತು ಸರ್ಕಾರದ

ಇತರ ಇಲಾಖೆಗಳವರೂ ತೆಗೆದುಕೊಂಡಿದ್ದಾರೆ. ಇಷ್ಟು ಮಣ್ಣನ್ನು ಸಾಗಿಸಿದ್ದರಿಂದ ಪಟ್ಟಣದ ಸೌಲಭ್ಯವನ್ನು ಸೌಂದರ್ಯವನ್ನೂ ಹೆಚ್ಚಿಸಿದ್ದರ ಜೊತೆಗೆ ಹಣವೂ ಬಂತು. ಈ ವಿಚಾರಗಳನ್ನು ಪರಿಶೀಲಿಸುವುದಕ್ಕೆ ಮನಸ್ಸು ಮಾಡದೆ ಆರೋಪಣೆ ಮಾಡಿದ್ದಾರೆ.

ಈ ಕೆಲಸ ಮಾಡಿದ ಇಂಜಿನಿಯರುಗಳ ವಿಚಾರದಲ್ಲಿ ಒಂದಂಶವನ್ನು ಈ ಸಭೆಯ ಗಮನಕ್ಕೆ ತರುತ್ತೇನೆ. ಈ ಕಟ್ಟಡವನ್ನು ಕಟ್ಟಿದಾಗ ಇದಕ್ಕೆ ಸಂಬಂಧಪಟ್ಟ ಪ್ರತಿಯೊಬ್ಬರೂ ಕೂಡ ತಮ್ಮ ಸ್ವಂತ ಕಟ್ಟಡ ಕಟ್ಟಬೇಕಾದರೆ ಎಷ್ಟು ಪ್ರೇಮ ಎಷ್ಟು ಎಚ್ಚರಿಕೆ ತೋರಿಸುತ್ತಿದ್ದರೋ ಅದಕ್ಕಿಂತ ಹೆಚ್ಚಿನ ಪ್ರೇಮ, ಎಚ್ಚರಿಕೆ ತೋರಿಸಿದರು. ಭಾನುವಾರದ ದಿವಸವೂ ಸಹ ಇಂಜಿನಿಯರುಗಳೆಲ್ಲಾ ಕೆಲಸ ಮಾಡಿದ್ದಾರೆ. ಪ್ರತಿ ದಿನವೂ 5 ಗಂಟೆಗೆ ನಾನು ಕಟ್ಟಡದ ಬಳಿಗೆ ಹೋದರೆ ಎಷ್ಟೋ ವೇಳೆ ಏಳು ಘಂಟೆಯವರೆಗೆ ಇರುತ್ತಿದ್ದೆ. ಆದ್ದರಿಂದ ಇಂಜಿನಿಯರುಗಳು ಸಹ ಅಲ್ಲೇ ಇರುತ್ತಿದ್ದರು. ಹೀಗೆ ಮೈಸೂರು ದೇಶದ ಚರಿತ್ರೆಯೊಳಗೆ ಸಂಬಂಧಪಟ್ಟ ಅಧಿಕಾರವರ್ಗದವರು ಇಷ್ಟು ಪ್ರಮಾಣದಲ್ಲಿ ಚೆನ್ನಾಗಿ ಹೆಚ್ಚು ಕೆಲಸ ಮಾಡಿರುವುದನ್ನು ಯಾರಾದರೂ ಕಂಡು ಹಿಡಿದರೆ ಅವರಿಗೆ ತಲೆಬಾಗುತ್ತೇನೆ. ಹೀಗೆ ಹೆಚ್ಚು ಕಾಲ ಶ್ರದ್ಧಾ ಭಕ್ತಿಗಳಿಂದ ಕೆಲಸ ಮಾಡಿದ್ದಾರೆ, ಕಟ್ಟಡದ ಮುಂದೆ ``Government work is God's work" ''ಸರ್ಕಾರದ ಕೆಲಸ ದೇವರ ಕೆಲಸ'' ಎಂದೇನು ನಾನು ಬರೆಸಿದ್ದೇನೆಯೋ ಅದೇ ರೀತಿ ಭಕ್ತಿಯಿಂದ ಶ್ರದ್ಧೆಯಿಂದ ಎಲ್ಲರೂ ಕೆಲಸ ಮಾಡಿದ್ದಾರೆಂದು ಧಾರಾಳವಾಗಿ ಹೇಳುತ್ತೇನೆ. ಹೀಗೆ ಕೆಲಸ ಮಾಡಿದವರು ''ಸ್ವಾಮಿ, ಭದ್ರಾ ನದಿ, ನುಗು ನದಿ, ಮಹಾತ್ಮ ಗಾಂಧಿ ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟುಗಳಲ್ಲಿ ಕೆಲಸ ಮಾಡಿದವರಿಗೆ ಓವರ್ ಟೈಂ ಅಲೋಯನ್ಸ್ ಕೊಡುವ ಪದ್ಧತಿಯಿದೆ, ನಮಗೂ ಅದರಂತೆ ಕೊಡಬೇಕು.'' ಎಂದು ಕೇಳಿದರು. ನಾನು ''ಕಟ್ಟಡ ಇಷ್ಟು ಕಾಲದಲ್ಲಿ ಕಟ್ಟಿದರೆ ಓವರ್ ಟೈಂ ಅಲೋಯನ್ಸ್ ಕೊಡುತ್ತೇವೆ. ಇಲ್ಲದಿದ್ದರೆ ಇಲ್ಲ'' ಎಂದು ಕಂಡೀಷನ್ ಹಾಕಿ ಹೇಳಿದೆ. ಇದಕ್ಕೆ ಸಂಬಂಧಪಟ್ಟ ಫೈಲು ಹಾಗೆಯೇ ಇದೆ. ಈ ದಿವಸ ನೋಡಿದರೆ ಆಶ್ಚರ್ಯವಾಗುತ್ತದೆ. ಸಮಿತಿಯ ಸದಸ್ಯರು ಎರಡು ತಿಂಗಳಿಗೆ ತಲೆಗೆ 5 ಸಾವಿರ ರೂಪಾಯಿಗಳಿಗಿಂತಲೂ ಹೆಚ್ಚು ಸಂಭಾವನೆ ಪಡೆದಿದ್ದಾರೆ. ಮೂರು ಮಂದಿ ಸಮಿತಿ ಸದಸ್ಯರೂ ಹಣ ತೆಗೆದುಕೊಂಡು ಹೋದರು. ಜೊತೆಗೆ ಅವರ ಸಿಬ್ಬಂದಿಗೆ ಎಂ.ಎಸ್. ಆರ್ ನಲ್ಲಿರುವುದಕ್ಕಿಂತ ಹೆಚ್ಚು ಸಂಭಾವನೆ ಕೊಟ್ಟಿದ್ದಾರೆ. ಇದು ಸರಿಯೇ ಎಂದು ಯೋಚನೆ ಮಾಡಬೇಕು. ಹೀಗೆ ಈ ಕಟ್ಟಡದಲ್ಲಿ ಕುಳಿತು ಇಷ್ಟ ಬಂದಾಗ ಕೆಲಸ ಮಾಡುತ್ತಿದ್ದ ನೌಕರರಿಗೆ ಮತ್ತು ಸದಸ್ಯರಿಗೆ ಓವರ್ ಟೈಂ ಅಲೋಯನ್ಸ್ ಕೊಡುವುದು ಮತ್ತು ಯಾವ ಇಂಜಿನಿಯರುಗಳು ಭಾನುವಾರ ಸಹ

ಕೆಲಸ ಮಾಡಿ ರಾತ್ರಿ 8-10 ಗಂಟೆಯವರೆಗೆ ಕೆಲಸ ಮಾಡುತ್ತಿದ್ದರೋ ಅವರಿಗೆ ಒಂದು ಕಾಸೂ ಇಲ್ಲ. ಅಷ್ಟೇ ಅಲ್ಲದೆ ಅವರ ಮೇಲೆ ಎಲ್ಲ ಕಡೆಗಳಿಂದಲೂ ಆಕ್ಷೇಪಣೆ ಆರೋಪಣೆ. ದೇವರಿದ್ದಾನೆಂದು ಹೇಳಿದರೆ ಈ ಅನ್ಯಾಯವಾದ ಆರೋಪವನ್ನು ಅವನು ಸಹಿಸಲಾರನೆಂದು ತಿಳಿದುಕೊಂಡಿದ್ದೇನೆ. ಅನೇಕ ಸಮಿತಿಗಳ ಸದಸ್ಯರಾಗಿದ್ದ ಶ್ರೀಯುತರುಗಳಾದ ಪಟ್ಟಾಭಿರಾಮನ್, ಇಮಾಂ, ಹುಚ್ಚೇಗೌಡ, ಹುಚ್ಚ ಮಾಸ್ತಿಗೌಡ ಮುಂತಾದವರು ಯಾರಿಗೂ ಐದು ಸಾವಿರ ರೂಪಾಯಿಗಳಷ್ಟು ಲಂಪ್‌ಸಂ ಹಣ ಕೊಟ್ಟಿಲ್ಲ.

I ask in all fairness, where was the necessity to pay Rs. 5,000 to these two members for part time work spread over one or two months, that too they have not tackled the problem that had been entrusted to them, namely perual of the accounts and finding out which item is correct and which item is not.

ಮತ್ತೊಂದು ದುಃಖದ ಸಂಗತಿಯನ್ನು ಕೇಳಬೇಕಾಗಿದೆ. ವಿಧಾನ ಸೌಧ ವಿಚಾರಣಾ ಸಮಿತಿಯನ್ನು ನೇಮಿಸಬೇಕೆಂದು ಸಲಹೆ ಬಂತು ಏನು ಅನ್ಯಾಯ ಮಾಡಿಲ್ಲ ಎಂದು ನನಗೆ ಗೊತ್ತಿತ್ತು. ಈ ಕಟ್ಟಡದ ಕೆಲಸವು ನಿಷ್ಕಳಂಕವಾಗಿ ನಡೆದಿದೆ ಎಂದು ನನ್ನ ಮನಸ್ಸಿಗೆ ಗೊತ್ತಿತ್ತು. ಯಾವ ರೀತಿಯ ಅನ್ಯಾಯವೂ ಆಗಿಲ್ಲ, ಯಾರೂ ಅಪರಾಧ ಮಾಡಿಲ್ಲ ಎಂಬುದನ್ನು ತೋರಿಸಲು ಮತ್ತು ಈ ಮಹಾ ಕಾರ್ಯವನ್ನು ಸಮಿತಿಯು ಪರಿಶೀಲನೆ ಮಾಡಿದ ಮೇಲೆ ನಿಷ್ಪಕ್ಷಪಾತವಾಗಿ ಪ್ರಶಂಸಿಸಬೇಕಾಗುವುದೆಂದು ಸಮಿತಿಯನ್ನು ನೇಮಿಸಿದಾಗ ಧೈರ್ಯದಿಂದ ಹಾಗೆ ನನಗೆ ಎನಿಸಿತ್ತು. ಸತ್ಸಂಪ್ರದಾಯಗಳನ್ನು ಬೆಳೆಸಿಕೊಂಡು ಬರಬೇಕೆಂದು ನಾನು ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದೆನು. ಪ್ರೈವೇಟಾಗಿ ಹೋಗಿ ವರದಿಯನ್ನು ಹಾಗೆ ಬರೆಯಿರಿ, ಹೀಗೆ ಬರೆಯಿರಿ ಎಂದು ಸಮಿತಿಯ ಸದಸ್ಯರಿಗೆ ಹೇಳುವುದು ಅನ್ಯಾಯ ಅದು ಅಸತ್ಯಯ ಅಪ್ರತ್ಯಕ್ಷವಾಗಿ ಹೇಳುವುದೂ ಅನ್ಯಾಯ. ಸಮಿತಿಯ ಅಧ್ಯಕ್ಷರನ್ನು ಒಂದು ಬಾರಿ ಮಾತ್ರ ಬಂದು ನೋಡಿದ್ದೇನೆ ಹೊರತು ಅನಂತರ ಪುನಃ ಅವರನ್ನು ನೋಡುವ ಗೋಜಿಗೆ ನಾನು ಹೋಗಲಿಲ್ಲ. ರಾಜಕೀಯ ವಾತಾವರಣವು ವಿಷಮಯವೂ ಮೋಸಮಯವೂ ಆಗಿತ್ತು. ನಾನು ರಾಜೀನಾಮೆ ಕೊಟ್ಟ ಮೇಲೆ ಅವರ ವರ್ತನೆಯಲ್ಲಿ ಬದಲಾವಣೆ ಆದುದ್ದು ಕಂಡು ಬಂತು. ಈ ಊರಲ್ಲಿ ದೊಡ್ಡ ಮನುಷ್ಯರು ಎಂದು ತಿಳಿದು ಕೊಂಡವರೊಬ್ಬರ ಸಂಗಡ ಸಮಿತಿಯ ಅಧ್ಯಕ್ಷರು ಸ್ನೇಹ ಮಾಡಿದರು. ನಾಲ್ಕು ವರ್ಷ ಈ ಮಹನೀಯರು ನಾನು

ಅಧಿಕಾರದಲ್ಲಿದ್ದಾಗ ಭೇಟಿಯಾಗುತ್ತಿದ್ದರು. ಇವರು ಅಧ್ಯಕ್ಷರನ್ನು ಖಾಸಗಿ ರೀತಿಯಿಂದ ಭೇಟಿಯಾಗುತ್ತಿದ್ದರು. ಇವರ ಸ್ನೇಹ ಅಧ್ಯಕ್ಷರ ಮನಸ್ಸನ್ನು ಕೆಡಿಸಲು ಕಾರಣವಾಯಿತು.

ಅನಂತರದ ಒಂದು ದಿವಸ ನಾನು ಸಮಿತಿಯ ಅಧ್ಯಕ್ಷರನ್ನು ಕಾಣಲು ಅವರ ಚೇಂಬರಿನೊಳಗೆ ಹೋದೆನು. ಅಧ್ಯಕ್ಷರು ವಿನಯದಿಂದ ಮುಖ ಮೇಲೆ ಸಹ ಮಾಡಿ ನನ್ನ ಕಡೆಗೆ ನೋಡಲಿಲ್ಲ. ಅವರ ಮುಖ ಭಾವ ಭಯಂಕರವಾಗಿದ್ದದ್ದು ನನಗೆ ಕಾಣುತ್ತಿತ್ತು. He did not receive me. ಅಧ್ಯಕ್ಷರ ಮನಸ್ಸನ್ನು ರಾಜಕೀಯ ಉದ್ದೇಶದಿಂದ ಕೆಡಿಸಿದ್ದಾರೆಂದು ನನ್ನ ಮನಸ್ಸಿಗೆ ಗೊತ್ತಾಯಿತು.

ಅನಂತರ ನನ್ನ ಸ್ನೇಹಿತರು ``This is a vulgar type of building ಎಂದು ಏನೇನೋ ಹೇಳಿದ್ದಾರೆ ಮತ್ತು ಇನ್ನು ಕೆಲವರು ಇಷ್ಟು ದೊಡ್ಡ ಕಟ್ಟಡವನ್ನು ಏಕೆ ಕಟ್ಟಬೇಕಾಗಿತ್ತು ಎಂದು ಮುಂತಾದ ಅನೇಕ ವಿಷಯಗಳನ್ನು ಹೇಳಿದ್ದಾರೆ. ಅದಕ್ಕೆಲ್ಲಾ ಸಾಕ್ಷಿ ಬೇಕಾದರೂ ಕೊಡುವುದಕ್ಕೆ ನನಗೆ ಧೈರ್ಯವಿದೆ. ಏನಾದರೂ ಆಗಲಿ ಈ ಸಮಿತಿಯವರು ಈ ಒಂದು ಚಿಕ್ಕ ವಿಷಯವನ್ನು ದೊಡ್ಡದು ಮಾಡಿ ಬಹಳ ಅನ್ಯಾಯವಾಗಿದೆ ಅಕ್ರಮವಾಗಿದೆ ಎಂದು ತೋರಿಸಿದ್ದಾರೆ. ನಾನು ಈ ಸಮಿತಿಯ ಮುಂದೆ ಸಾಕ್ಷಿ ಕೊಡುವುದಕ್ಕೆ ನನಗೆ ಧೈರ್ಯವಿದೆ. ಏನಾದರೂ ಆಗಲಿ ಈ ಸಮಿತಿಯವರು ಈ ಒಂದು ಚಿಕ್ಕ ವಿಷಯವನ್ನು ದೊಡ್ಡದು ಮಾಡಿ ಬಹಳ ಅನ್ಯಾಯವಾಗಿದೆ ಅಕ್ರಮವಾಗಿದೆ ಎಂದು ತೋರಿಸಿದ್ದಾರೆ. ನಾನು ಈ ಸಮಿತಿಯ ಮುಂದೆ ಸಾಕ್ಷಿ ಕೊಡುವುದಕ್ಕೆ ಹೋಗಿದ್ದಾಗ ನಾನೇ ಅವರನ್ನು ತಮಗೇನು ಬೇಕೋ ಅದನ್ನೆಲ್ಲ ಕೇಳಿ ಎಂದು ಹೇಳಿದ್ದೇನೆ. ಸಾಕ್ಷಿ ಕೊಡುವುದಕ್ಕೆ ಹೋಗಿ ಸಾಕ್ಷಿ ಕೊಟ್ಟದ್ದನ್ನು "I do not take it down`` ಎಂದು ಹೇಳಿದರು. ಇದು ಏನಾಗಿದೆ ಎಂದರೆ ''ತೋಳ ಹಳ್ಳಕ್ಕೆ ಬಿದ್ದಾಗ ಆಳಿಗೊಂದು ಕಲ್ಲು'' ಎನ್ನುವ ಗಾದೆಯಂತೆ. ಯಾವುದೋ ಒಂದು ದುರುದ್ದೇಶವನ್ನಿಟ್ಟುಕೊಂಡು ಈ ರೀತಿ ಮಾಡುವುದು ಸರಿಯಲ್ಲ. ನನ್ನನ್ನು ಪ್ರಶ್ನೆ ಕೇಳಿದ ರೀತಿಯನ್ನು ನೋಡಿ ನನಗೆ ಬಹಳ ಆಶ್ಚರ್ಯವಾಗಿ ತೋರಿತು.

ಮತ್ತೊಂದು ದೊಡ್ಡ ವಿಷಯ ಸ್ಪೆಷಲ್ ಇಂಜಿನಿಯರ್ ಅವರ ನೇಮಕಕ್ಕೆ ಸಂಬಂಧಿಸಿದ್ದು ಅವರಿಗೇನು ಕ್ವಾಲಿಫಿಕೇಷನ್ಸ್ ಎಂದು ಕೇಳಿದರು. ರಿಕಾರ್ಡಿನಲ್ಲಿ ಏನಿದೆಯೋ ಅದರಂತೆ ಹೇಳಿದ್ದಾಯಿತು. ಆ ಮೇಲೆ ನಾನು ಅದರ ಮೇಲೆ ಏನನ್ನು ಹೇಳಿದರೂ ಅದನ್ನು ಬರೆದು ಕೊಳ್ಳಲಿಲ್ಲ. ಇನ್ನು ಈ ಇಂಜಿನಿಯರ್ ವಿಷಯ.

ಇವರು ಶ್ರೀಮುನಿಯಪ್ಪ ಎಂಬುವರು. ಅವರನ್ನು 1952ನೆಯ ಮಾರ್ಚ್‌ನಲ್ಲಿ ರಿಟೈರ್ ಮಾಡಬೇಕಾಗಿತ್ತು. ಆದರೆ ನನ್ನ ಹಿಂದೆ ಮುಖ್ಯ ಮಂತ್ರಿಗಳಾಗಿದ್ದ ಶ್ರೀ ಕೆ. ಸಿ. ರೆಡ್ಡಿರವರು ಸ್ಪೆಷಲ್ ಇಂಜಿನಿಯರಾದ ಶ್ರೀ ಮುನಿಯಪ್ಪನವರು ಪೂನಾದಲ್ಲಿದ್ದಾಗ ಬಹಳ ಪ್ರಮುಖವಾದ ಮತ್ತು ಉತ್ತಮವಾದ ದೊಡ್ಡ ದೊಡ್ಡ ಕಟ್ಟಡದ ಕೆಲಸಗಳನ್ನು ಮಾಡಿದ್ದಾರೆಂದು ಹೇಳಿ ಬಹಳ ಶ್ಲಾಘನೆ ಮಾಡಿದ್ದರು. ನಾನು ಅದನ್ನು ಮನಸ್ಸಿನಲ್ಲಿಟ್ಟುಕೊಂಡು ಅವರನ್ನು ಐದು ವರ್ಷಗಳವರೆಗೆ ನೇಮಿಸಿದೆ ಮತ್ತು ಅವರ ವಿಷಯವಾಗಿ ಬಂದಿದ್ದ ಸರ್ಟಿಫಿಕೇಟುಗಳು ಕೂಡ ಇದೆ. ಅವುಗಳನ್ನೆಲ್ಲವನ್ನೂ ನೋಡಿ ಈ ಸ್ಪೆಷಲ್ ಇಂಜಿನಿಯರನ್ನು ನೇಮಕ ಮಾಡಿದ್ದು. ಇದರಲ್ಲೇನೂ ಲೋಪ ನನಗೆ ಕಂಡುಬರಲಿಲ್ಲ. ಅದನ್ನೇಕೆ ಇಲ್ಲಿ ಇಷ್ಟು ದೊಡ್ಡದಾಗಿ ಹೇಳಬೇಕಾಗಿತ್ತೋ ನನಗೆ ಗೊತ್ತಾಗಲಿಲ್ಲ. ಅವರೂ ಕೂಡ ಒಳ್ಳೆಯ ಸಹೃದಯದ ಮನೋಭಾವದಿಂದ ಕೆಲಸವನ್ನು ಚೆನ್ನಾಗಿ ಮಾಡಿದರು. ಆದರೆ ಲೆಕ್ಕಾಚಾರವನ್ನು ಕ್ರಮವಾಗಿ ಎಂದರೆ ಅಪ್‌ಟುಡೇಟಾಗಿ ಇಡಬೇಕು ಎನ್ನುವುದನ್ನೂ ಅವರು ಮರೆತು ಬಿಟ್ಟರು ನನಗೂ ಹೇಳಲಿಲ್ಲ. ಸರ್ಕಾರದವರೂ ಗಮನಿಸಲಿಲ್ಲ. "Accounts are in an unsatisfactory condition. I want more Staff" ಎಂದು ಕೂಡ ಕೇಳಲಿಲ್ಲ. ಅವರೂ ಒಂದು ತಪ್ಪು ಮಾಡಿದರು, ಇದನ್ನೇ ಒಂದು ದೊಡ್ಡ ವಿಷಯವನ್ನಾಗಿ ಮಾಡಿದ್ದಾರೆ. ಈ ಸಂದರ್ಭದಲ್ಲಿ ಇಷ್ಟು ಹೇಳುತ್ತೇನೆ; ಸ್ಪೆಷಲ್ ಇಂಜಿನಿಯರಾಗಲಿ ಎಲ್ಲರೂ ಧೈರ್ಯದಿಂದ ಚೆನ್ನಾಗಿ ಕೆಲಸ ಮಾಡಿದ್ದಾರೆ. ದಕ್ಷತೆಯಿಂದ ಕೆಲಸ ಮಾಡಿದ್ದಾರೆ. ಅವರು ತಪ್ಪುಗಳನ್ನೇನೂ ಮಾಡಿಲ್ಲ ಎಂದು ಹೇಳುವುದಿಲ್ಲ. ಅವರೂ ಮಾಡಿದ್ದಾರೆ. ಆದರೆ ಅವರೇನೂ ಅಂತಹ ದೊಡ್ಡ ತಪ್ಪುಗಳನ್ನೇನೂ ಮಾಡಿಲ್ಲ. ತಪ್ಪುಗಳು ಆಗುತ್ತದೆ. ಇಲ್ಲವೆಂದು ಹೇಳುವುದಕ್ಕಾಗುವುದಿಲ್ಲ. ಅವೆಲ್ಲಾ ಸಾಮಾನ್ಯವಾದವುಗಳು. ಈಗ ನಮ್ಮ ದೇಶದಲ್ಲಿರುವ ಭದ್ರ, ನುಗು, ಲಕ್ಕವಳ್ಳಿ ಮುಂತಾದ ಯಾವುದೇ ಪ್ರಾಜೆಕ್ಟುಗಳನ್ನು ತೆಗೆದುಕೊಂಡು ಪರಿಶೀಲಿಸಲಿ ಅಲ್ಲಿಯೂ ಕೂಡ ಅದೇ ತರಹದ ಆರೋಪಣೆಗಳು ತಪ್ಪುಗಳು ಕಂಡು ಬರದೇ ಇದ್ದರೆ ಅದಕ್ಕಾಗಿ ತಾವು ಸಭಿಕರು ಯಾವ ರೀತಿ ಶಿಕ್ಷೆಕೊಟ್ಟರೂ ತಲೆಬಾಗಿ ವಹಿಸಿಕೊಳ್ಳಲು ಸಿದ್ಧವಾಗಿದ್ದೇನೆಂದು ಹೇಳುತ್ತೇನೆ. ಇನ್ನೇನು ಹೆಚ್ಚಾಗಿ ಹೇಳಲಾರೆ.

ಈ ಕಟ್ಟಡ ಆಗದಿದ್ದರೆ ಏನು ಪರಿಸ್ಥಿತಿ ಉಂಟಾಗುತ್ತಿತ್ತು ಎನ್ನುವ ವಿಷಯದಲ್ಲಿ ಅನೇಕರು ಇಲ್ಲಿ ಮಾತಾನಾಡಿದ್ದಾರೆ. ಈ ಹಿಂದೆ ಆಂಧ್ರ ರಾಜ್ಯ ಸ್ಥಾಪನೆಯಾದ ಸಂದರ್ಭದಲ್ಲಿ ಕರ್ನೂಲನ್ನು ರಾಜಧಾನಿಯನ್ನಾಗಿ ಮಾಡುವ ಸಂದರ್ಭದಲ್ಲಿ ಸುಮಾರು ಒಂದು ಕೋಟಿ ರೂಪಾಯಿಗಳಿಗಿಂತಲೂ ಹೆಚ್ಚು ಹಣವನ್ನು ಕಟ್ಟಡಗಳನ್ನು ರಸಿಡೆನ್ಸಿಯಲ್

760-10

ಕ್ವಾರ್ಟರ್ಸ್‌ಗಳನ್ನು ಕಟ್ಟಲು ವೆಚ್ಚ ಮಾಡಿದರು. ಕಟ್ಟಡಗಳು ಈಗೇನಾಗಿವೆಯೋ ಗೊತ್ತಿಲ್ಲ. ಈಗ ಹೈದರಬಾದು ರಾಜಧಾನಿಯಾಯಿತು. ಅಲ್ಲಿ ಕಟ್ಟಿದ್ದ ಕಟ್ಟಡಗಳು ಈಗೇನಾಗಿವೆಯೋ ಗೊತ್ತಿಲ್ಲ.

ಕೆಲವರು ಇಂತಹ ಒಂದು ಕಟ್ಟಡವಿಲ್ಲದಿದ್ದರೆ ಏನಾಗಿತ್ತು ಮತ್ತು ಇಷ್ಟು ದುಬಾರಿ ವೆಚ್ಚದಲ್ಲಿ ಸರಿಯಾದ ಅಂದಾಜಿಲ್ಲದೆ ಏಕೆ ಕಟ್ಟಬೇಕಾಗಿತ್ತು ಎಂಬ ಆರೋಪಣೆ ಮಾಡಿದರು. ನಿವೃತ್ತ ಚೀಫ್ ಇಂಜಿನಿಯರುಗಳ ಸಮಿತಿ ಒಪ್ಪಿದ ಮೂಲ ನಕ್ಷೆಯ ರೀತಿಯಾಗಿ ವಿಧಾನ ಸೌಧವನ್ನು ನಿರ್ಮಾಣ ಮಾಡಲಾಗಿದೆ. ತಮಗೆ ಪ್ಲಾನನ್ನು ತೋರಿಸಲಿಲ್ಲ ಎಂಬ ಸ್ವಾಭಿಮಾನದ ಕೋಪವನ್ನು ಶ್ರೀನರಸಿಂಹಯ್ಯನವರು (ನಿವೃತ್ತ ಚೀಫ್ ಇಂಜನಿಯರು ಹಾಗೂ ವಿಚಾರಣಾ ಸಮಿತಿಯ ಸದಸ್ಯರು) ನನ್ನ ಮೇಲೆ ತೋರಿಸಿದ್ದಾರೆ. ಪ್ರತಿಯಾಗಿ ಅಂದಾಜನ್ನು ತಯಾರು ಮಾಡಿ ಅದನ್ನು ಪರಿಶೀಲಿಸಿ ಮಂಜೂರಾದ ಅನಂತರ ಕೆಲಸ ಆರಂಭಿಸುವ ಮಾರ್ಗವನ್ನು ಅನುಸರಿಸಿದ್ದರೆ ಈ ಕಟ್ಟಡದ ಇನ್ನೂ 8-10 ವರ್ಷಗಳಾಗಿದ್ದರೂ ಮುಗಿಯುತ್ತಿರಲಿಲ್ಲ. ಈ ಭವನದ ನಿರ್ಮಾಣದಿಂದ ಸರ್ಕಾರ ಸಾಲದ ಹಣಕ್ಕೆ ಬಡ್ಡಿ ಕೊಡಬೇಕಾಗಿ ಬಂದಿದೆ ಎಂದು ಒಂದು ಆರೋಪಣೆ. ಇದು ಹೇಗಿದೆ ಎಂದರೆ, ಗಂಡ ಹೆಂಡತಿ ಇದ್ದರಂತೆ ಆ ಗಂಡ ಒಂದು ದಿನ ತನ್ನ ಹೆಂಡತಿಯ ಹತ್ತಿರ ಬಂದು ಈ ವಾರ ನಾನು ಎರಡೂವರೆ ಸಾವಿರ ರೂಪಾಯಿಗಳನ್ನು ಮಿಗಿತಾಯ ಮಾಡಿದ್ದೇನೆ ಎಂದು ಹೇಳಿದನಂತೆ. ಇದಕ್ಕೆ ಕಾರಣವನ್ನು ಕೇಳಿದಾಗ ಅವಳ ಗಂಡ ಆಕೆ ಸುಮಾರು ಒಂದೂವರೆ ಸಾವಿರ ರೂಪಾಯಿ ಬೆಲೆ ಬಾಳುವಂತಹದು ಒಂದು ಚಿನ್ನದ ಅಡ್ಡಿಗೆ ಬೇಡ ಎಂದು ಹೇಳಿದ್ದಕ್ಕಾಗಿ 200 ರೂಪಾಯಿಗಳು ಬಾಳುವ ಸೀರೆಯನ್ನು ಬೇಡ ಎಂದು ಹೇಳಿದ್ದಕ್ಕಾಗಿ ಮತ್ತು ಇನ್ನು ಕೆಲವು ಒಡವೆಗಳು ಬೇಡವೆಂದದ್ದಕ್ಕಾಗಿ ಈ ರೀತಿ ಎರಡೂವರೆ ಸಾವಿರ ರೂಪಾಯಿ ಉಳಿತಾಯವಾಯಿತು ಎಂದು ಹೇಳಿದನಂತೆ. ಈ ಭವನ ನಿರ್ಮಾಣವಾಗದಿದ್ದರೆ ಹೆಚ್ಚು ಬಾಡಿಗೆಯನ್ನು ಸರ್ಕಾರ ಕೊಡಬೇಕಾಗಿ ಬರುತ್ತಿತ್ತು ಎಂಬ ವಿಷಯ ಈ ಅರವತ್ತು ವರ್ಷದ ಅರುಳು ಮರುಳು ಮನಸ್ಸಿಗೆ ಹೊಳೆಯಲಿಲ್ಲವೇ? ಈ ವಿಧವಾದ ಮನಸ್ಸಿನಿಂದ ಒಂದು ಆರೋಪವನ್ನು ಮಾಡಿದ್ದಾರೆ. ಇದನ್ನು ಪರೀಕ್ಷೆ ಮಾಡಿಲ್ಲ. ಪರೀಕ್ಷೆ ಮಾಡದೆ ಒಂದು ದೊಡ್ಡ ರಿಮಾರ್ಕನ್ನು ಪಾಸು ಮಾಡಿದ್ದಾರೆ. ಈ ಕಟ್ಟಡಕ್ಕೆ ತಗಲಿದ ವೆಚ್ಚ ಸುಮಾರು 180 ಲಕ್ಷ ರೂಪಾಯಿಗಳನ್ನು ಹೇಗೆ ಒದಗಿಸಿದರು ಎಂದು ಆರೋಪಣೆ ಮಾಡಿದ್ದಾರೆ. ಈ ವರದಿಯಲ್ಲಿ "Where do you get this amount of 180 lakhs of Rupees" ಎಂಬ ಪ್ರಶ್ನೆ ಇದೆ. ಇದನ್ನು ಸರಿಯಾಗಿ ಎಗ್ಸಾಮಿನ್ ಮಾಡದೆ ಈ ರೀತಿ ಹೇಳಿರುವುದು ತಪ್ಪು. ಪರೀಕ್ಷೆ

ಮಾಡಿದ್ದರೆ ತಾನೇ ತಾನಾಗಿ ತಿಳಿಯುತ್ತಿತ್ತು. ಈಗ ಪಂಚವಾರ್ಷಿಕ ಯೋಜನೆಯ ಪ್ರಾಜೆಕ್ಟ್‌ಗಳಿಗೆ ಸುಮಾರು ಎಂಟು ಕೋಟಿ ನಿಗದಿಯಾಗಿತ್ತು. ಈಗ 5 ಕೋಟಿ ರೂಪಾಯಿಗಳ ಮೇಲೆ ಖರ್ಚಾಗಿದೆ. ಇದರಿಂದ ಹಣವನ್ನು ತೆಗೆದುಕೊಂಡು ಈ ಕಟ್ಟಡವನ್ನು ಕಟ್ಟಲಿಲ್ಲ. ಈಗ ಆಗಿರತಕ್ಕ ಪಂಚವಾರ್ಷಿಕ ಯೋಜನೆಯ ಕಾರ್ಯಕ್ಕೆ ಅಡ್ಡಿಯಾಗಿದೆ ಎಂದು ಹೇಳಿದ್ದಾರೆ. ಈ ಪಂಚವಾರ್ಷಿಕ ಯೋಜನೆಯಲ್ಲಿದ್ದ ಭದ್ರ, ತುಗು, ತುಂಗಾ ಮತ್ತು ಇನ್ನೂ ಏನೇನು ಇತರ ಪ್ರಾಜೆಕ್ಟ್‌ಗಳಿದ್ದುವೋ ಅವು ನಡೆಯುತ್ತಲೇ ಇದ್ದು ಅವಕ್ಕೆ ನಿಗದಿಯಾದ ಖರ್ಚು ವೆಚ್ಚವಾಗುತ್ತಲೇ ಇದೆ. ಯಾವ ರೀತಿಯ ಅಡಚಣೆಗಳೂ ಆಗಿ ಕೆಲಸ ನಿಂತಿಲ್ಲ. ಪ್ರತಿಯೊಂದು ಪಂಚವಾರ್ಷಿಕ ಯೋಜನೆಯ ಪ್ರಾಜೆಕ್ಟ್‌ನ ಫಿಗರ್ಸ್‌ನ್ನು ತೆಗೆದು ನೋಡಿದರೆ ಈ ವರ್ಕ್ಸ್ ವಿಷಯದಲ್ಲಿ ಸರ್ಕಾರ ಹೇಗೆ ಕೆಲಸ ಮಾಡಿದೆ, ಹಣ ಹೇಗೆ ಉಪಯೋಗವಾಗಿದೆ ಎನ್ನುವುದು ಗೊತ್ತಾಗುತ್ತೆ. ಯಾವಾಗಲು ಸತ್ಯವನ್ನು ಆಡಬೇಕು. ತಾವು ಪರಿಶೀಲನೆ ಮಾಡುವಾಗ ಮನೆಯಲ್ಲಿ ಕುಳಿತು ಈ ವಿಷಯದಲ್ಲಿ ಏನೂ ಡೆವೆಲೆಪ್‌ಮೆಂಟ್ ಆಗಿಲ್ಲ ಎಂದು ಹೇಳತಕ್ಕದ್ದು ಸರಿಯಾದದ್ದಲ್ಲ. ಈ ಸಮಿತಿ ಇದನ್ನೇ ದೊಡ್ಡದು ಮಾಡಿ ಆರೋಪಣೆಯನ್ನು ಮಾಡಿದೆ.

Even today if you examine the various projects under the first and the second five-year plans we will find that every project has proceeded according to plan and the necessary funds are being furnished. ಸ್ವಾಮಿ, ಈಗ ಇನ್ನು ಹೆಚ್ಚಿನ ವಿಷಯಗಳನ್ನು ಈ ಸಭೆಗೆ ಅರಿಕೆ ಮಾಡಿಕೊಳ್ಳುವುದಕ್ಕೆ ಅವಕಾಶವಿಲ್ಲ. ಇದೇ ರಿಪೋರ್ಟಿನಲ್ಲಿರುವ ಇತರ ವಿಷಯಗಳನ್ನು ಚರ್ಚಿಸುವುದಕ್ಕೆ ಅವಕಾಶವಿಲ್ಲ. ನ್ಯಾಯವಾಗಿರುವುದನ್ನು ಹೇಳದೆ ಈ ರಿಪೋರ್ಟನ್ನೇ ಹೇಗೆ ದೊಡ್ಡದು ಮಾಡಿ ಆರೋಪಿಸಿದ್ದಾರೆಂಬುದನ್ನು ಪ್ರಾಸಂಗಿಕವಾಗಿ ಈ ಸಭೆಯಲ್ಲಿ ನಿಮ್ಮ ಅವಗಾಹನೆಗಾಗಿ ತಂದಿದ್ದೇನೆ. ಈ ವರದಿಯಲ್ಲಿ ಅನೇಕ ಅಧಿಕಾರಿಗಳ ಮೇಲೆ ಆರೋಪಣೆಗಳಿರುವುದರಿಂದ ಈ ವರದಿಯನ್ನು ಪ್ರಕಟಿಸದೆ ಇದ್ದ ಸಂದರ್ಭದಲ್ಲಿ ನಾನೇ ಹೋಗಿ ಇದನ್ನು ಪ್ರಕಟಿಸಬೇಕೆಂದು ಒತ್ತಾಯ ಮಾಡಿದೆನು. ಶ್ರೀಮಾನ್ ನಿಜಲಿಂಗಪ್ಪ ಅವರನ್ನು ಒಮ್ಮತದಿಂದ ಮುಖ್ಯ ಮಂತ್ರಿಗಳಾಗಿ ಚುನಾವಣೆಯಾಗಲು ನಮ್ಮ ಪಕ್ಷದ ರೀತಿಯಂತೆ ನನ್ನ ಅಳಿಲು ಸೇವೆಯನ್ನು ಮಾಡಿ ನಾನೂ ಸಹಾಯ ಮಾಡಿದೆ. ಆದರೆ ಮುಖ್ಯ ಮಂತ್ರಿಗಳಾದ ದಿವಸದಿಂದ ನನ್ನೊಂದಿಗೆ ಮಾತನಾಡುವುದಕ್ಕೆ ಕೂಡ ಅವರಿಗೆ ಮನಸ್ಸಿಲ್ಲ. ಅನಂತರ ಒಮ್ಮೆ ಫೋನಿನಲ್ಲಿ ಮಾತನಾಡಿಸಿದರು. ನನ್ನೊಡನೆ ಮಾತನಾಡಲಿಲ್ಲ. ನಮ್ಮ ಇಂಜನಿಯರುಗಳು ಏನು ಸಮಾಧಾನ ಹೇಳುತ್ತಾರೋ ಆ ಸಮಾಧಾನವನ್ನು

ಈ ಆರೋಪಣೆಗಳ ಮಗ್ಗುಲಲ್ಲಿ ಒಂದೊಂದು ಪಬ್ಲಿಷ್ ಮಾಡುವುದು ತಪ್ಪೋ ಸರಿಯೋ ಎಂಬುದನ್ನು ನಿರ್ಧರಿಸಿಕೊಳ್ಳಿ ಎಂದು ಹೇಳಿದೆ. ಅವರಿಗೆ ನನ್ನ ಪ್ರಾರ್ಥನೆಯ ಮೇಲೆ ಕರುಣೆ ಉಂಟಾಗಲಿಲ್ಲ. ಹಿಂದೆ ಹೇಳಿದ ಹಾಗೆ ನಾನು ಯಾರನ್ನು ಆಕ್ಷೇಪಣೆ ಮಾಡುವುದಿಲ್ಲ. ಗ್ರಹಗತಿ ಚೆನ್ನಾಗಿಲ್ಲದಿದ್ದರೆ ಹೀಗಾಗುತ್ತದೆ. ಎಂದು ಸಮಾಧಾನಪಟ್ಟು ಕೊಳ್ಳುತ್ತೇನೆ. ಈ ರೀತಿಯಾಗಿ ಕಷ್ಟಪಟ್ಟು ಕೆಲಸ ಮಾಡಿದಂಥ ಇಂಜಿನಿಯರುಗಳ ಮೇಲೆ ಆರೋಪಣೆಗಳ ಸುರಿಮಳೆ ಮಾಡಿ ಅವರು ಏನು ಹೇಳುತ್ತಾರೋ ಅದನ್ನು ಪ್ರಕಟಿಸದೆ ಹೋದರೆ ನಿಷ್ಪಕ್ಷಪಾತ ಭಾವನೆಯಾಗುವುದಿಲ್ಲ. ನಿಷ್ಪಕ್ಷಪಾತ ವರ್ತನೆಯಾಗುವುದಿಲ್ಲ.

These members of the committee have driven out many of these engineers. ಇಂಜಿನಿಯರುಗಳು ತಾವು ಇಂಥಿಂಥವರು ಹೋಗಿದ್ದೆವು ಎಂದು explanation ಕೊಡುವುದಕ್ಕೆ ಹೋದರೆ, ಅದನ್ನು ಬರೆದುಕೊಳ್ಳುವುದಕ್ಕಾಗುವುದಿಲ್ಲ. Say `yes or no' ಎಂದು ಹೇಳಿದರೆಂದೂ ತಿಳಿದು ಬಂದಿದೆ. They have behaved more like over lords than like impartial judges who are interested in ascertaining the truth.

ಈ ಇಂಜಿನಿಯರುಗಳಿಗೆ ಸ್ಟೇಟ್‌ಮೆಂಟ್‌ಗಳನ್ನು ಬರೆದು ಕೊಡಿ ಎಂದು ನಾನು ಹೇಳಿದೆ. ಅವರಿಗೆ ಎಷ್ಟು ಭಯವುಂಟಾಗಿದೆ ಏಂದರೆ ನನ್ನ ಹತ್ತಿರ ಬಂದರೆ ನಮ್ಮ ಮನೆ ಮುಂದೆ ಸಿ.ಐ.ಡಿ.ಗಳನ್ನೂ ಹಾಕಿರುವುದರಿಂದ ಬರುವುದಿಲ್ಲವೆಂದು ಹೇಳುತ್ತಾರೆ ನನ್ನ ಮನೆಯ ಮುಂದೆ ನಾನು ಎಷ್ಟೋ ಸಲ ಪರೀಕ್ಷೆ ಮಾಡಿದ್ದೇನೆ. ಮನೆಯ ಎದುರುಗಡೆ ಒಂದು ಕಾಂಪೌಂಡ್ ಇದೆ. ಅಲ್ಲಿ ಪ್ರತಿ ದಿನವೂ ಒಬ್ಬಿಬ್ಬರೂ ಸಿ.ಐ.ಡಿ.ಗಳು ಇರುತ್ತಾರೆ. ಅವರಿಗೆ ಹಿಂದಿನಿಂದಲೂ ಇದ್ದ ಸ್ವಾಮಿ ಭಕ್ತಿ ಇದೆ. ನನ್ನನ್ನು ನೋಡಿದ ಕೂಡಲೇ ಎದ್ದು ನಮಸ್ಕಾರ ಮಾಡುತ್ತಾರೆ. ಮಂತ್ರಿಗಳಾಗಲಿ, ಮುಖ್ಯ ಮಂತ್ರಿಗಳಾಗಲಿ ಹೀಗೆ ಮಾಡಿದ್ದಾರೆಂದು ನಾನು ಆರೋಪಣೆ ಮಾಡುವುದಕ್ಕೆ ಹೋಗುವುದಿಲ್ಲ. ಇದನ್ನು ಯಾರು ಮಾಡಿದ್ದಾರೆಯೋ ನನಗಾದರೂ ಗೊತ್ತಿಲ್ಲ. ಆದರೆ ಅಲ್ಲಿ ನಡೆಯತಕ್ಕ ವಿದ್ಯಮಾನಗಳು ಹೀಗಿವೆ. ರಾಜಕೀಯದಲ್ಲಿಯೂ ಅಷ್ಟೇ ನಾನು ಎಲ್ಲಿಗಾದರೂ ಹೋದರೆ ನನ್ನ ಅನೇಕ ಸ್ನೇಹಿತರೇ ಮಾತನಾಡುವುದಕ್ಕೆ ಬರುವುದಿಲ್ಲ. ಅದು ಯಾರ ಏರ್ಪಾಡೊ ಗೊತ್ತಾಗುವುದಿಲ್ಲ. ಬೀದಿಯಲ್ಲಿರುವ ಜನರು ಕಾಂಗ್ರೆಸ್ಸೇತರರು ಹೂವಿನ ಹಾರ ಹಾಕುತ್ತಾರೆ ಆದರೆ ನಮ್ಮವರೇ ಮಾತನಾಡುವುದಿಲ್ಲ. ನಾನು 25 ವರ್ಷಗಳಿಂದಲೂ ಕೈಲಾದ ಸೇವೆಯನ್ನು

ಸೆಂಟ್ರಲ್ ಜೈಲಿನಿಂದ ಹಿಡಿದು ಅಠಾರಾ ಕಚೇರಿಯವರೆಗೂ ಮಾಡಿದ್ದೇನೆ. ಈ ಒಂದು ವಾತಾವರಣ ಏನಿದೆಯೋ ಅದು ವಿಷಮಯ ಮೋಸಮಯ ವಾತಾವರಣವಾಗಿದೆ. ಹೀಗಾಗಿರುವುದನ್ನು ಹಿಂದೆಂದೂ ನೋಡಿರಲಿಲ್ಲ. ಈ ಒಂದು ವಿಷಮಯ ವಾತಾವರಣದಲ್ಲಿ ಹುಟ್ಟಿದ್ದ ಶಿಶು ಈ ವರದಿ. ಈ ವರದಿಯನ್ನು ನಂಬುವುದಕ್ಕಿಂತ ಮೊದಲು ಒಂದಂಶವನ್ನು ಗಮನಿಸಬೇಕೆಂದು ಈ ಸಭೆಯಲ್ಲಿ ವಿನಯಪೂರ್ವಕವಾಗಿ ಪ್ರಾರ್ಥನೆ ಮಾಡುತ್ತೇನೆ. ಆಗ ಚೀಫ್ ಇಂಜಿನಿಯರ್ ಆಗಿದ್ದ ಶ್ರೀ ಗಂಗಾಧರ್ ಅವರೂ ಶ್ರೀ ಅನಂತಾಚಾರ್ ಅವರೂ ಇದ್ದರು. ಮತ್ತು ಎಕ್ಸಿಕ್ಯೂಟಿವ್ ಇಂಜಿನಿಯರುಗಳು ಯಾರಿದ್ದರೋ ಅಸಿಸ್ಟೆಂಟ್ ಇಂಜಿನಿಯರುಗಳು ಯಾರಿದ್ದರೋ ಅವರೆಲ್ಲರೂ ಆರೋಪಣೆಗಳಿಗೆ ಏನು ಸಮಾಧಾನ ಹೇಳುತ್ತಾರೋ ಅದನ್ನು ಬರವಣಿಗೆಯಲ್ಲಿ ಕೊಡಿ ಎಂದು ಕೇಳಿ ಈ ವರದಿಯಾದರೂ ಕೂಡ ಈ ಸಭೆಯ ನಿಯಮಗಳ ಪ್ರಕಾರ ರಚಿತವಾದ ಎಸ್ಟಿಮೇಟ್ ಕಮಿಟಿಯವರ ವರದಿಯ ಸಲಹೆಗೆ ಅನುಗುಣವಾಗಿರುವುದು. ಆದ್ದರಿಂದ ಈ ಸಭೆಯಲ್ಲಿ ಹೇಳುತ್ತೇನೆ. ಈ ಸಭೆಯವರು ನಿಷ್ಪಕ್ಷಪಾತವಾಗಿ ತೀರ್ಮಾನ ಮಾಡಬೇಕೆಂಬ ಭಾವನೆ ಇರತಕ್ಕವರು All the technical details I do not know. I am a layman. ಆದುದರಿಂದ ನಾನು ಅದರ ಅಂಶಗಳನ್ನು ಪ್ರಸ್ತಾಪಿಸಿ ಒಂದು ಸಮಾಧಾನದ ಉತ್ತರ ಕೊಡುವುದಕ್ಕೆ ಈ ದಿವಸ ನನಗೆ ಆ ಶಕ್ತಿ ಇಲ್ಲ. ಆ ಕಮಿಟಿಯವರು ಯಾವ ಯಾವುದನ್ನು ಬರೆದುಕೊಳ್ಳುವುದಿಲ್ಲವೆಂದು ನಿರಾಕರಿಸಿದ್ದಾರೋ ಅವೆಲ್ಲವನ್ನು ಬರವಣಿಗೆಯಲ್ಲಿ ಕೊಡಿ ಎಂದು ಹೇಳಿ ಸರ್ಕಾರದವರು ಅದನ್ನು ತೆಗೆದುಕೊಂಡು ಮುದ್ರಿಸಿ ಈ ಸಭೆಗೆ ಹಂಚಿ ಆಮೇಲೆ ತೀರ್ಮಾನ ಮಾಡಬೇಕು. ಕೊನೆಯ ವಿಷಯವನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ. ಈ ವರದಿಯಲ್ಲಿ Military trucks ತೆಗೆದುಕೊಂಡಿದ್ದಾರೆ ಅದು ಅಕ್ರಮವಾದದ್ದು ಎಂದು ಬರೆದಿದ್ದಾರೆ. ಇದು ಬಹಳ ದಿವಸಗಳಿಂದ ವಿವಾದದಲ್ಲಿದೆ. ನಮ್ಮ ಪಕ್ಷದ ಅನೇಕ ಮಹನೀಯರು ನಮ್ಮ ಪಕ್ಷದ ದೊಡವರಿಗೆ ಅನ್ಯಾಯಗಳಾಗಿವೆ ಎಂದು ಬರೆದರು ಇದಾಗಿ ಎರಡು ವರ್ಷಗಳಾಗಿವೆ. ನಾನು ಹೇಳಿದುದನ್ನು ಅವರು ಹೇಳಿದುದನ್ನು ಸರ್ಕಾರದವರು ಹೇಳಿದುದನ್ನು ಕೇಳಿ ಎಲ್ಲವನ್ನೂ ಪರಿಶೀಲನೆ ಮಾಡಿ ಅವರು ''ಈ transaction ಸರ್ಕಾರದ ಹಣವನ್ನುಳಿಸಿದೆ. ದುರ್ವ್ಯಯ ಮಾಡಿಲ್ಲವೆಂದು ಬರೆದಿದ್ದಾರೆ. ಆ ಕಾಗದವನ್ನು ಎಂದಾದರೂ ಒಂದು ದಿವಸ ಪ್ರೊಡ್ಯೂಸ್ ಮಾಡುತ್ತೇನೆ. ಹೀಗೆ ಇಂಥ ಒಂದು transaction ಬಗ್ಗೆ ಒಬ್ಬ ದೊಡ್ಡ ವ್ಯಕ್ತಿ ಇಂಡಿಯಾ ದೇಶಕ್ಕೆಲ್ಲ ಗೊತ್ತಿರತಕ್ಕ ವ್ಯಕ್ತಿ ರಿಕಾರ್ಡುಗಳನ್ನು ನೋಡಿ ಇದು ಸರ್ಕಾರದ ದುಡ್ಡು ಉಳಿಸಿದ್ದೆ ಎಂದು ಬರೆದಿದ್ದಾರೆ. ಅವರ ವಿಷಯದಲ್ಲಿ ಕೂಡ ಆರೋಪಣೆ ಮಾಡಿದ್ದಾರೆ. ಅದನ್ನು

ನೋಡಿದರೆ ಅವರ ಮನಸ್ಸಿನ ಮಟ್ಟ ಎಲ್ಲಿಗೆ ಇಳಿದಿದೆ ಎಂದು ಕಾಣುತ್ತದೆ. ಇಷ್ಟು ಹೇಳಿದ್ದೇನೆ ಇನ್ನು ಸಮಯ ಸಂದರ್ಭ ಬಂದಾಗ ಉಳಿದ ವಿಷಯಗಳನ್ನು ಪ್ರಸ್ತಾಪ ಮಾಡುತ್ತೇನೆ.

The terms of reference to the Committee are :

i) to examine the state of accounts and to assess the present position;

ii) to scrutinise the expenditure on the building having due regard to its nature, magnitude and purpose, and to examine the procedure adopted in fixing rates and executing works. and

iii) to examine the possibility of effecting economies in further expenditure on the work.

There every body will see except two chapters of this Report The rest of the Report goes outside the field of the terms of reference.

ಈ ವಿಧಾನ ಸೌಧವನ್ನು ಕಟ್ಟಿದ್ದನ್ನು ಕುರಿತು ಈ ಒಂದು ವಾರದಲ್ಲಿ ನನಗೆ ಸ್ನೇಹಿತರುಗಳಿಂದ ಸುಮಾರು 500 ಕಾಗದಗಳು ಬಂದಿವೆ ಮತ್ತು ಹಿಂದೆ 800 ಕಾಗದಗಳು ಈ ಕೆಲಸವನ್ನು ಪ್ರಶಂಸೆ ಮಾಡಿ ಬಂದಿವೆ. ಅಮೇರಿಕದಿಂದ ಒಬ್ಬ ಮಿತ್ರರು ಸ್ವಯಂ ಪ್ರೇರಿತವಾಗಿ ಕಾಗದ ಬರೆದಿರುತ್ತಾರೆ. ಅದರಲ್ಲಿ ವಿಧಾನ ಸೌಧ ಕಟ್ಟಿರುವ ಜಾಗವೇ ಲಕ್ಷಣವಾಗಿದೆ ಎಂದು ಬರದಿರುತ್ತಾರೆ. ಈ ಮೂರು ಮಂದಿ ಸಮಿತಿಯ ಸದಸ್ಯರು "ಇದು ಚೆನ್ನಾಗಿಲ್ಲ, ಇದನ್ನು ಕಟ್ಟಬಾರದಾಗಿತ್ತು" ಎಂದರೆ ನನಗಾದರೂ ಒಂದು ಸಲ ದಿಗ್ಭ್ರಮೆಯಾಗುತ್ತದೆ. ಇವರು ಏಕೆ ಇಷ್ಟು ಮಂದಿ ಚೆನ್ನಾಗಿಲ್ಲವೆಂದು ತೆಗಳುತ್ತಾರೆ ಎಂದೆನ್ನಿಸುತ್ತದೆ. "ದೇವರೇ ಅನ್ಯಾಯವೋ ಸುನ್ಯಾಯವೋ ನಿನ್ಯಾಯವನ್ನು ನೀನೇ ಬಲ್ಲೆ" ಎಂದು ಕನಕದಾಸರು ಏನು ಹೇಳಿದ್ದಾರೆಯೋ ಅದನ್ನೇ ನಾನು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

(ವಿಧಾನ ಸಭಾ ಕಲಾಪ ದಿನಾಂಕ : 22-3-1957)

## 8) 1959ರ ಯುವ ಜನೋತ್ಸವದ ಗಲಭೆಗಳಿಗೆ ಸಂಬಂಧಿಸಿದ ಚರ್ಚೆ

ಸ್ವಾಮಿ, ಈ ಚರ್ಚೆ ಪ್ರಾರಂಭವಾದಾಗ ಇದನ್ನು ಪಕ್ಷಾತೀತ ಮನೋಭಾವದಿಂದ ಚರ್ಚಿಸಬೇಕಾದದ್ದು ಅಗತ್ಯವೆಂಬುದಾಗಿ ವಿರೋಧ ಪಕ್ಷದ ನಾಯಕರು ಹೇಳಿದ್ದನ್ನು ನಾನು ಸಂತೋಷವಾದ ಮನಸ್ಸಿನಿಂದ ಕೇಳಿದೆ, ಮಿಕ್ಕವರು ಏನೇ ಮಾತಾಡಿದರೂ ಸಭೆಯ ಧೋರಣೆ ಮಾತ್ರ ಅದಾಗಿರಬೇಕು.

ಈ ದಿವಸ ಉಂಟಾಗಿರತಕ್ಕ ಪರಿಸ್ಥಿತಿಯಿಂದ ನಮ್ಮೆಲ್ಲರಿಗೂ ಎಷ್ಟು ವ್ಯಾಕುಲವಾಗಿದೆ, ಮನಸ್ಸಿಗೆಷ್ಟು ವ್ಯಥೆ, ಸಂಕಟ ಉಂಟಾಗಿದೆ ಎಂದರೆ ನಮ್ಮ ಮನೆಯಲ್ಲಿರುವ ಇಬ್ಬರು ಸಹೋದರರುಗಳಿಗೆ ಘೋರವಾಗಿ ಒಂದು ವ್ಯಾಜ್ಯ ಸಂಭವಿಸಿದರೆ ನಮಗೆ ಹೇಗೆ ಮನಸ್ಸಿಗೊಂದು ವ್ಯಥೆಯಾಗುತ್ತದೆಯೋ ಹಾಗಾಗಿದೆ. ಈ ವಿಚಾರದಲ್ಲಿ ಕೆಲವರು ವಿದ್ಯಾರ್ಥಿಗಳನ್ನು ಆಕ್ಷೇಪಿಸಬಹುದು. ನಮ್ಮ ಭಾರತ ದೇಶವು ಒಂದು ಏಕ ರೂಪತೆಯನ್ನು ಹೊಂದಿದ ಮೇಲೆ ಆ ವಿದ್ಯಾರ್ಥಿಗಳು ನಮ್ಮವರೇ, ಪೋಲೀಸಿನವರು ನಮ್ಮವರೇ. ಆದುದರಿಂದ ಈ ಇದೊಂದು ಕುಟುಂಬದ ವ್ಯಾಜ್ಯವಾಗಿದೆ. ಆದುದರಿಂದ ಇದನ್ನು ಯಾವ ದಾರಿಯಲ್ಲಿ ಉಪಶಮನ ಮಾಡಿದರೆ ಎಲ್ಲವು ಸರಿಹೋಗುತ್ತೆಂಬುದನ್ನು ಅರಿತು ಅದರಂತೆ ತೀರ್ಮಾನ ಮಾಡತಕ್ಕದ್ದು ದೇಶೋದ್ಧಾರಕವಾದ ಮಾರ್ಗ. ಹಾಗೆ ಒಂದು ನ್ಯಾಯವಾದ ಹಾದಿ ಹಿಡಿಯದೆ ಇದು ಒಂದು ಉಲ್ಬಣ ಸ್ಥಿತಿಗೆ ಬರುವ ರೀತಿಯಲ್ಲಿ ಮಾಡತಕ್ಕದ್ದು ದೇಶೋದ್ಧಾರಕರ ಮಾರ್ಗವಲ್ಲ.

ಮಿಕ್ಕ ಯಾವ ದೃಷ್ಟಿಯಲ್ಲಿಯೂ ಪ್ರಸ್ತಾಪ ಮಾಡದೆ ಹೈಕೋರ್ಟಿನ ಜಡ್ಜ್‌ರವರ ಅಧ್ಯಕ್ಷತೆಯಲ್ಲಿ ಒಂದು ವಿಚಾರಣಾ ಸಮಿತಿಯನ್ನು ನೇಮಕ ಮಾಡಬೇಕೆಂದು ಹೇಳುತ್ತಾರೆ. ಯಾವ ರೀತಿಯಾಗಿ ಜಡ್ಜ್‌ಗಳ ಎನ್‌ಕ್ವಯಿರಿ ಕೆಲಸ ಮಾಡುತ್ತದೆ ಎನ್ನುವುದು ತಮಗೆಲ್ಲರಿಗೂ ಗೊತ್ತಿದೆ. ಅಂತಹ ಕಡೆಗಳಲ್ಲಿ ಸಾಕ್ಷಿಗಳನ್ನು ಕೇಳ ಬೇಕಾಗುತ್ತದೆ. ಮತ್ತು ಅದರಲ್ಲಿ ವಾದ ವಿವಾದಗಳಾಗುತ್ತವೆ. ಮತ್ತೆ ಕೆಲವು ಕಡೆಗಳಲ್ಲಿ ಲಾಯರುಗಳನ್ನಿಟ್ಟುಕೊಳ್ಳಬೇಕಾಗುತ್ತದೆ. ಹಾಗೆ Judge and litigation go together, it ultimately leads to the most bitter and acrimonious litigation that has ever taken place in the country. ಹಾಗೆ ಇದೆಲ್ಲವನ್ನೂ ಉಪಶಮನ ಮಾಡಬೇಕು, ಸಮಾಧಾನ ಮಾಡಬೇಕು, ತನ್ಮೂಲಕ ಸ್ನೇಹವನ್ನು ಸಾಧಿಸಬೇಕು ಎನ್ನುವ ಉದ್ದೇಶ ಯಾರಿಗಾದರೂ ಇದ್ದರೆ ಜಡ್ಜಿಗಳಿರುವ ಕಮಿಟಿಗಳನ್ನು ಯೋಚನೆ ಮಾಡಬಾರದು, ಇದನ್ನು ತಾವೇ ಯೋಚನೆ ಮಾಡಿ.

Has any court or any judge in the country created peace among the litigants? His duty is to see, examine and find out the truth according to his conscience. But actually it results in litigation.

ಆದುದರಿಂದ ಇದು ನಮ್ಮ ಒಳಕುಟುಂಬಗಳ ವ್ಯಾಜ್ಯ. ವಿದ್ಯಾರ್ಥಿಗಳಿಗೂ ಪೋಲೀಸಿನವರಿಗೂ ಆದ ಘರ್ಷಣೆಗೂ, ಕಾಂಗ್ರೆಸ್ಸಿಗೂ ಸಂಬಂಧವಿದೆ ಎನ್ನುವ ಅಭಿಪ್ರಾಯವನ್ನುಂಟು ಮಾಡಿದರೆ ಅದರಿಂದ ದೇಶಕ್ಕೆ ಕೆಟ್ಟದಾಗುವುದಕ್ಕೆ ಸಹಾಯವಾಗುತ್ತದೆ. ಬೇರೆ ಯಾವುದೂ ಆಗುವುದಿಲ್ಲ. ಇಂತಹ ಪ್ರಕ್ಷುಬ್ಧ ಪರಿಸ್ಥಿತಿ ಉಂಟಾದಾಗಲೆಲ್ಲ ದೇಶದ ಪ್ರಜಾಪ್ರತಿನಿಧಿಗಳು ಯಾವ ಮಾರ್ಗವನ್ನು ಅನುಸರಿಸಿ ದೇಶದಲ್ಲಿ ಸಮಾಧಾನ ಉಂಟುಮಾಡಬೇಕು ಶಾಂತಿ ಸ್ಥಾಪನೆ ಮಾಡಬೇಕು ಎನ್ನುವುದನ್ನು ಯೋಚನೆ ಮಾಡಬೇಕು. ಆ ರೀತಿ ಯೋಚನೆ ಮಾಡಿ ಈ ಸಭೆಯಲ್ಲಿ ಎಲ್ಲರೂ ಒಪ್ಪತಕ್ಕಂತಹ ಕಮಿಟಿಯನ್ನು ವಿಚಾರಣಾ ಸಮಿತಿಯಾಗಿ ಮಾಡಿದರೆ ಶಾಂತಿ ಸ್ಥಾಪನೆಯಾಗಬಹುದೇ ಹೊರತು ಈಗ ಹೇಳುವಂತೆ Enquiry Committee ಎಂದು ಮಾಡಿದರೆ ವಿದ್ಯಾರ್ಥಿಗಳೂ ಸಾಕ್ಷಿ ಹೇಳಿವರು. ಪೋಲೀಸಿನವರು ಸಾಕ್ಷಿ ಹೇಳುವರು ಮತ್ತು ಇನ್ನಿತರರೂ ಸಾಕ್ಷಿ ಹೇಳಬೇಕಾಗಿ ಬರುತ್ತದೆ. ಇವೆಲ್ಲ ದೃಷ್ಟಿಯಿಂದಲೂ ತಾವು ನೋಡಬೇಕು. ಕೆಲವರು ಉದ್ವೇಗದಿಂದ 12-13 ವರ್ಷಗಳಿಂದಲೂ ಸ್ವರಾಜ್ಯ ಬಂದರೂ ಇನ್ನೂ ಪೋಲೀಸು ರಾಜ್ಯ ನಡೆಯಬೇಕೋ, ಹೇಗೆ ಎಂದು ಹೇಳುವುದು ನ್ಯಾಯವಾಗಿದೆಯೇ ಎನ್ನುವುದು ಪ್ರಶ್ನೆ. ಯಾರಿಗೆ ಆಗಲೀ ಪ್ರಜಾಪ್ರಭುತ್ವದಲ್ಲಿ ಕಾನೂನು ಭಂಗಮಾಡತಕ್ಕದ್ದು ಪ್ರಜಾಪ್ರಭುತ್ವಕ್ಕೆ ಅತಿ ಅಪಾಯಕರವಾದ ಮಾರ್ಗ; ದೇಶದ ಜನಗಳ ಉಪಯೋಗಕ್ಕೆ ಅನುಗುಣವಾದ ಮಾರ್ಗವಲ್ಲ. ಸದ್ಗುಣದಿಂದ ಕೂಡಿರುವ ಜನರೆಲ್ಲ ಈ ಕಾನೂನನ್ನು ಸರಿಯಾಗಿ ಪರಿಪಾಲಿಸಬೇಕಾದುದು ಅವಶ್ಯಕ. ಒಬ್ಬನು ತನ್ನ ಕರ್ತವ್ಯವನ್ನು ಅನುಸರಿಸುವಾಗ ಕಾನೂನನ್ನು ಅನುಸರಿಸಬೇಕಾಗಿಲ್ಲ ಎಂದು ಪ್ರತಿಯೊಬ್ಬನೂ ಅವನವನ ಪರಿಸ್ಥಿತಿಗೆ ತಕ್ಕಂತೆ ತಿಳಿದುಕೊಂಡಿದ್ದರೆ, ಅದರಿಂದ ದೇಶಕ್ಕೆ ಬಹಳ ದೊಡ್ಡ ಅನರ್ಥವಾಗುತ್ತದೆ. ಇಂಡಿಯಾ ದೇಶದಲ್ಲೆಲ್ಲಾ ವಿದ್ಯಾರ್ಥಿಗಳಾಗಲಿ ಕಾರ್ಮಿಕರಾಗಲಿ ಮಿಕ್ಕ ಯಾವ ಯಾವ ವರ್ಗದ ಜನಗಳೇ ಆಗಲಿ ರಚನೆಯಾಗತಕ್ಕ ಕಾನೂನನ್ನು ಪರಿಪಾಲನೆ ಮಾಡಬೇಕು. ನಮ್ಮ ಮನಸ್ಸಿಗೆ ಸರಿತೋರದ ಕಾನೂನನ್ನು ಉಲ್ಲಂಘಿಸುವ ಮನಸ್ಸಿಟ್ಟುಕೊಂಡು ಈ ರೀತಿಯಾದ ವಾತಾವರಣವನ್ನುಂಟುಮಾಡುತ್ತಾ

ಹೋದರೆ ಏಷ್ಯಾಖಂಡದಲ್ಲೇ ಪ್ರಜಾಪ್ರಭುತ್ವ ಎನ್ನುವುದು ಅಳಿದು ಹೋಗುತ್ತದೆ. ಇಡಿ ಏಷ್ಯಾದಲ್ಲಿ ನಮ್ಮ ಇಂಡಿಯಾ ದೇಶದಲ್ಲಿ ಈ ಪ್ರಜಾಪ್ರಭುತ್ವ ಇನ್ನೂ ಉಳಿದುಕೊಂಡು ಬಂದಿದೆ. ಈ ತರಹದ ಒಂದು ಭಾವನೆಗೆ ಅವಕಾಶ ಕೊಟ್ಟರೆ ಮುಂದೆ ನಮ್ಮ ದೇಶ ಕಮ್ಯುನಿಸ್ಟರ ಪಾಲಾಗುತ್ತದೆ. ಇಲ್ಲವೇ ಮಿಲಿಟರಿಯವರ ಪಾಲಾಗುತ್ತದೆ. ಈ ದಿವಸ ಇಂಡಿಯಾ ದೇಶದಲ್ಲೆಲ್ಲಾ ವಿದ್ಯಾರ್ಥಿಗಳು ಅಸಮಾಧಾನ ಮನಸ್ಕರಾಗಿರುವುದರಿಂದ ತಮ್ಮ ತಮ್ಮವರಿಗೇ ತೊಂದರೆಯಾಗುತ್ತದೆ. ನಾನು ರಷ್ಯಾಕ್ಕೆ ಹೋಗಿ ನೋಡಿದಾಗ ಅಲ್ಲಿ

Though it is called the Government of the Workers, the first casualty in Russia is the right of the workers themselves. No trade union can go on strike. It is not as though every worker is being made the head of the factory or of the administration. There, the party rules. It is not the workers that rule.

When Communist dictatorship comes into existence it is the students, and the workers, who want agitation, that became the first casualties, their rights will be suppressed and suppressed for ever.

ಆದುದರಿಂದ ಈ ವಿದ್ಯಾರ್ಥಿಗಳಲ್ಲಿ ಅಶಿಸ್ತನ್ನು ಯಾವ ಕಾರಣದಿಂದಲಾದರೂ ಉಪಯೋಗ ಮಾಡಲು ಅವಕಾಶ ಮಾಡಿಕೊಟ್ಟರೆ ಅದು ದೇಶದ್ರೋಹ ಅಲ್ಲದೆ ಅದು ಮಹಾಪಾಪವಾಗುತ್ತದೆ. ಕಾಂಗ್ರೆಸ್ ಪಕ್ಷದವರು ವಿದ್ಯಾರ್ಥಿಗಳನ್ನು ಹೀಗೆ ಮಾಡು, ಹಾಗೆ ಮಾಡು ಎಂದು ಹೇಳಿ ಚಿತಾವಣೆ ಮಾಡುವುದಕ್ಕೆ ಸಾಧ್ಯ ಇಲ್ಲ, ನಮ್ಮ ಪಕ್ಷಕ್ಕಿರುವ ವ್ಯಾಜ್ಯಗಳೇ ಸಾಕಾಗಿದೆ. ನಾನು ಮತ್ತು ಈ ಸಭೆಯ ಇತರ ಪಕ್ಷದ ಅನೇಕ ಸದಸ್ಯರು ಅಥವಾ ಬೆಂಗಳೂರಿನಲ್ಲಿರುವ ಬೇರೆ ಯಾವ ಪಕ್ಷದವರೇ ಆಗಲಿ ವಿದ್ಯಾರ್ಥಿಗಳಿಗೆ ಶಿಸ್ತು ಪರಿಪಾಲನೆ ಮಾಡಬೇಕೆಂದು ಮೊಟ್ಟ ಮೊದಲು ತಿಳಿಸಿದರೆ ಅವರಿಗೆ ಉಪಕಾರವಾಗಿ ಮುಂದೆ ಚೆನ್ನಾಗಿ ವಿದ್ಯಾಭ್ಯಾಸವನ್ನು ಮಾಡಿ ಜೀವನೋಪಾಯಕ್ಕೆ ಅನುಗುಣವಾದ ಕೆಲಸ ಕಾರ್ಯಗಳನ್ನು ಪಡೆಯುವುದಕ್ಕೆ ಅನುಕೂಲವಾಗುತ್ತದೆ. ಇಲ್ಲದಿದ್ದರೆ ಓದುವುದಕ್ಕೆ ಅವಕಾಶ ಸಿಕ್ಕದೆ ಮುಂದೆ ಬೀದಿಯಲ್ಲಿ ಸುಮ್ಮನೆ ಓಡಾಡಿಕೊಂಡು ತೊಂದರೆಪಡಬೇಕಾಗುತ್ತದೆ. ನನ್ನ ಜೊತೆಯಲ್ಲಿ ಓದಿದವರೆಷ್ಟೋ ಜನ ಪೋಲಿಸು,

ಮತ್ತು ಇನ್ನಿತರ ಇಲಾಖೆಯಲ್ಲಿದ್ದಾರೆ. ಅದರಲ್ಲಿ ಒಬ್ಬರು ಸರಿಯಾಗಿ ಓದದೇ ಹೋದುದರಿಂದ ಇನ್ನೂ ದಫೇದಾರರಾಗಿಯೇ ಇದ್ದಾರೆ. ವಿದ್ಯಾರ್ಥಿಯ ದೆಸೆಯಲ್ಲಿ ವಿದ್ಯಾರ್ಥಿಗಳು ದೇಶದಲ್ಲಿ ಕ್ಷೋಭೆಯುಂಟಾಗುವಂತೆ ಮಾಡಿ ಪ್ರಜಾಪ್ರಭುತ್ವವನ್ನು ಬೇರು ಸಹಿತ ಕಿತ್ತುಹಾಕಬೇಕೆಂದು ಹೇಳುವುದು ಅಪಾಯಕರ. ಮತ್ತೊಂದು ಸಂಗತಿಯನ್ನು ಹೇಳುತ್ತೇನೆ. ಈ ರೀತಿ ಕಾನೂನನ್ನು ಉಲ್ಲಂಘನೆ ಮಾಡುವುದು ಸರಿಯಾದುದಲ್ಲ ಎನ್ನುವ ಮನಸ್ಸು ಖಚಿತವಾಗಿ ವಿದ್ಯಾರ್ಥಿಗಳಲ್ಲಿ, ಪೋಲಿಸಿನವರಲ್ಲಿ ಮತ್ತು ಸಾರ್ವಜನಿಕರಲ್ಲಿ ಉಂಟುಮಾಡಬೇಕು.

ನಾನು ವಿದ್ಯಾರ್ಥಿಗಳಿಗೆ ಹೇಳುತ್ತೇನೆ. ಪೋಲೀಸಿನವರು ಕಾನೂನಿಗೆ ಅನುಸಾರವಾಗಿ 'ಇಲ್ಲಿಂದ ಮುಂದೆ ಹೋಗಬೇಡಿ ಎಂದರೆ ಮುಂದಕ್ಕೆ ಹೋಗಬಾರದು. ಪೋಲೀಸಿನವರು ಹೇಳಿದುದಕ್ಕಿಂತ ಮುಂದೆ ಹೋದರೆ ಅದು ಕಾನೂನಿನ ಉಲ್ಲಂಘನೆಯಾಯಿತು. ಅದು ಪ್ರಜಾಪ್ರಭುತ್ವ ತತ್ವಕ್ಕೆ ಅನುಗುಣವಾದ ವೃತ್ತಿಯಲ್ಲ. ಶ್ರೀಮಾನ್ ವೀರಣ್ಣ ಗೌಡರು, ರಾಮಕೃಷ್ಣ ಹೆಗ್ಗಡೆಯವರು ಮತ್ತು ನಾನು ಏನು ಮಹದಾಸೆ ಇಟ್ಟುಕೊಂಡಿದ್ದೇವೆಂದರೆ, ನಮ್ಮ ಇಂದಿನ ವಿದ್ಯಾರ್ಥಿಗಳು ಮುಂದೆ ಒಳ್ಳೆಯ ವಿದ್ಯಾಭ್ಯಾಸ ಪಡೆದು, ಶಾಸನ ಸಭೆಯ ಸದಸ್ಯರಾಗಿ ಮಂತ್ರಿಗಳಾಗಲೀ, ಪೋಲೀಸು ಅಧಿಕಾರಿಗಳಾಗಿಯಾಗಲೀ ಅಥವಾ ಮುಖ್ಯವಾದ ಒಳ್ಳೆಯ ಸ್ಥಾನಗಳನ್ನು ಪಡೆಯುವರೆಂಬ ಆಸೆ ಇಟ್ಟುಕೊಂಡಿದ್ದೇವೆ. ಹಾಗಾಗಬೇಕಾದರೆ ಅವರೆಲ್ಲರೂ ವಿದ್ಯಾರ್ಥಿಗಳಾಗಿ ಮೊಟ್ಟ ಮೊದಲನೆಯದಾಗಿ ಕಾನೂನನ್ನು ಪರಿಪಾಲಿಸಬೇಕಾದುದು ಯೋಗ್ಯ 3,000 ವರ್ಷಗಳಿಂದಲೂ ರೋಮ್, ಗ್ರೀಸ್ ಸ್ಪಾರ್ಟ ದೇಶಗಳಲ್ಲಿ ಪ್ರಜಾಪ್ರಭುತ್ವವಿತ್ತು.

ಅಲ್ಲಿಯ ಚರಿತ್ರೆಗಳನ್ನು ನೋಡಿದರೆ ಈ ದಿವಸ ಮೊಟ್ಟಮೊದಲು ಕಾನೂನುಬದ್ಧವಾಗಿ ನಡೆಯುವುದನ್ನು ಕಲಿಸುತ್ತಿದ್ದಾರೆ. ಕಾನೂನಿಗೆ ಬದ್ಧರಾಗಿ ನಡೆಯತಕ್ಕದ್ದು ಪ್ರತಿಯೊಬ್ಬರ ಕರ್ತವ್ಯ. ಈ ದಿವಸ ಓಟು ಆಸೆಗೋಸ್ಕರ ಯಾರು ಏನಾದರೂ ಮಾಡಲಿ ನಮಗೆ ಓಟು ಕೊಟ್ಟರೆ ಸಾಕು ಎನ್ನುವಂಥ ರಾಜಕೀಯವನ್ನು ಯಾರೇ ನಡೆಸಿದರೂ ಕೂಡ ಅದು ಸರಿಯಾದ ರಾಜಕೀಯವಲ್ಲ. ಇನ್ನು ಹೆಚ್ಚಿನ ಕಠಿಣ ಪದಗಳನ್ನು ನಾನು ಉಪಯೋಗಿಸುವುದಿಲ್ಲ. ಅಸೆಂಬ್ಲಿಯ ಸದಸ್ಯರೂ ಮತ್ತು ಕೌನ್ಸಿಲ್ ಸದಸ್ಯರೂ ಕೂಡ we must be firm as well as tactful firm ಎಂದು ಎಲ್ಲರಿಗೂ ಚಿತ್ರಹಿಂಸೆಯನ್ನು ಕೊಡುವುದಕ್ಕಾಗುವುದಿಲ್ಲ. Tactful ಆಗಿ ಇರುತ್ತೇವೆಂದು Firmness ಬಿಡುವುದಕ್ಕಾಗುವುದಿಲ್ಲ. If it is mere tactfulness it becomes ultimately

cowardice if it is merely firmness ultimately it becomes tyranny. Wisdom consists in harmonising the two elements in proper proportions and managing them well.

ಈ ದಿವಸ ಕಬ್ಬನ್ ಪಾರ್ಕಿನಲ್ಲಿ ಸೆಂಟ್ರಲ್ ಕಾಲೇಜ್ ರಸ್ತೆಯಲ್ಲಿ ಮತ್ತು ಇತರ ಕಡೆ ಬೀದಿ ದೀಪಗಳನ್ನು ಒಡೆದು ಹಾಕಿರುವುದನ್ನು ನೋಡಿ ನನ್ನ ಮನಸ್ಸಿಗೂ ಬಹಳ ವ್ಯಥೆಯಾಗಿದೆ. ಬೆಂಗಳೂರಿನ ಪಟ್ಟಣ ಸೌಂದರ್ಯಕ್ಕೆ ಹೆಸರು ಪಡೆದಂಥಾದ್ದು ಆ ಸೌಂದರ್ಯಕ್ಕೆ ಕುಂದುಂಟಾಗಿದೆ. ವಿದ್ಯಾರ್ಥಿಗಳು ನನ್ನ ಹತ್ತಿರ ಬಂದಾಗ ನಾನು ಅವರಿಗೆ Every lamp post that stands there is proclaiming your indiscipline. ಎಂದು ಹೇಳಿದೆ. ವಿದ್ಯಾರ್ಥಿಗಳು ಈ ರೀತಿಯಾಗಿ ಕಾನೂನನ್ನು ಉಲ್ಲಂಘಿಸಿ ಅಚಾತುರ್ಯಗಳನ್ನು ನಡೆಸಿದರೆ. ಅದು ತಪ್ಪು ಎಂದು ನಿಷ್ಪಕ್ಷಪಾತವಾಗಿ ಹೇಳಬೇಕು. ಹಾಗೆಯೇ ಪೋಲೀಸಿನವರ ವಿಚಾರದಲ್ಲಿಯೂ ಹೇಳಬೇಕು. ನಾನು ಸೆಂಟ್ರಲ್ ಕಾಲೇಜ್ ಹಾಸ್ಟಲ್ ಮತ್ತು ಕುರುಬರ ಹಾಸ್ಟಲುಗಳನ್ನು ನೋಡಿದ್ದೇನೆ. ಕಾನೂನಿನ ಪ್ರಕಾರ ನಡೆಯಬೇಕಾದ್ದು ಪೋಲೀಸಿನವರ ಕರ್ತವ್ಯ. ಪೋಲೀಸಿನವರು ಸೆಂಟ್ರಲ್ ಕಾಲೇಜ್ ಹಾಸ್ಟಲ್ ಮತ್ತು ಕುರುಬರ ಹಾಸ್ಟಲ್‌ಗಳೊಳಗೆ ಹೋಗಿ ಅನೇಕ ಕೊಠಡಿಗಳಲ್ಲಿದ್ದ ವಿದ್ಯಾರ್ಥಿಗಳನ್ನು ಸದೆಬಡಿದಿದ್ದಾರೆನ್ನುವುದು ಕಾನೂನಿನ ಅನುಸಾರವಾದುದಲ್ಲ. ಪೋಲೀಸಿನವರಿಗೆ ಯಾರಾದರೂ ತಪ್ಪು ಮಾಡಿದ್ದಾರೆಂಬುದು ಕಂಡುಬಂದರೆ ಅಂಥವರನ್ನು ಅರೆಸ್ಟ್ ಮಾಡಿ ಪೋಲೀಸ್ ಸ್ಟೇಷನ್ನಿಗೆ ಕರೆದು ಕೊಂಡು ಹೋಗಬಹುದು. ಆದರೆ ಯಾರನ್ನೂ ಹೊಡೆಯುವ ಹಾಗಿಲ್ಲ. Even a murderer cannot be beaten like that.

ಖೂನಿ ಮಾಡಿದವರನ್ನು ಕೂಡ ಹೊಡೆಯುವುದಕ್ಕೆ ಅಧಿಕಾರವಿಲ್ಲ. ಈ ರೀತಿ ಇರುವುದರಿಂದ ಸೆಂಟ್ರಲ್ ಕಾಲೇಜ್ ಹಾಸ್ಟೆಲ್ ಮತ್ತು ಕುರುಬರ ಹಾಸ್ಟೆಲ್‌ಗಳಲ್ಲಿ ವಿದ್ಯಾರ್ಥಿಗಳನ್ನು ಹೊಡೆದಿರತಕ್ಕದ್ದು ಪೋಲೀಸಿನವರು ಕಾನೂನನ್ನು ಉಲ್ಲಂಘಿಸಿದಂತಾಗಿದೆ. ಕುರುಬರ ಹಾಸ್ಟಲ್ ಬಳಿ ಒಬ್ಬ ವಿದ್ಯಾರ್ಥಿ ಸತ್ತನೆಂದು ಹೇಳುವಾಗ, ಅವನು ಮಹಡಿಯ ಮೇಲಿನಿಂದ ಬಿದ್ದು ಸತ್ತ ಎಂದರೆ ಅದನ್ನು ಯಾರೂ ನಂಬುವುದಿಲ್ಲ. ಒಂದು ವರ್ಷದ ಹಿಂದೆ ಇದೇ ಸ್ಥಳದಲ್ಲಿ ಒಂದು ವಿಷಯವನ್ನು ಹೇಳಿದೆ, ಪೋಲೀಸಿನವರು ಮುನಿಯಮ್ಮನ ಮೇಲೆ ಅತ್ಯಾಚಾರ ಮಾಡಿದರೆಂದು ಹೇಳಿದರೂ ಕೂಡ ಪೋಲೀಸರ ಹೇಳಿಕೆಯನ್ನು ನಂಬಿ ಕೊಂಡು ಪೋಲೀಸಿನವರು ಏನು ತಪ್ಪು ಮಾಡಲಿಲ್ಲವೆಂದು ಆಗಿನ ಗೃಹ

ಮಂತ್ರಿಗಳು ಹೇಳಿದರು. ಆ ದಿನ ಮಾತನಾಡುವಾಗ ನಾನು The ghost of muniamma will pursue ಎಂದು ಹೇಳಿದ್ದೆ. ಆದುದರಿಂದ ಈ ಸರ್ಕಾರವೇ ಆಗಲೀ ಯಾರೇ ಆಗಲೀ Police version ನಂಬಿಕೊಂಡು ಆ ವಿದ್ಯಾರ್ಥಿ ಅಲ್ಲಿಂದ ಬಿದ್ದ, ಈ ವಿದ್ಯಾರ್ಥಿ ಇಲ್ಲಿ ಬಿದ್ದ ಆ ರೀತಿ ಸತ್ತ, ರೀತಿ ಸತ್ತ, ಎಂದರೆ ನಮಗೆ ಒಳ್ಳೆಯದಾಗುವುದಿಲ್ಲ, ಇದಕ್ಕಿಂತಲೂ ಮನುಷ್ಯನನ್ನು ಮೀರಿಸುವ ಶಕ್ತಿ ನಮ್ಮನ್ನು ನಡೆಸುತ್ತಿದೆ. ಆ ಶಕ್ತಿ ನಮಗೆ ತಕ್ಕ ಶಿಕ್ಷೆ ಮಾಡುತ್ತದೆ.. ಮೈಸೂರಿನಲ್ಲಿ ಸತ್ತ ಮನುಷ್ಯರಲ್ಲಿ ಕಲ್ಲೇಟಿನಿಂದ ಸತ್ತನೋ, ಗುಂಡಿನೇಟಿನಿಂದ ಸತ್ತನೋ ಎಂಬುದು ಇನ್ನೂ ಗೊತ್ತಿಲ್ಲ, ಇನ್ನು ಪೋಸ್ಟ್ ಮಾರ್ಟ್‌ಮ್ ರಿಪೋರ್ಟ ಬಂದಿಲ್ಲವೆಂದು ಮಾನ್ಯ ಮುಖ್ಯಮಂತ್ರಿಗಳು ಹೇಳಿದರು. ಮೂರು ದಿವಸಗಳಾದರೂ, ಪೋಸ್ಟ ಮಾರ್ಟಮ್ ಎಗ್ಜಾಮಿನೇಷನ್ ಮಾಡಲಿಲ್ಲವೇ? ಏಟು ಹೊಡೆದ ತಕ್ಷಣ ಡಾಕ್ಟರುಗಳು ಪರೀಕ್ಷೆ ಮಾಡಬೇಕು, ಎಷ್ಟೋ ದಿವಸಗಳಾದ ಮೇಲೆ ಪರೀಕ್ಷೆ ಮಾಡುವುದಕ್ಕಾಗುವುದಿಲ್ಲ, ಮೂರು ದಿವಸಗಳಾದ ಮೇಲೆ ಪರೀಕ್ಷೆ ಮಾಡುವುದಕ್ಕಾಗುವುದಿಲ್ಲ. ಮೂರು ದಿವಸಗಳಿಂದ ರಿಪೋರ್ಟ್ ಬಾರದೆ ಇರತಕ್ಕದ್ದು ಎಲ್ಲಕ್ಕಿಂತಲೂ ಹೆಚ್ಚಾದ ರುಜುವಾತು ಎಂದು ಹೇಳುತ್ತೇನೆ, ಈ ಸರ್ಕಾರದಲ್ಲಿ ದಕ್ಷತೆ ಎಷ್ಟು ಪ್ರಮಾಣದಲ್ಲಿರಬೇಕೋ ಅಷ್ಟು ಪ್ರಮಾಣದಲ್ಲಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ. If this Government is not able to obtain the result of the postmortem examination immediately and if it has to wait further report even now it is not an honourable explanation to offer to this house. ಮುಖ್ಯ ಮಂತ್ರಿಗಳಾಗಲಿ ಗೃಹಮಂತ್ರಿಗಳಾಗಲಿ ಪೋಸ್ಟ್ ಮಾರ್ಟ್‌ಮ್ ಮಾಡಿ ಪೋಸ್ಟ್ ಮಾರ್ಟಮ್ ಸರ್ಟಿಫಿಕೇಟನ್ನು ಬರೆಯುವವರಲ್ಲ. ಎಲ್ಲಕ್ಕೂ ಮಂತ್ರಿಗಳದೇ ತಪ್ಪು ಎಂದು ನಾನು ಹೇಳುವವನಲ್ಲ. ಈ ವಿಚಾರದಲ್ಲಿ ಯಾರು ನಿಧಾನ ಮಾಡಿದ್ದಾರೆ ಎಂಬುದನ್ನು ವಿಚಾರಮಾಡಿ ತನಿಖೆ ಮಾಡತಕ್ಕ ಶಕ್ತಿ ಮಂತ್ರಿಗಳಲ್ಲಿದೆ ಎಂದು ನಾನು ನಂಬಿಕೊಂಡಿದ್ದೇನೆ.

ಈ ಸಭೆಯ ಅನೇಕ ಸದಸ್ಯರು ವಿಚಾರಣಾ ಸಮಿತಿಯನ್ನು ಮಾಡಬೇಕೆಂದು ಹೇಳಿದ್ದಾರೆ. ಆ ವಿಚಾರಣಾ ಸಮಿತಿ ನಾನು ಮೊದಲೇ ಅರಿಕೆ ಮಾಡಿಕೊಂಡ ಹಾಗೆ, ಶಾಂತಿ ಸಮಾಧಾನಗಳ ಸ್ಥಾಪನೆ ರೂಪದಲ್ಲಿರಬೇಕು. ವಿಚಾರಣೆಗೆ ಹೋದರೆ ಸಾಕ್ಷಿಗಳ ವಿಚಾರಣೆ ವಾದ ವಿವಾದಗಳು ನಡೆಯಬೇಕು. ವಿಚಾರಣಾ ಕಮಿಟಿಯನ್ನೇನಾದರೂ ಶ್ರೀಮಾನ್ ವೆಂಕಟೇಗೌಡರು ಹೇಳಿದ ರೂಪದಲ್ಲಿ ಮಾಡಿದರೆ ವಿದ್ಯಾರ್ಥಿಗಳಿಗೆ ಐದಾರು

ತಿಂಗಳು ಬೇರೆ ಕೆಲಸವಿರುವುದಿಲ್ಲ. ಪೋಲೀಸಿನವರಿಗೂ ಅನೇಕರಿಗೂ ಬೇರೆ ಕೆಲಸವಿರುವುದಿಲ್ಲ. ಪ್ರತಿಯೊಂದು ಸಂಬಂಧದಲ್ಲಿಯೂ ವಿಚಾರಣಾ ಸಮಿತಿಯನ್ನು ಮಾಡುತ್ತಾ ಹೋದರೆ The police becomes demoralised.

ಇಂಗ್ಲೆಂಡಿನಲ್ಲಿ ಹೀಗಾಗುತ್ತದೆ, ಹಾಗಾಗುತ್ತದೆ ಎಂದು ಹೇಳುತ್ತಾರೆ. ಇಂಗ್ಲೆಂಡಿನಲ್ಲಿ ವಿದ್ಯಾರ್ಥಿಗಳು Strike ಮಾಡಿದ್ದಾರೆಂದು ನಾನು ಪತ್ರಿಕೆಗಳನ್ನು ಓದಿರುವುದರಲ್ಲಿ ನೋಡಿಲ್ಲ. ಪರೀಕ್ಷೆಗಳನ್ನು ಮುಂದಕ್ಕೆ ಹಾಕಿ ಎಂದು ಇಂಗ್ಲೆಂಡಿನಲ್ಲಿ ವಿದ್ಯಾರ್ಥಿಗಳು ಕೇಳುವುದನ್ನು ನಾನು ಇದುವರೆಗೆ ನೋಡಿಲ್ಲ. ರಜ ಹೆಚ್ಚಿಗೆ ಕೂಡ ಬೇಕೆಂದು ಹೇಳುವುದನ್ನು ಕೇಳಿಲ್ಲ. ನಮ್ಮ ವಿದ್ಯಾರ್ಥಿಗಳು ಕೂಡ ಇಂಗ್ಲೆಂಡಿನಲ್ಲಿ ಏನು ಸಂಪ್ರದಾಯವಿದೆಯೋ ಅದನ್ನು ಇಲ್ಲಿಯೂ ನಡೆಸುವಂತೆ ಅವರಿಗೆ ಹೇಳಬೇಕು. ಆದುದರಿಂದ ವಿದ್ಯಾರ್ಥಿಗಳ ಪ್ರತಿನಿಧಿಗಳನ್ನು ನಾವು ನಮ್ಮ ಮಕ್ಕಳು, ನಮ್ಮ ಸಹೋದರರು ಎಂದು ಭಾವಿಸಿ, ಅವರ ಸಂಗಡ ಮಾತನಾಡಿ ಅವರ ಮನಸ್ಸಿಗೆ ಸಮಾಧಾನವನ್ನು ಯಾವ ರೀತಿ ಉಂಟುಮಾಡಬೇಕು ಎಂದು ಆಲೋಚನೆ ಮಾಡಿಕೊಂಡು, ಅವರ ಮನಸ್ಸಿಗೆ ಪರಿವರ್ತನೆ ಮಾಡಿ ಸಮಾಧಾನ ಮಾಡೋಣ. ಪೋಲೀಸಿನವರು ಎಲ್ಲಿ ಅತ್ಯಾಚಾರ ನಡೆಸಿರುತ್ತಾರೆಯೋ ಅಲ್ಲಿ ಆ ಅತ್ಯಾಚಾರಗಳಿಗೆ ತಕ್ಕ ಶಿಕ್ಷೆ ಮಾಡತಕ್ಕ ವ್ಯವಸ್ಥೆಯನ್ನು ಸರ್ಕಾರ ಮಾಡುತ್ತದೆಂದು ನಾನು ನಂಬಿದ್ದೇನೆ.

(ವಿಧಾನ ಸಭಾ ಕಲಾಪ ದಿನಾಂಕ : 10-12-1959)

# 4. ಸಂವಿಧಾನ ರಚನಾ ಸಭೆಯ ನಡಿವಳಿ

ಶ್ರೀ ಕೆ. ಹನುಮಂತಯ್ಯ (ಮೈಸೂರು) : ಮಾನ್ಯ ಉಪಾಧ್ಯಕ್ಷರೆ, ಸ್ವಾಮಿ, ಕರಡು ಸಂವಿಧಾನವು ಸಂದರ್ಭಕ್ಕೆ ತಕ್ಕಂತೆ, ಏಕ ಸದನ ಅಥವಾ ದ್ವಿಸದನ ಶಾಸನ ಸಭೆಗೆ ಅವಕಾಶವನ್ನು ಒದಗಿಸಿದೆ. ಆಯ್ಕೆಯನ್ನು ಅದು ಸಂಬಂಧಪಟ್ಟ ರಾಜ್ಯಕ್ಕೆ ಬಿಟ್ಟಿದೆ. ಕೆಲವು ರಾಜ್ಯಗಳು ದ್ವಿಸದನ ಶಾಸನ ಸಭೆಯನ್ನು ಆರಿಸಿಕೊಂಡಿವೆ. ಮೂರು ರಾಜ್ಯಗಳು ಪ್ರಾಂತ್ಯಗಳು ಏಕ ಸದನ ಶಾಸನ ಸಭೆಯನ್ನು ಆರಿಸಿಕೊಂಡಿವೆ. ಒಂದು ದ್ವಿಸದನ ಶಾಸನ ಸಭೆಯು ಸದನ ಶಾಸನ ಸಭೆಯನ್ನು ಆರಿಸಿಕೊಂಡಿವೆ. ಒಂದು ದ್ವಿಸದನ ಶಾಸನ ಸಭೆಯ ಪರವಾಗೂ ವಿರುದ್ಧವಾಗೂ ನಾವು ವಾದಗಳನ್ನು ಚೆನ್ನಾಗಿಯೇ ತಿಳಿದಿದ್ದೇವೆ. ಈ ವಿಷಯದ ವಾಸ್ತವಿಕ ಅಂಶದ ಕಡೆಗೆ ಸದನದ ಗಮನ ಸೆಳೆಯ ಬಯಸುತ್ತೇನೆ. ಅದನ್ನು ಒಪ್ಪುವವರು ಅವಸರದ ಶಾಸನ ಪ್ರಕ್ರಿಯೆಗೆ ಅದೊಂದು ತಡೆಯಾಗಿರುತ್ತದೆ ಎಂದು ಸಾಮಾನ್ಯವಾಗಿ ಹೇಳುತ್ತಾರೆ. ನನ್ನ ಮಿತ್ರ ಶ್ರೀ ಭಾರತಿ ಅದಕ್ಕೆ ಒಳ್ಳೆಯ ನಿದರ್ಶನ ಕೊಟ್ಟರು.

ದ್ವಿಸದನ ಶಾಸನ ಸಭೆಯ ಪರವಾಗಿ ವಾದಿಸುತ್ತಿರುವ ನನ್ನ ಮಿತ್ರರು. ನಾವು ಒಂದು ಜವಾಬ್ದಾರಿಯುತ ಸರ್ಕಾರ ವ್ಯವಸ್ಥೆಗಾಗಿ ಸಂವಿಧಾನವನ್ನು ರಚಿಸುತ್ತಿದ್ದೇವೆ ಎಂದು ನೆನಪಿಟ್ಟುಕೊಳ್ಳಬೇಕು. ಅದರಲ್ಲಿ ಪಕ್ಷ ವ್ಯವಸ್ಥೆಯು ವಿಶಿಷ್ಟವಾದ ರೀತಿಯಲ್ಲಿ ಕೆಲಸಮಾಡುತ್ತದೆ. ಏಕಸದನ, ದ್ವಿಸದನ ಶಾಸನ ಸಭೆಗಳಲ್ಲಿ ಯಾವ ವ್ಯತ್ಯಾಸವನ್ನು ಅದು ಕಲ್ಪಿಸುವುದಿಲ್ಲ. ಅತ್ಯಂತ ಮುಖ್ಯವಾದ ನಿರ್ಣಯವನ್ನು ಮೇಲ್ಮನೆಯಲ್ಲಾಗಲಿ ಕೆಳಮನೆಯಲ್ಲಾಗಲಿ ಅಲ್ಲದೆ, ಪಕ್ಷದ ಸಭೆಯಲ್ಲಿ ತೆಗೆದುಕೊಳ್ಳಲಾಗುತ್ತದೆ. ಆದ್ದರಿಂದ ವಾಸ್ತವಿಕ ರಾಜಕಾರಣದ ದೃಷ್ಟಿಯಿಂದ ಪಕ್ಷದ ಸಭೆಯೇ ನಿಜವಾದ ಶಾಸನ ಸಭೆ ಎಂದು ನನಗೆ ತೋರುತ್ತದೆ. ಒಂದು ಪ್ರಶ್ನೆಯನ್ನು ಪಕ್ಷದ ಸಭೆಯಲ್ಲಿ ನಿರ್ಣಯಿಸಲಾಯಿತೆಂದ ಮೇಲೆ ಅದನ್ನು ಕೆಳಮನೆಯಲ್ಲಿ ಮಂಡಿಸುತ್ತಾರೋ ಮೇಲ್ಮನೆಯಲ್ಲಿ ಮಂಡಿಸುತ್ತಾರೋ, ಹತ್ತು ಸದನಗಳಿವೆಯೋ ಅದು ಮುಖ್ಯವಲ್ಲ. ವಿಷಯದ ಮೇಲೆ ಪಕ್ಷವು ನಿರ್ಣಯ ಕೈಗೊಂಡಿತೆಂದರೆ ಅವಸರದ ಶಾಸನ ಪ್ರಕ್ರಿಯೆಯನ್ನು ನಿವಾರಿಸುವ ಪ್ರಶ್ನೆ ಬರುವುದೇ ಇಲ್ಲ. ಆದ್ದರಿಂದ ಯಾವಾಗ.....

ಶ್ರೀ ಓ. ವಿ. ಅಳಗೇಶನ್ (ಮದರಾಸು : ಸಾಮಾನ್ಯ ) : ಮೇಲ್ಮನೆಯ ಸದಸ್ಯರು ಪಕ್ಷದ ಸದಸ್ಯರೂ ಆಗಿರುತ್ತಾರಲ್ಲವೆ?

760-11

**ಶ್ರೀ ಕೆ. ಹನುಮಂತಯ್ಯ** : ನಾನು ಹೇಳಲಿರುವುದೂ ಅದನ್ನೇ. ನೀವು ನನ್ನ ಪರವಾಗಿಯೇ ವಾದ ಮಾಡುತ್ತಿದ್ದೀರಿ. ಅಧಿಕಾರದಲ್ಲಿರುವ ಪಕ್ಷವು, ನಾವು ರಚಿಸುತ್ತಿರುವ ಸಂವಿಧಾನದ ಪ್ರಕಾರ ಮೇಲ್ಮನೆ ಕೆಳಮನೆಗಳೆರಡರಲ್ಲೂ ಬಹುಮತವನ್ನು ಪಡೆದಿರುತ್ತದೆ. ಏಕೆಂದರೆ, ಅದು ಚುನಾಯಿತವಾದ ಶಾಸನ ಸಭೆಯಾಗಿರುತ್ತದೆ. ಎರಡೂ ಸದನಗಳ ಪಕ್ಷ ಸದಸ್ಯರು ಜಂಟಿ ಸಭೆಯಲ್ಲಿ ಒಂದು ನಿರ್ಣಯವನ್ನು ಕೈಗೊಂಡರೆಂದರೆ, ಎಷ್ಟೇ ವಿರೋಧವಿದ್ದರೂ, ವಿರುದ್ಧವಾಗಿ ವಾದಗಳಿದ್ದರೂ ಆ ವಿವಕ್ಷೆಯಿಲ್ಲದೆ ನಿರ್ಣಯವು ಸ್ವೀಕೃತವಾಗುತ್ತದೆ. ಪರಿಸ್ಥಿತಿ ಹೀಗಿರುವುದರಿಂದ ಎರಡು ಸದನಗಳನ್ನು ಹೊಂದಿರುವುದು ದುಬಾರಿಯಾದ ಔಪಚಾರಿಕತೆ. ನನ್ನ ಸನ್ಮಾನ್ಯ ಮಿತ್ರರಾದ ಭಾರತಿ ಅವರು ಎರಡನೆಯ ಸದನದ ಉಪಯುಕ್ತತೆಯನ್ನು ತೋರಿಸುವ ಸಲುವಾಗಿ ಕಪ್ಪು ಸಾಸರ್ ನಿದರ್ಶನವನ್ನು ಕೊಟ್ಟರು. ಕಾಫಿಯನ್ನು ಕಪ್ಪಿಗೆ ಸುರಿದರೂ ಅಷ್ಟೆ, ಸಾಸರಿಗೆ ಸುರಿದರೂ ಅಷ್ಟೆ. ಕಾಫಿಯ ಉಷ್ಣತೆಯನ್ನು ನಿರ್ಧರಿಸುವುದು ಅದನ್ನು ತುಂಬಿಟ್ಟಿರುವ ಗಿಂಡಿ. ಇಲ್ಲಿ ಪಕ್ಷದ ಸಭೆಯೇ ಕಾಫೀ ತುಂಬಿದ ಗಿಂಡಿ, ನಾವು ಹೇಗೆ ಮತ ನೀಡಬೇಕೆಂಬುದನ್ನು ಅದು ನಿರ್ದರಿಸುತ್ತದೆ. ಆದ್ದರಿಂದ ಪ್ರಚಲಿತ ಪರಿಸ್ಥಿತಿಯಲ್ಲಿ ಹೇಗೆ ಎರಡನೆಯ ಸದನವು ಒಂದು ಉತ್ತಮವಾದ ವಿವೇಕಯುತವಾದ ಮಾರ್ಗವನ್ನು ತೋರಿಸುತ್ತದೆ ಎನ್ನುವುದು ನನಗೆ ನಿಜವಾಗಿಯು ಗೊತ್ತಾಗುವುದಿಲ್ಲ.

ಇನ್ನೊಂದು ವಿಷಯವಿದೆ. ಒಂದು ಒಕ್ಕೂಟದಲ್ಲಿ ಶಾಸಕಾಂಗ ವಲಯವು ಬಹುಮಟ್ಟಿಗೆ ಸೀಮಿತವಾದದ್ದು, ಘಟಕದ ಶಾಸನ ಸಭೆಗಳಿಗೆ ಸಂಬಂಧಿಸಿದಂತೆ ಪ್ರಸ್ತುತ ಸಂವಿಧಾನದಲ್ಲಿ ಕೇಂದ್ರವು ಶಾಸಕಾಂಗ ಮತ್ತು ಆಡಳಿತಾಂಗ ಕ್ಷೇತ್ರಗಳ ಬಹು ಪಾಲನ್ನು ತೆಗೆದುಕೊಂಡು ಬಿಡುತ್ತದೆ. ಉಳಿಯುವುದು ತುಂಬಾ ಸೀಮಿತವಾದದ್ದು. ಆ ಸೀಮಿತ ಕ್ಷೇತ್ರಕ್ಕಾಗಿ ಎರಡು ಸದನಗಳನ್ನು ಇಟ್ಟುಕೊಳ್ಳುವುದು ತುಂಬಾ ದುಬಾರಿಯೂ ಅನಗತ್ಯವೂ ಆದುದು ಎಂದು ನನಗನ್ನಿಸುತ್ತದೆ. ನಾವು ಈ ಸಮಸ್ಯೆಯನ್ನು ಪರೀಕ್ಷಿಸಲು ಶಾಸಕಾಂಗ ಪ್ರಕ್ರಿಯೆಯ ದೃಷ್ಟಿ ಮಾತ್ರವಲ್ಲದೆ, ಆಡಳಿತ ದೃಷ್ಟಿಯೂ ಇದೆ. ಜನಪ್ರಿಯ ಮುಖಂಡರೂ ಆದರ ಸಚಿವರು ತಮ್ಮ ಸಮಯದ ಬಹುಭಾಗವನ್ನು ಸಂದರ್ಶಕರಿಗಾಗಿ ಮೀಸಲಾಗಿಡಬೇಕು. ಭಾರತದ ಪ್ರತಿಯೊಬ್ಬ ಮಂತ್ರಿಯ ಅನುಭವ, ಅವನ ಸಮಯದ ಬಹು ಭಾಗವು ಸಂದರ್ಶಕರು ಮತ್ತು ಹಲವು ಬಗೆಯ ಉದ್ದೇಶಗಳಿಗಾಗಿ ನೋಡಲು ಬರುವ ಜನರಿಗಾಗಿಯೇ ವ್ಯಯವಾಗುತ್ತದೆ. ತಮಗಾಗಿ ದೊರಕುವ ಸಮಯ ಬಹಳ ಕಡಿಮೆ. ಎರಡು ಸದನಗಳಿದ್ದರೆ. ಬಹಶಃ ಕೆಳಮನೆಯು ವರ್ಷದಲ್ಲಿ ಹಲವು ತಿಂಗಳ ಕಾಲ ಅಧಿವೇಶನದಲ್ಲಿರಬೇಕಾಗುತ್ತದೆ. ಜೊತೆಗೆ ಮಂತ್ರಿಗಳು ಮೇಲ್ಮನೆಯಲ್ಲೂ ಬಹಳ ಹೊತ್ತು

ಕಳೆಯಬೇಕಾಗುತ್ತದೆ. ವಾಸ್ತವವಾಗಿ ಅವರು ಬಹಳ ಕಾಲ ಮಾತನಾಡುತ್ತಲೇ ಇರಬೇಕಾಗುವುದರಿಂದ ಅದರ ಪರಿಣಾಮವಾಗಿ ಆಡಳಿತವು ಬಾಧಿತವಾಗುತ್ತದೆ. ಭಾರತದಲ್ಲಿ ವಿವಿಧ ಸಚಿವಾಲಯಗಳು ರಾಜ್ಯಗಳಲ್ಲಿ ಹೇಗೆ ಕೆಲಸಮಾಡುತ್ತವೆ ಎಂಬುದರ ಅನುಭವ ನನಗೆ ಸ್ವಲ್ಪಮಟ್ಟಿಗೆ ಇದೆ. ಸಾಮಾನ್ಯವಾಗಿ ಅವುಗಳ ಮೇಲೆ ಅಧ್ಯಕ್ಷತೆಯ ಆರೋಪ ಹೊರಿಸುವುದುಂಟು. ಹಿಂದಿನ ಕಾಲದಲ್ಲಿ ಆಡಳಿತ ಕಾರ್ಯವು ಯಾವ ವೇಗದಲ್ಲಿ ನಡೆಯುತ್ತಿದ್ದಿತೋ ಆ ವೇಗದಲ್ಲಿ ಈಗ ನಡೆಯುತ್ತಿಲ್ಲ. ರಾಜ್ಯಗಳಲ್ಲಿನ ವಿವಿಧ ಸಚಿವ ಇಲಾಖೆಗಳ ಮೇಲೆ ಹೊರಿಸುವ ನಿರ್ದಿಷ್ಟ ಆಪಾದನೆ ಇದೇ. ಕೇಂದ್ರದಲ್ಲಿ ಪರಿಸ್ಥಿತಿ ಹೇಗಿದೆಯೋ ನನಗೆ ತಿಳಿಯದು. ಆದರೆ ನಿಜವಾದ ಕಾರಣವೆಂದರೆ ಅವರಿಗೆ ಸಮಯವಿಲ್ಲ; ಉದ್ದಕ್ಕೂ ಅವರು ಮಾತನಾಡುತ್ತಲೇ ಇರಬೇಕಾಗುತ್ತದೆ. ಆಡಳಿತದ ದಕ್ಷತೆ ಹಾಗೂ ವೇಗ ವರ್ಧನೆಯ ದೃಷ್ಟಿಯಿಂದ ಎರಡನೆಯ ಸದನವನ್ನು ಕೈಬಿಡುವುದು ಮೇಲು.

ಮಾನ್ಯರೆ, ತಮ್ಮ ತಿದ್ದುಪಡಿಯನ್ನು ಕುರಿತು ಪ್ರೊ. ಕೆ. ಟಿ. ಷಹಾ ಅವರು ಮಾಡಿದ ವಾದವನ್ನು ತುಂಬ ಗೌರವದಿಂದ ಆಲಿಸಿದ್ದೇನೆ. ಅವರು ಮಂಡಿಸಿರುವ ಹೊಸ ಉಪನಿಯಮವು, ಈ ಸದನವು ರೂಪಿಸಿರುವ ಮತ್ತು ಕರಡು ತಯಾರಿಸುವ ಸಮಿತಿಯು ರೇಖಿಸಿರುವ ಸಂವಿಧಾನ ರಚನೆಗೆ ಸ್ವಲ್ಪವೂ ಹೊಂದಿಕೆಯಾಗುವುದಿಲ್ಲ. ನಾವು ಸದನದಲ್ಲಿ ಸಾಂಸದಿಕ ಸ್ವರೂಪದ ಸರ್ಕಾರವನ್ನು ಅಂಗೀಕರಿಸಿದ್ದೇವೆ. ಪ್ರೊ. ಷಹಾ ತಮ್ಮ ತಿದ್ದುಪಡಿಯಲ್ಲಿ ನಿರೂಪಿಸುವುದಾದರೋ ಅಧ್ಯಕ್ಷೀಯ ಆಡಳಿತವನ್ನು ಸರಿ, ಎರಡೂ ಸ್ವರೂಪಗಳ ಗುಣಾವಗುಣಗಳನ್ನು ಕುರಿತು ನಾವು ಬೇಕಾದ ಹಾಗೆ ವಾದ ಮಾಡಬಹುದು. ಆದರೆ ಈ ದೇಶಕ್ಕೆ ಸಾಸಂದಿಕ ವ್ಯವಸ್ಥೆಯು ಅತ್ಯಂತ ಸೂಕ್ತವಾದದ್ದು ಎಂದು ಒಪ್ಪಿಕೊಂಡಿದ್ದೇವೆ. ಅನೇಕ ಕಾರಣಗಳಿಂದ ಭಾರತದ ಪರಿಸ್ಥಿತಿಗಳಿಗೆ ಅಧ್ಯಕ್ಷೀಯ ಆಡಳಿತಕ್ಕಿಂತ ಸಾಂಸದಿಕ ವ್ಯವಸ್ಥೆಯೇ ಹೆಚ್ಚು ಹೊಂದಿಕೊಳ್ಳುತ್ತದೆ ಎಂದು ಭಾವಿಸಿದ್ದೇನೆ. ಪರಸ್ಪರ ಘರ್ಷಿಸುವ ತ್ರಿಮೂರ್ತಿಗಳಿಗಿಂತ ಸಾಮರಸ್ಯವುಳ್ಳ ಸರ್ಕಾರದ ಸ್ವರೂಪವು ಉತ್ತಮ. ಅವರು ಹೇಳುವಂತೆ ನಾವು ಕಾರ್ಯಾಂಗ, ನ್ಯಾಯಾಂಗ ಮತ್ತು ಶಾಸಕಾಂಗಗಳನ್ನು ಸಂಪೂರ್ಣವಾಗಿ ಬೇರ್ಪಡಿಸಿದರೆ ಸರ್ಕಾರ ಈ ಮೂರು ವಿಭಾಗಗಳ ನಡುವೆ ಘರ್ಷಣೆ ಮಾಡುವುದು ಅತ್ಯಂತ ಸಹಜ. ಯಾವುದೇ ದೇಶದಲ್ಲಿ ಅಥವಾ ಯಾವುದೇ ಸರ್ಕಾರದಲ್ಲಿ ಘರ್ಷಣೆಗಳು ದೇಶದ ಶಾಂತಿ ಮತ್ತು ಪುರೋಭಿವೃದ್ಧಿಗೆ ಮಾರಕವಾದವು. ಒಂದು ಸರ್ಕಾರವಾಗಲಿ ಸಮಾಜವಾಗಲಿ ಕೆಲಸ ಮಾಡಬಹುದಾದ ಮೊದಲನೆಯ ಮತ್ತು ಅತ್ಯಂತ ಮಹತ್ವದ ತಳಹದಿ ಶಾಂತಿ. ಅವುಗಳ ನಡುವೆ ಪ್ರತ್ಯೇಕತೆಯಿದ್ದರೆ

ಪ್ರೊ ಷಹಾ ಸಂಪೂರ್ಣ ಪ್ರತ್ಯೇಕತೆಯನ್ನೇ ಬಯಸುತ್ತಾರೆ. ಸರ್ಕಾರದ ಈ ಮೂರು ವಿಭಾಗಗಳ ನಡುವೆ ಘರ್ಷಣೆಗಳು ಹುಟ್ಟುವುದು ಖಂಡಿತ. ಆದ್ದರಿಂದ ಸರ್ಕಾರದ ರಚನೆಯಲ್ಲಿ ಈ ಸಾಮರಸ್ಯವನ್ನು ಹೊಂದಿರುವುದು ಅಗತ್ಯವೇ ಹೊರತು ಪ್ರಮುಖ ಘರ್ಷಣೆಯನ್ನಲ್ಲ ಎನ್ನುವುದು ನನ್ನ ಅಭಿಪ್ರಾಯ.

ಕೆಲವರಿಗೆ ಕಾರ್ಯಾಂಗವನ್ನು ಅವಹೇಳನ ಮಾಡಿ ನ್ಯಾಯಾಂಗವು ಸಕಲ ಸದ್ಗುಣಗಳ ಆದರ್ಶವೆಂದು ತೋರುವಂತೆ ಮಾಡುವುದು ಇಂದಿನ ಫ್ಯಾಷನ್ ಆಗಿದೆ. ಪ್ರೊ. ಷಹಾ ಮತ್ತು ಅವರಂತಹುದೇ ಚಿಂತನೆಯಲ್ಲಿ ತೊಡಗಿರುವವರ ಎದುರಿಗೆ ಈ ದೃಷ್ಟಿಯನ್ನು ಗೌರವಪೂರ್ವಕವಾಗಿ ಇರಿಸಲು ಬಯಸುತ್ತೇನೆ. ನ್ಯಾಯ ಮೂರ್ತಿಗಳು ನಿಷ್ಪಕ್ಷಪಾತವಾಗಿ ವರ್ತಿಸುತ್ತಾರೆ. ಅವರು ಯಾವುದೇ ಒಂದು ಪಕ್ಷವನ್ನು ವಹಿಸುವುದಿಲ್ಲ ಎಂಬುದರಲ್ಲಿ ಸಂದೇಹವೇನಿಲ್ಲ. ಆದರೆ ಭಾರತದಲ್ಲಿಯಾಗಲಿ ಪ್ರಪಂಚದ ಬೇರೆ ಯಾವುದೇ ಭಾಗದಲ್ಲಿಯಾಗಲಿ ಕಾರ್ಯಾಂಗಗಳು ಬಹಳ ಕಷ್ಟದ ಸನ್ನಿವೇಶಗಳಲ್ಲಿ ಕೆಲಸ ಮಾಡಬೇಕಾಗಿದೆ. ಸರ್ಕಾರವನ್ನು ನಡೆಸುವುದು ಜನರನ್ನು ಮೆಚ್ಚಿಸುವುದು ಸುಲಭದ ವಿಚಾರವಲ್ಲ. ಎಷ್ಟೋ ಸಾರಿ ಪ್ರಾಣಾಪಾಯವನ್ನು ಎದುರಿಸಿಯೂ ಬಹು ಕಷ್ಟದ ಪರಿಸ್ಥಿತಿಯಲ್ಲಿ ಅವರು ಕೆಲಸ ಮಾಡಬೇಕಾಗುತ್ತದೆ. ಸಹಜವಾಗೇ ಅವರು ಹಲವರ ಅಸಂತೋಷಕ್ಕೆ ಗುರಿಯಾಗುತ್ತಾರೆ. ಕೆಲವರು ಈ ಪರಿಸ್ಥಿತಿಯನ್ನು ಅಸಂತೋಷವನ್ನು ದುರುಪಯೋಗಪಡಿಸಿಕೊಂಡು ಭಿನ್ನಾಭಿಪ್ರಾಯಗಳನ್ನು ಎತ್ತಿ ಕಾರ್ಯಾಂಗವನ್ನು ನಿಂದಿಸುತ್ತಾರೆ. ಹಾಗೆ ಒಂದೇ ಸಮನೆ ಕಾರ್ಯಾಂಗ ಶಾಸಕಾಂಗಗಳನ್ನು ಅವಹೇಳನ ಮಾಡಿ ನ್ಯಾಯಾಂಗವನ್ನು ಅತಿ ಪ್ರಶಂಸೆಗೊಳಪಡಿಸುವುದರಿಂದ ಅವರು ನ್ಯಾಯಾಂಗಕ್ಕಾಗಲಿ ಸರ್ಕಾರಕ್ಕಾಗಲಿ ನಿಜವಾಗಿ ಸೇವೆ ಸಲ್ಲಿಸಿದಂತಾಗುವುದಿಲ್ಲ. ನಾನು ನ್ಯಾಯಾಂಗ ಸ್ವಾತಂತ್ರ್ಯ ಎಂಬ ಮಾತನ್ನು ಸರಿಯಾಗಿ ಅರ್ಥ ಮಾಡಿಕೊಂಡಿರುವುದಾದರೆ, ಅದು ಕಾರ್ಯಾಂಗವಾಗಲಿ ಅದರ ಅಧಿಕಾರಿಗಳಾಗಲಿ ದಿನದಿನದ ನ್ಯಾಯಾಡಳಿತ ಕಾರ್ಯದಲ್ಲಿ ತಲೆ ಹಾಕುವಂತಿಲ್ಲ ಎಂದಾಗುತ್ತದೆ. ಅಂದ ಮಾತ್ರಕ್ಕೆ ಕೆಲವರು ವ್ಯಾಖ್ಯಾನಿಸುವಂತೆ ನ್ಯಾಯಾಂಗವು ಕಾರ್ಯಾಂಗದ ಪ್ರಭುವಾಗಿರಬೇಕಾಗಿಲ್ಲ ಅಥವಾ ಸರ್ಕಾರದ ಆಡಳಿತ ವಿಭಾಗಗಳು ಸಮನಾಗಿ ನೆಲೆಯಲ್ಲಿರಬೇಕೆಂದೂ ಅರ್ಥವಲ್ಲ, ಯಾವುದೇ ದೇಶದಲ್ಲಿ ಸರ್ಕಾರವಿರುವುದು ಆಳುವುದಕ್ಕೆ. ಆಡಳಿತ ನಡೆಸುವ ಅಧಿಕಾರಗಳು ಜನರು ಒಂದು ತಂಡದ ವಶದಲ್ಲಿರಬೇಕೆ ಹೊರತು ಅವನ್ನು ಮೂರು ಸಮಭಾಗಗಳನ್ನಾಗಿ ಮಾಡಿ ಹಂಚುವುದು ಸುರಕ್ಷಿತವಲ್ಲ. ಅದರಲ್ಲೂ ಪ್ರೊ ಕೆ. ಟಿ. ಷಹಾ ಆಲೋಚಿಸುವಂತೆ ಅತಿರೇಕದ ಹಂತದಲ್ಲಲ್ಲ. ಅಮೇರಿಕಾ ದೇಶದಲ್ಲೂ ಪ್ರೊ ಕೆ. ಟಿ. ಷಹಾ ಆಲೋಚಿಸುವಂತೆ

ಅಧಿಕಾರಗಳನ್ನು ತಾತ್ವಿಕವಾಗಿ ಮೂರು ಅಂಗಗಳಲ್ಲಿ ಹಂಚಿದೆ, ಅವು ಸಂಪೂರ್ಣವಾಗಿ ಪ್ರತ್ಯೇಕಗೊಂಡಿವೆ. ಆದರೂ ಪಕ್ಷ ವ್ಯವಸ್ಥೆಯಿರುವ ಸರ್ಕಾರವು ಅದರ ಮೊನಚನ್ನು ಬಹುಮಟ್ಟಿಗೆ ಮೆದುಗೊಳಿಸುತ್ತದೆ. ಅಮೇರಿಕದಲ್ಲಿ ಸುವ್ಯವಸ್ಥಿತವಾದ ಎರಡು ಪಕ್ಷಗಳಿವೆ. ಅವು ತಮ್ಮ ತಮ್ಮ ಪಕ್ಷದ ಸಭೆಗಳಲ್ಲಿ ಏನು ಮಾಡಬೇಕು ಎಂಬುದನ್ನು ನಿರ್ಧರಿಸುತ್ತವೆ. ಸರ್ಕಾರದ ಈ ಮೂರು ವಿಭಾಗಗಳ ನಡುವೆ ಉದ್ಭವಿಸಬಹುದಾಗಿದ್ದ ಘರ್ಷಣೆಗಳನ್ನು ಈ ಸಭೆಗಳಲ್ಲಿ ಮೆದುಗೊಳಿಸಿ, ನಯಗೊಳಿಸಿ, ಈ ವ್ಯವಸ್ಥೆಯ ಕೆಡಕುಗಳನ್ನು ನಿವಾರಿಸಲಾಗುತ್ತದೆ. ಕೆಲವೊಮ್ಮೆ ಒಂದು ಪಕ್ಷವು ಶಾಸಕಾಂಗದಲ್ಲೂ ಇನ್ನೊಂದು ಕಾರ್ಯಾಂಗದಲ್ಲೂ ಬಹುಮತವಿರುವಾಗ, ಖಂಡಿತವಾಗಿಯೂ ಘರ್ಷಣೆ ಉದ್ಭವಿಸುತ್ತದೆ. ನ್ಯಾಯಾಂಗವು ಪಕ್ಷಪಾತಕರಹಿತವಾಗುವಂತೆ ಮಾಡಬೇಕಾದರೆ, ಅದನ್ನು ಸರ್ಕಾರದ ಅಥವಾ ಶಾಸಕಾಂಗದ ನೆಲೆಗೆ ಸಮನೆಂದು ಉಬ್ಬಿಸಬೇಕಾದ ಅಗತ್ಯವಿಲ್ಲ. ಶಾಸನ ಸಭೆಯ ಜನತೆ ಆಯ್ಕೆ ಮಾಡಿದ ನೂರಾರು ಜನ ಸದಸ್ಯರಿಗಿಂತಲೂ, ಅಥವಾ ದೇಶದ ನೇತಾರರೆಂದು ಪ್ರಶಂಸೆಗೆ ಭಾಜನರಾದವರಿಗಿಂತಲೂ ಸರ್ವೋನ್ನತ ನ್ಯಾಯಾಲಯದ ಕೆಲವು ನ್ಯಾಯಾಧೀಶರು ಅಧಿಕ ಉತ್ತಮರು ಎಂದು ವಾದಿಸುವುದು ತಪ್ಪು. ಇದು ತಲೆಕೆಳಗು ವಾದ. ರಾಜಕೀಯ ಭಿನ್ನಾಭಿಪ್ರಾಯಗಳಿಂದ ಮಾಡುವ ಈ ಮನೋವ್ಯಾಪಾರವನ್ನು ಆದಷ್ಟೂ ಬೇಗ ತೊರೆಯುವುದು ಉತ್ತಮ. ಆದ್ದರಿಂದ ನೂತನ ಉಪನಿಯಮವನ್ನು ನಾನು ವಿರೋಧಿಸುತ್ತೇನೆ. ಅದಕ್ಕೆ ಮುಖ್ಯವಾದ ಕಾರಣ ಈ ಸದನವು ಸಾಂಸದಿಕ ಸ್ವರೂಪದ ಪ್ರಜಾಸತ್ತೆಯನ್ನು ಒಪ್ಪಿಕೊಂಡಿರುವುದು ; ಈ ನೂತನ ಉಪನಿಯಮವು ಅಂಥದೊಂದು ಸಂವಿಧಾನಿಕ ರಚನೆಗೆ ಹೊಂದಿಕೊಳ್ಳುವುದಿಲ್ಲ.

ಮಾನ್ಯರೆ, ಡಾ: ಅಂಬೇಡ್ಕರ್ ಅವರು ಭಾರತೀಯ ರಾಜ್ಯಗಳನ್ನು ಕುರಿತು ಮಾತನಾಡಿದ್ದಾರೆ. ಪ್ರಾಂತಗಳಿಗೂ ರಾಜ್ಯಗಳಿಗೂ ನಡುವೆ ಸಾಂವಿಧಾನಿಕ ವ್ಯವಸ್ಥೆಯ ವಿಷಯದಲ್ಲಿ ಯಾವ ವ್ಯತ್ಯಾಸವೂ ಇರಬೇಕಾಗಿಲ್ಲ ಎಂದು ಮನವಿ ಮಾಡಿಕೊಂಡಿದ್ದಾರೆ. ಮೊತ್ತ ಮೊದಲನೆಯ ಸಾರಿಯಾದರೂ ಇಂಥದೊಂದು ಅಭಿಪ್ರಾಯವು ಮೂಡಿದುದು ನನಗೆ ತುಂಬಾ ಸಂತೋಷವಾಗಿದೆ. ಇದುವರೆಗೆ ಪ್ರತಿಯೊಂದು ರಾಜ್ಯವೂ ಒಂದು ರಾಜ್ಯಾಂಗ ಸಭೆಯನ್ನು ಹೊಂದಿರಲು ಅವಕಾಶವಿದ್ದಿತು. ರಾಜ್ಯಗಳ ಒಕ್ಕೂಟಗಳೂ ತಮ್ಮದೇ ಸಂವಿಧಾನವನ್ನು ರಚಿಸಿಕೊಳ್ಳಲು ರಾಜ್ಯಾಂಗ ಸಭೆಗಳನ್ನು ಕರೆಯಲು ಅನುಮತಿ ನೀಡಲಾಗಿದ್ದಿತು. ಹೀಗೆ ರಾಜ್ಯಗಳು ಸಂವಿಧಾನ ಸಭೆಗಳನ್ನು ರಚಿಸಿಕೊಳ್ಳುವುದು, ಸಂಸ್ಥಾನಗಳು ತಮ್ಮವೇ ಸಂವಿಧಾನಗಳನ್ನು ಹೊಂದಿರುವುದು ಉಚಿತವೆ, ಅದು ಭಾರತ ಸಂವಿಧಾನಕ್ಕೆ ಹೊಂದಿಕೊಂಡಿದೆಯೆ ಎಂದು ನಾವು ಕೆಲವರು ಆಶ್ಚರ್ಯ ಪಡುತ್ತಿದ್ದೇವೆ. ಉದ್ದೇಶಿತ ಲಕ್ಷ್ಯವನ್ನು ಪೂರೈಸಿಕೊಳ್ಳಲು ಕೆಲವು ವಿಧಾನಗಳನ್ನು ಸೂಚಿಸಬಯಸುತ್ತೇನೆ.

ಮೈಸೂರಿನಲ್ಲಿ ರಾಜ್ಯಾಂಗ ರಚನಾ ಸಭೆಯು ತನ್ನ ಕೆಲಸದ ಅರ್ಧದಷ್ಟನ್ನು ಮುಗಿಸಿದೆ. ಕರಡು ರಚನಾ ಸಮಿತಿಯನ್ನು ನೇಮಿಸುವ ಹಂತದಲ್ಲಿ ಇತರ ರಾಜ್ಯಗಳ ಅಸೆಂಬ್ಲಿಗಳ ಹಾಗೂ ಈ ಗೌರವಾನ್ವಿತ ಸದನದ ಅಭಿಪ್ರಾಯಗಳನ್ನು ಪಡೆದು ಅಂತಿಮ ತೀರ್ಮಾನ ಕೈಗೊಳ್ಳುವುದು ಸೂಕ್ತ ಎಂದು ಭಾವಿಸಲಾಯಿತು. ಆದ್ದರಿಂದ ಐದು ಜನರ ಒಂದು ಸಮಿತಿಯನ್ನು ನೇಮಕ ಮಾಡಲಾಯಿತು. ಇತರ ರಾಜ್ಯಗಳ ವಿಧಾನ ಸಭೆಗಳ ಪ್ರತಿನಿಧಿಗಳೊಂದಿಗೆ ಮತ್ತು ಸಾಧ್ಯವಾದರೆ ಸದನದೊಂದಿಗೆ ಸಂಪರ್ಕ ಬೆಳೆಸಲು ಪ್ರತಿನಿಧಿಗಳೊಂದಿಗೆ ಮತ್ತು ಸಾಧ್ಯವಾದರೆ ಈ ಸದನದೊಂದಿಗೆ ಸಂಪರ್ಕ ಬೆಳೆಸಲು ತೀರ್ಮಾನಿಸಲಾಯಿತು. ಸಮಿತಿಯ ಸದಸ್ಯರ ಹೆಸರುಗಳನ್ನು ಪ್ರಕಟಿಸಲಾಗಿದೆ. ಈ ಸದನದಲ್ಲಿ ರಾಜ್ಯಗಳನ್ನು ಪ್ರತಿನಿಧಿಸುತ್ತಿರುವ ಮಾನ್ಯ ಸದಸ್ಯರು ಪ್ರತ್ಯೇಕವಾಗಿ ಕುಳಿತು ಅಧಿಕೃತವಾಗಿಯೋ ಅನಧಿಕೃತವಾಗಿಯೋ ಚರ್ಚಿಸಿ ಈ ಸದನಕ್ಕೂ ಇಡೀ ದೇಶಕ್ಕೂ ಒಪ್ಪಿಗೆಯಾಗುವಂತಹ ಒಂದು ಸೂತ್ರವನ್ನು ವಿಕಾಸಗೊಳಿಸುತ್ತಾರೆಂದು ಆಶಿಸುತ್ತೇನೆ. ವಿವಿಧ ರಾಜ್ಯಗಳು ಮತ್ತು ಸಂಯುಕ್ತ ರಾಜ್ಯಗಳ ಸಂವಿಧಾನ ಸಭೆಗಳು ಈ ಸದನದಲ್ಲಿರುವ ರಾಜ್ಯ ಪ್ರತಿನಿಧಿಗಳು ನೀಡುವ ಸಲಹೆಗಳನ್ನು ಸ್ವೀಕರಿಸುತ್ತಾರೆ ಎಂಬುದರಲ್ಲಿ ಸಂದೇಹವಿಲ್ಲವಾದರೂ ಅದರ ಸಾಧನೆಯಲ್ಲಿ ಕೆಲವು ತಡೆಗಳಿವೆ. ಅವುಗಳನ್ನು ತೋರಿಸಿಕೊಡಲು ಪ್ರಯತ್ನಿಸುತ್ತೇನೆ.

ಬ್ರಿಟಿಷ್ ಆಳ್ವಿಕೆಯಲ್ಲೂ ಕೂಡ ರಾಜ್ಯಗಳು ಒಂದು ಪ್ರಮಾಣದ ಸ್ವಾಯತ್ತತೆಯನ್ನು ಪಡೆದಿದ್ದುವು. ಅದು ಸಂಸ್ಥಾನಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿತ್ತು. ಆ ಸ್ವಾಯತ್ತತೆಯನ್ನು ಅವು ಎಂದೂ ದುರುಪಯೋಗಪಡಿಸಿಕೊಳ್ಳಲಿಲ್ಲ. ಪ್ರತಿಯೊಂದು ರಾಜ್ಯವು, ತನಗಿದ್ದ ಸ್ವಾಯುತ್ತತೆ ಎಷ್ಟೇ ಇರಲಿ, ಭಾರತದ ಹಿತಾಸಕ್ತಿಯನ್ನು ಸದಕಾಲವೂ ಮನಸ್ಸಿನಲ್ಲಿಟ್ಟುಕೊಂಡೇ ವರ್ತಿಸುತ್ತಿತ್ತು. ನಾವು ರಾಜ್ಯಗಳ ಜನರು ಒಕ್ಕೂಟದ ಘಟಕಗಳಿಗೆ ಸಾಕಷ್ಟು ಸ್ವಾಯತ್ತತೆ ಇಲ್ಲ, ಕರಡು ಸಂವಿಧಾನದಲ್ಲಿ ಇದನ್ನು ನೀಡಿಲ್ಲ ಎಂದು ಭಾವಿಸುತ್ತೇವೆ. ಕರಡು ಈಗಿರುವಂತೆ, ಡಾ॥ಅಂಬೇಡ್ಕರ್ ಅವರ ಅಭಿಪ್ರಾಯಕ್ಕಿಂತ ಭಿನ್ನವಾದ ಅಭಿಪ್ರಾಯಕ್ಕಾಗಿ ಕ್ಷಮೆ ಕೋರುತ್ತೇನೆ. ಅತಿಯಾಗಿ ಕೇಂದ್ರೀಕೃತವಾಗಿದೆ. ವಾಸ್ತವವಾಗಿ ಅದು ಭಾರತವನ್ನು ಒಕ್ಕೂಟ ಸರ್ಕಾರವನ್ನಾಗಿಸದೆ ಒಂದು ಏಕಾಧಿಪತ್ಯವನ್ನಾಗಿಸುತ್ತದೆ. ಕೇಂದ್ರವನ್ನು ಬಲಶಾಲಿಯನ್ನಾಗಿ ಮಾಡುವ ಕಾತರದಲ್ಲಿ ಕೇಂದ್ರಕ್ಕೆ ಹೆಚ್ಚಿನ ಶಾಸಕಾಂಗ ಮತ್ತು ಆರ್ಥಿಕ ಅಧಿಕಾರಗಳನ್ನು ನೀಡಿದ್ದಾರೆ. ಪ್ರಾಂತಗಳನ್ನು, ರಾಜ್ಯಗಳನ್ನು ಒಂದು ಪ್ರಾಂತದ ಜಿಲ್ಲೆಗಳೇ ಎಂಬಂತೆ ಪರಿಗಣಿಸಿದ್ದಾರೆ . ಈ ಪ್ರವೃತ್ತಿಯಿಂದ ಕೇಂದ್ರದ ಬಲಸಂವರ್ಧನೆ ಎಂದು ಕರೆದಿರುವುದು ನೆರವೇರುವುದಿಲ್ಲ ಎಂದು ನನಗನ್ನಿಸುತ್ತದೆ.

ಈ ಸಂವಿಧಾನದ ಕರಡನ್ನು ತಯಾರಿಸುತ್ತಿರುವವರೆಲ್ಲರಿಗೂ ನಾನು ಹೇಳಬಯಸುವುದು ಕೇಂದ್ರ ಸೆಕ್ರೆಟೇರಿಯಟ್ಟಿನಲ್ಲಿ ಕಡತಗಳನ್ನು ಪೇರಿಸುವಷ್ಟರಿಂದ ಕೇಂದ್ರದ ಬಲವು ಅಧಿಕವಾಗುವುದಿಲ್ಲ. ಕೇಂದ್ರದ ಬಲವು ಅಧಿಕಗೊಳ್ಳುವುದು, ನನಗೆ ತಿಳಿದಿರುವಂತೆ ಬಲವಾದ ಸೈನ್ಯ ಬಲವಾದ ನೌಕಾಪಡೆ, ಬಲವಾದ ವಾಯುಪಡೆಗಳನ್ನು ಹೊಂದಿರುವುದರಲ್ಲಿ ಈ ಉದ್ದೇಶಗಳಿಗಾಗಿ ರಾಜ್ಯಗಳು ಮತ್ತು ಪ್ರಾಂತಗಳ ಮುಂದೆ ಭಿಕ್ಷಾ ಪಾತ್ರೆಯನ್ನು ಹಿಡಿಯದೆ ಅಗತ್ಯವಾಗಿರುವಷ್ಟು ಸಂಪನ್ಮೂಲವನ್ನು ತಾನೇ ಹೊಂದಿರುವುದರಲ್ಲಿ. ಅದರಿಂದಾಚೆಗೆ ಅವರು ವಿಪರೀತ ಅಧಿಕಾರವನ್ನು ಕೈಗೆತ್ತಿಕೊಂಡು ತಮ್ಮ ಶಾಸಕಾಂಗ ಪಟ್ಟಿಯನ್ನು ಹೆಚ್ಚಿಸಿಕೊಂಡರೆ, ಪ್ರಾಂತ್ಯಗಳಿಂದ ನಿರೀಕ್ಷಿಸಬಹುದಾದ ಕಾರ್ಯೋನ್ಮುಖತೆ ಇರುವುದಿಲ್ಲ, ಅವು ಕೇವಲ ಸ್ವಯಂಚಾಲಿತಯಂತ್ರಗಳಂತಾಗಿ ಬಿಡುತ್ತವೆ. ಸಂವಿಧಾನವನ್ನು ಕುರಿತು ತಜ್ಞರು ಬರೆದಿರುವುದ್ನು ಓದಿದ್ದೇನೆ. ಒಂದು ದೇಶವು ಸ್ವಾತಂತ್ರ್ಯವನ್ನು ಸವಿಯುತ್ತಿದೆಯೆ ಎಂಬುದರ ಪರೀಕ್ಷೆ ಘಟಕಗಳು ಮತ್ತು ಸ್ಥಳೀಯ ಸಂಸ್ಥೆಗಳು ಎಷ್ಟು ಮಟ್ಟಿಗೆ ಸ್ವಾಯುತ್ತತೆಯನ್ನು ಪಡೆದಿವೆ ಎನ್ನುವುದು ಕೇಂದ್ರದ ಬಲವನ್ನು ಕುರಿತು ಬೇರೆ ಬೇರೆಯವರು ಬೇರೆ ಬೇರೆ ವಿಧವಾಗಿ ಅರ್ಥ ಮಾಡಿಕೊಂಡಿದ್ದಾರೆ. ಕರಡು ರಚನಾ ಸಮಿತಿಯು ಕೇಂದ್ರ ಸೆಕ್ರೆಟೇರಿಯಟ್ಟಿನಲ್ಲಿ ಕಡತಗಳನ್ನು ಅಧಿಕಾಧಿಕವಾಗಿ ಸಂಗ್ರಹಿಸುವುದೇ ಬಲ ಎಂದು ಅರ್ಥ ಮಾಡಿಕೊಂಡಿದೆ ಅಷ್ಟೆ. ರಾಜ್ಯಗಳು ಒಂದು ಸಮಾನ ಸಾಂವಿಧಾನಿಕ ವ್ಯವಸ್ಥೆಯನ್ನು ಹೊಂದಲು ಒಪ್ಪುವುದಕ್ಕೆ ಇದು ದೊಡ್ಡ ಅಡ್ಡಿಯಾಗಿದೆ. ರಾಜ್ಯಗಳು ಪ್ರಾಂತಗಳ ಸಮಕ್ಕೆ ಬರಲು ಒಪ್ಪುವುದಕ್ಕೆ ಮೊದಲು ನಾನಿಲ್ಲಿ ರಾಜ್ಯಗಳು ಮತ್ತು ಪ್ರಾಂತಗಳು ಹೀಗೆ ಎಲ್ಲಾ ಘಟಕಗಳನ್ನು ಗಮನದಲ್ಲಿಟ್ಟುಕೊಂಡು ಹೇಳುತ್ತಿದ್ದೇನೆ. ಅವರಿಗೆ ಮೊದಲು ನಿಜವಾದ ಸ್ವಾಯತ್ತತೆಯ ಭರವಸೆ ಕೊಡಬೇಕು. ಅದು ರಾಜ್ಯದ ಹಿತಾಸಕ್ತಿಗಳನ್ನು ಒಟ್ಟಿನ ಮೇಲೆ ಹಾನಿಗೊಳಿಸುವಂತಹ ಸ್ವಾಯುತ್ತತೆಯಲ್ಲ. ಆದರೆ ತಮ್ಮ ವ್ಯವಹಾರಗಳನ್ನು ಉತ್ತಮವಾಗಿಯೂ ದಕ್ಷತೆಯಿಂದಲೂ ನಿರ್ವಹಿಸಿಕೊಳ್ಳಲು ಅಗತ್ಯವಾದ ಅಧಿಕಾರ ಮತ್ತು ಹೊಣೆಗಾರಿಕೆಗಳು ನಾವು ಯಾರನ್ನು ಪದೇ ಪದೇ ರಾಷ್ಟ್ರಪಿತ ಎಂದು ಕರೆಯುತ್ತೇವೋ ಅವರನ್ನು ಮರೆತುಬಿಟ್ಟದ್ದೇವೆ. ಸಂವಿಧಾನವು ಒಂದು ಪಿರಮಿಡ್ ಆಕಾರದ ರಚನೆಯಾಗಿರಬೇಕು, ಕೇಂದ್ರವು ಅದರ ನೆತ್ತಿಯ ಬಿಂದುವಾಗಿರಬೇಕು ಎಂದು ಅವರು ಹೇಳಿದರು. ಆದರೆ ಈಗಿನ ಸ್ಥಿತಿ ಅದಕ್ಕೆ ತಲೆಕೆಳಗಾಗಿದೆ. ಕೇಂದ್ರವು ಅತಿಯಾಗಿ ಅಧಿಕಾರವನ್ನು ಸಂಚಯಿಸಿಕೊಳ್ಳುತ್ತಿದೆ ಎಂಬ ಭೀತಿ ರಾಜ್ಯಗಳ ಜನತೆಯ ಮನಸ್ಸಿನಲ್ಲಿ ಮೂಡಿದೆ.

ಸಾಕಷ್ಟು ಮಟ್ಟಿಗೆ ಬೆಳಕಿಗೆ ತಂದಿರದ ಇನ್ನೊಂದು ವಿಚಾರವಿದೆ. ರಾಜ್ಯಗಳಲ್ಲಿನ ಸಚಿವ ಸಂಪುಟಗಳು ಹಿಂದೆ ರಾಜಕೀಯ ಇಲಾಖೆಯು ಉಂಟುಮಾಡುತ್ತಿದ್ದುದಕ್ಕಿಂತಲೂ ಅಧಿಕವಾದ ಅತೃಪ್ತಿಯನ್ನು ಜನತೆಗೆ ಉಂಟು ಮಾಡಿವೆ ಎಂದು ನಾನು ಹೇಳಿದರೆ ಯಾರೂ ತಪ್ಪಾಗಿ ತಿಳಿದು ಕೊಳ್ಳುವುದಿಲ್ಲ ಎಂದು ಭಾವಿಸುತ್ತೇನೆ. ಸದನದಲ್ಲಿರುವ ರಾಜ್ಯ ಜನತೆಯ ಪ್ರತಿನಿಧಿಗಳು, ರಾಜ್ಯ ಸಚಿವ ಸಂಪುಟಗಳು ತಮ್ಮ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳುವುದೇ ಇಲ್ಲ ಎಂದು ದೂರುವುದನ್ನು ಕೇಳಿದ್ದೇನೆ. ಅವರು ರಾಜರು ಮತ್ತು ಅವರ ದೃಷ್ಟಿಯ ಪರಧಿಯಲ್ಲಿ ಬರುವುದೇ ಇಲ್ಲ. ರಾಜರು ಮತ್ತು ದಿವಾನರುಗಳಿಗೆ ಬೇಕಾದ್ದು ದೊರೆಯುತ್ತದೆ. ಜನರಿಗೆ ಏನೂ ಸಿಕ್ಕುವುದಿಲ್ಲ. ಇಂದು ರಾಜ್ಯಗಳ ಕ್ರೋಢೀಕರಣವಾಗಿದ್ದರೆ, ಅದಕ್ಕೆ ಕಾರಣ ರಾಜರು ಅದನ್ನು ಬಯಸಿದ್ದಲ್ಲ. ಅಥವಾ ದಿವಾನರು ಅದಕ್ಕಾಗಿ ಹುನ್ನಾರು ಮಾಡಿದ್ದಲ್ಲ. ದೇಶದ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದ ಜನಸಾಮಾನ್ಯರು ಇಂತಹ ಪರಿಸ್ಥಿತಿಯನ್ನು ಸೃಷ್ಟಿಸಿದರೆಂದರೆ, ರಾಜರಿಗೆ ಅದನ್ನು ಹಿಡಿಯದೆ ಬೇರೆ ದಾರಿಯೇ ಇರಲಿಲ್ಲ. ನಾವು ರಾಜರನ್ನು ಅವರ ದಿವಾನರನ್ನು ಒಲಿಸುವ ಭರದಲ್ಲಿ ಜನಸಾಮಾನ್ಯರನ್ನು ಮರೆತುಬಿಟ್ಟಿರುವುದು ತುಂಬಾ ವಿಷಾದದ ಸಂಗತಿ. ರಾಜ್ಯ ಸಚಿವ ಸಂಪುಟಗಳು ಈ ಮನೋಧರ್ಮವನ್ನು ಸಾಧ್ಯವಾದಷ್ಟು ಬೇಗನೆ ಬದಲಾಯಿಸಬೇಕು. ಜನರಿಗೆ ತಾವು ಭಾರತದ ಉಳಿದ ಭಾಗಗಳೊಂದಿಗೆ ಒಂದಾಗಿದ್ದೇವೆ. ಸುರಕ್ಷಿತವಾದ ಕೈಗಳಲ್ಲಿದ್ದೇವೆ ಎಂಬ ವಿಶ್ವಾಸ ಅವರಲ್ಲಿ ಬೇಗ ಮೂಡುವಂತಾಗಬೇಕು.

ಆಮೇಲೆ, ಮಾನ್ಯರೆ, ರಾಜ್ಯಗಳು ತೆರಿಗೆಯ ವಿಷಯದಲ್ಲಿ ಸಂಸ್ಥಾನಗಳಿಗಿಂತ ಹೆಚ್ಚು ಪ್ರಯೋಜನ ಪಡೆದಿದ್ದಾರೆ. ನಾವು ಮೂರು ವಿಷಯಗಳನ್ನು ಒಪ್ಪಿಕೊಂಡಿದ್ದೇವೆ. ಈ ಮೂರು ಅಂಶಗಳಿಗೆ ತಗಲುವ ವೆಚ್ಚವನ್ನು ಪೂರೈಸಲು ಸಾಕಷ್ಟು ಹಣವನ್ನು ಒದಗಿಸಬೇಕಾಗಿದೆ. ಉದಾಹರಣೆಗೆ, ಈಗ ಬಹುತೇಕ ರಾಜ್ಯಗಳು ವರಮಾನ ತೆರಿಗೆಯನ್ನು ಸಂಗ್ರಹಿಸುತ್ತಿವೆ. ಅದು ಕೇಂದ್ರಕ್ಕೆ ಹೋಗುವುದಕ್ಕೆ ನಮ್ಮ ಆಕ್ಷೇಪಣೆ ಏನೂ ಇಲ್ಲ. ಆದರೆ ಇತರ ಶೀರ್ಷಿಕೆಗಳ ತೆರಿಗೆಗಳನ್ನು ತಮ್ಮ ವೆಚ್ಚಗಳನ್ನು ನಿರ್ವಹಿಸಿಕೊಳ್ಳುವ ಸಲುವಾಗಿ ರಾಜ್ಯಗಳಿಗೆ ಬಿಟ್ಟುಬಿಡಬೇಕು. ವಾಸ್ತವವಾಗಿ ಈಗ ವಿಲೀನವಾಗುತ್ತಿರುವ ರಾಜ್ಯಗಳು ಹಿಂದೆ ರಾಜರ ಆಶ್ರಯದಲ್ಲಿ ಅನುಭವಿಸುತ್ತಿದ್ದಷ್ಟು ಉದಾರವಾದ ಸರ್ಕಾರವನ್ನು ಅನುಭವಿಸುತ್ತಿಲ್ಲ, ಅದು ಜನತಾ ಪ್ರತಿನಿಧಿಗಳು ಹೇಳುತ್ತಿರುವ ಮಾತು. ಇದು ಬಹಳ ವಿಷಾದಕರ ಪರಿಸ್ಥಿತಿಯಾಗಿದೆ. ರಾಜಮಹಾರಾಜರು ಹೊರಟು ಹೋಗಿ ರಾಜ್ಯಗಳು ಪ್ರಾಂತಗಳಲ್ಲಿ ವಿಲೀನಗೊಂಡಾಗ ಹಿಂದಿಗಿಂತಲೂ ಹೆಚ್ಚಿನ ಸವಲತ್ತುಗಳನ್ನು

ಉತ್ತಮತರ ಅವಕಾಶಗಳನ್ನು ಪಡೆಯುತ್ತವೆ ಎಂದು ನಿರೀಕ್ಷಿಸಿದ್ದೆವು. ಆದರೆ ರಾಜ್ಯದ ಜನತಾ ಪ್ರತಿನಿಧಿಗಳು ವ್ಯಕ್ತಪಡಿಸುತ್ತಿರುವ ಕಹಿ ಅನುಭವ ಬೇರೆಯೇ. ಒರಿಸ್ಸಾ ರಾಜ್ಯಗಳಲ್ಲಿ ಮತ್ತು ಡಖನ್ ರಾಜ್ಯಗಳಲ್ಲಿ ಕಾಂಗ್ರೆಸ್ ಸರ್ಕಾರಗಳ ಆಡಳಿತವು ಹಿಂದೆ ರಾಜರ ಆಡಳಿತದಲ್ಲಿದ್ದಷ್ಟು ಪ್ರಯೋಜನಕರವಾಗಿಲ್ಲ. ನಾನು ಮೈಸೂರಿನ ಪ್ರತಿನಿಧಿ ಮಾತ್ರವಾಗಿ ಇದನ್ನು ಹೇಳುತ್ತಿಲ್ಲ. ಇತರ ರಾಜ್ಯಗಳ ಪ್ರತಿನಿಧಿಗಳೊಂದಿಗೆ ನಾನು ಮಾತನಾಡಿದ್ದೇನೆ. ಇದು ಅವರ ಅಭಿಪ್ರಾಯವೂ ಆಗಿದೆ.

ಮಾನ್ಯರೇ, ಈಗ ದೆಹಲಿಯು ದೇಶದ ರಾಜಧಾನಿಯಾಗಿದೆ. ದಕ್ಷಿಣದಿಂದ, ಬಂಗಾಳದಿಂದ ದೇಶದ ಇತರೆ ಭಾಗಗಳಿಂದ ಬಂದ ನಮ್ಮಂತಹ ಅನೇಕ ಜನರು ಭಾರತದ ರಾಜಧಾನಿಯಾಗಲು ದೆಹಲಿ ಅನೇಕ ಕಾರಣಗಳಿಂದಾಗಿ ಸೂಕ್ತ ಸ್ಥಳವಲ್ಲ ಎಂದು ಭಾವಿಸುತ್ತೇವೆ. ಐತಿಹಾಸಿಕವಾಗಿ ದೆಹಲಿಯು ಒಂದು ನಿರ್ದಿಷ್ಟಗತಿಯನ್ನು ಬೆಳೆಸಿಕೊಂಡಿದೆ, ಆ ನಗರದಾದ್ಯಂತ ಹಲವಾರು ಸಾಮ್ರಾಜ್ಯಗಳು ಪತನ ಹೊಂದಿವೆ, ಸಮಾಧಿಗೊಂಡಿವೆ, ನಮ್ಮ ನೂತನ ಸರ್ಕಾರವೂ ಆ ದಾರಿಯನ್ನು ಹಿಡಿದು ಹೋಗುವುದು ನಮಗೆ ಇಷ್ಟವಿಲ್ಲ. ಕೇವಲ ಭಾವನಾತ್ಮಕ ಕಾರಣದಿಂದಾಗಿ ಮಾತ್ರವಲ್ಲ, ನಾನು ಹೇಳುವುದು ದೆಹಲಿಯಲ್ಲಿ ವರ್ಷದ ಎರಡು ತಿಂಗಳ ಹೊರತು ಮಿಕ್ಕಂತೆ ಸೆಕೆಯಲ್ಲಿ ಬೆವೆತುಹರಿಯಬೇಕು. ಇಲ್ಲವೆ ಚಳಿಯಲ್ಲಿ ನಡುಗಿ ಸಾಯಬೇಕು. ಹವಾಮಾನದ ಈ ಅತಿರೇಕದಿಂದಾಗಿ ಕಷ್ಟಪಟ್ಟು ಕೆಲಸ ಮಾಡುವುದು ಹೆಚ್ಚುಕಡಿಮೆ ಸಾಧ್ಯವೇ ಇಲ್ಲ. ಒಂದು ದೇಶದ ರಾಜಧಾನಿಯು ಮಧ್ಯ ಭಾಗದಲ್ಲಿರಬೇಕೆಂದು ನಿರೀಕ್ಷಿಸುವುದು ಹಿತವಾಗಿದೆ. ಆದ್ದರಿಂದ ಮಧ್ಯ ಪ್ರಾಂತ ಅಥವಾ ಅದರ ಸಮೀಪದಲ್ಲಿ ಎಲ್ಲಿಯಾದರೂ ನಮ್ಮ ರಾಜಧಾನಿಯನ್ನು ಸ್ಥಾಪಿಸಬಹುದು.

**ಶ್ರೀ ಬಿ. ಜೆ. ಖೇರ್ (ಮುಂಬಯಿ - ಸಾಮಾನ್ಯ)** : ಮುಂಬಯಿ ಉತ್ತಮವಾಗಿದೆ.

**ಶ್ರೀ ಹನುಮಂತಯ್ಯ** : ಮಾನ್ಯರೇ ಅನೇಕ ಸಹೋದ್ಯೋಗಿಗಳಿಂದ ಅಭಿಪ್ರಾಯಗಳನ್ನು ಸಂಗ್ರಹಿಸಿದ ನಂತರ ಸಿ. ಪಿ. ಉತ್ತಮವಾದ ಸ್ಥಳ ಎಂದು ನಾನು ಹೇಳುತ್ತಿದ್ದೇನೆ. ಉದಾಹರಣೆಗೆ ಸಿ. ಪಿ. ಯಲ್ಲಿರುವ ಬೇತಲ್ ಆಗಬಹುದು. ದೆಹಲಿಗಾಗಿ ಅಷ್ಟೊಂದು ಹಣವನ್ನು ವೆಚ್ಚ ಮಾಡಿದ ಮೇಲೆ ಈಗ ಮತ್ತೆ ಇನ್ನೊಂದು ರಾಜಧಾನಿಗಾಗಿ ಹಣವನ್ನು ವೆಚ್ಚ ಮಾಡುವುದು ವಿವೇಕವೆ ಎಂಬ ಒಂದು ವಾದವಿದೆ. ದೆಹಲಿಯಲ್ಲೂ ಕೆಲವು ಕೇಂದ್ರ ಕಚೇರಿಗಳನ್ನು ಮುಂದುವರಿಸಬಹುದು. ಈಗ ಪೂರ್ವ ಪಂಜಾಬು

ಒಂದು ರಾಜಧಾನಿಯನ್ನು ಅರಸುತ್ತಿದೆ, ಅವರು ಅಂಬಾಲವನ್ನು ರಾಜಧಾನಿಯನ್ನಾಗಿ ಮಾಡಿಕೊಳ್ಳಲು ಬಯಸುತ್ತಾರೆ. ಇಲ್ಲಿರುವ ಸರ್ಕಾರಿ ಕಟ್ಟಡಗಳಲ್ಲಿ ಅರ್ಧದಷ್ಟನ್ನು ಪೂರ್ವ ಪಂಜಾಬ್ ಸರ್ಕಾರಕ್ಕೆ ವಹಿಸಿಕೊಟ್ಟು ಅವರಿಂದ ಹಣವನ್ನು ಪಡೆಯಬಹುದು. ಹಣಕಾಸು ವರದಿಯಲ್ಲಿ ಕಂಡುಬರುವಂತೆ, ಪಂಜಾಬ್ ವಿಭಜನೆಯಾದ ನಂತರ, ತನ್ನ ವೆಚ್ಚಗಳನ್ನು ನಿರ್ವಹಿಸಿಕೊಳ್ಳಲಾರದೆ ಕೇಂದ್ರದಿಂದ ಸಬ್ಸಿಡಿಯನ್ನು (ಸಹಾಯ ಧನವನ್ನು) ಕೇಳುತ್ತಿದೆ. ದೆಹಲಿಯನ್ನು ಪಂಜಾಬಿನ ಭಾಗವಾಗಿ ಮಾಡಿದರೆ ನಾವು ಅವರಿಗೆ ಸಬ್ಸಿಡಿ ಕೊಡಬೇಕಾದ ಅಗತ್ಯವಿಲ್ಲ. ಏಕೆಂದರೆ ಆಗ ಅದು ಸ್ವಯಂಪೂರ್ಣ ಪ್ರಾಂತವಾಗುತ್ತದೆ. ಈ ದೃಷ್ಟಿಯಿಂದಲೂ ಸಾರ್ವಜನಿಕ ಅಭಿಪ್ರಾಯದ ದೃಷ್ಟಿಯಿಂದಲೂ ಅದೇ ಉತ್ತಮ. ದೇಶದ ಮತ್ತು ಅದರ ಭವಿಷ್ಯದ ಹಿತದ ದೃಷ್ಟಿಯಿಂದ ದೆಹಲಿಯು ಭಾರತದ ರಾಜಧಾನಿಯಾಗುವುದು ತಪ್ಪಬೇಕು. ಮಧ್ಯ ಪ್ರಾಂತದಲ್ಲಿ ಒಂದು ನೂತನ ರಾಜಧಾನಿಯನ್ನು ನಾವು ಕಟ್ಟಬೇಕು. ವಂದನೆಗಳು.

*(ಭಾರತ ಸಂವಿಧಾನ ಸಭೆಯ ಕಲಾಪ ದಿನಾಂಕ : 6-1-1949)*

# 5. ಲೋಕ ಸಭೆಯಲ್ಲಿ ಮಾಡಿದ ಭಾಷಣಗಳು

## (1) ದೆಹಲಿ ವಿಶ್ವವಿದ್ಯಾಲಯ ಮಸೂದೆ

ಉಪಾಧ್ಯಕ್ಷರು : ಈ ಸೂಚನೆಯನ್ನು ಮುಂದಿಡಲಾಗಿದೆ.'' ರಾಜ್ಯ ಸಭೆಯು ಅಂಗೀಕರಿಸಿರುವಂತೆ ದೆಹಲಿಯಲ್ಲಿ ಒಂದು ವಿಶ್ವವಿದ್ಯಾಲಯವನನ್ನು ಸ್ಥಾಪಿಸಿ ವಿಧಿಬದ್ಧಗೊಳಿಸುವ ಸೂಚನೆಯನ್ನು ಪರಿಶೀಲಿಸಬಹುದು''

**ಕೆ. ಹನುಮಂತಯ್ಯ (ಬೆಂಗಳೂರು ನಗರ)** : ಈ ಮಸೂದೆಯನ್ನು ಸ್ವಾಗತಿಸುವ ಅವಕಾಶವನ್ನು ನನಗೆ ನೀಡಿರುವುದಕ್ಕಾಗಿ ವಂದಿಸುತ್ತೇನೆ. ಮಸೂದೆಯನ್ನು ಸಮರ್ಥವಾಗಿ ಪ್ರಯೋಜಿಸಿರುವವರು ಈಚಿನವರೆಗೂ ಶಿಕ್ಷಣ ಸಚಿವರಾಗಿದ್ದ ಈಗಿನ ವಿದೇಶಾಂಗ ವ್ಯವಹಾರಗಳ ಸಚಿವರು. ಈ ಸಂದರ್ಭದಲ್ಲಿ ನಾನು ಒಂದೆರಡು ಮಾತುಗಳನ್ನು ಹೇಳಬಯಸುತ್ತೇನೆ.

ಆಡಳಿತೀಯ ಸುಧಾರಣೆಗಳನ್ನು ಕುರಿತು ನನಗೆ ಸ್ವಲ್ಪ ಸಂಬಂಧವಿದೆ. ಮತ್ತೆ ಮತ್ತೆ ಪ್ರತಿಯೊಂದು ರಾಜ್ಯದಲ್ಲೂ ಹೇಳಲಾಗುತ್ತಿರುವ, ಕೊನೆಗೆ ಕೇಂದ್ರ ಸಚಿವ ಸಂಪುಟದಲ್ಲೂ ಬರುವ ಮಾತು, ಸರಿಯಾದ ಸ್ಥಾನಗಳಿಗೆ ಸರಿಯಾದವರನ್ನು ನೇಮಿಸಲಾಗುತ್ತಿಲ್ಲ, ಎನ್ನುವುದು. ಎಷ್ಟೋ ಸಲ ಒಬ್ಬ ವ್ಯಕ್ತಿಯನ್ನು ಯಾವುದೇ ಉಕ್ಕು ಯೋಜನೆಯನ್ನು ಅಧ್ಯಯನ ಮಾಡಿ ಬರಲು ವಿದೇಶಕ್ಕೆ ಕಳುಹಿಸಿ ಕೊಡಲಾಗುವುದು. ಆಮೇಲೆ ಅವನನ್ನು ಯಾವುದೇ ಆಡಳಿತ ತರಬೇತಿ ಶಾಲೆಯ ಉಸ್ತುವಾರಿ ನೋಡಿಕೊಳ್ಳಲು ನೇಮಿಸಲಾಗುವುದು. ಇನ್ನೊಬ್ಬನನ್ನು ತತ್ವ ಶಾಸ್ತ್ರದಲ್ಲಿ ವಿಶೇಷ ಅಧ್ಯಯನಕ್ಕೆಂದು ಕಳುಹಿಸಿ ಕೊಡಲಾಗುವುದು, ಹಿಂದಕ್ಕೆ ಬಂದ ಮೇಲೆ ಅವನನ್ನು ಒಂದು ಉಕ್ಕು ಸ್ಥಾವರದ ನಿರ್ವಾಹಕನನ್ನಾಗಿ ನೇಮಿಸಲಾಗುವುದು. ಸಾಮಾನ್ಯ ಆಡಳಿತಗಾರನನ್ನು ಬಹುತೇಕ, ಔದ್ಯಮಿಕ ಸ್ಥಾವರಗಳ ಉಸ್ತುವಾರಿಗೆಂದು ನೇಮಕ ಮಾಡಲಾಗುವುದು. ಶ್ರೀ ಛಗ್ಲಾ ಅವರ ಸಚಿವ ಖಾತೆಯ ಬದಲಾವಣೆಯಲ್ಲಿ ಸ್ವಲ್ಪಮಟ್ಟಿಗೆ ಆಗಿರುವುದು ಹೀಗೆಯೇ. ಸದನದ ಸದಸ್ಯರಿಗೆ ತಿಳಿದಿರುವಂತೆ, ಆ ದಿನಗಳಲ್ಲಿ ಅವರನ್ನು ಶಿಕ್ಷಣ ಸಚಿವರನ್ನಾಗಿ ನೇಮಿಸಿದಾಗ ಅನೇಕರು ಅದನ್ನು ಟೀಕಿಸಿದರು. ಅವರ ಆ ನೇಮಕವನ್ನು ಉತ್ಸಾಹದಿಂದ ಸ್ವಾಗತಿಸಿದವರಲ್ಲಿ ನಾನು ಒಬ್ಬ. ಶಿಕ್ಷಣ ಸಚಿವರಾಗಿ ಅವರು ಬಹು ಉತ್ತಮವಾಗಿ ಕಾರ್ಯನಿರ್ವಹಿಸಿದರು. ಅವರು ಕಾರ್ಯಕ್ಕೆ ವಿಶೇಷವಾದ ಅಂತರಾದೃಷ್ಟಿ, ದರ್ಶನ ಮತ್ತು ದಕ್ಷತೆಗಳನ್ನು ನೀಡಿದರು. ಈಗ ಅವರು ಹೊರಟು ಹೋಗುತ್ತಿರುವುದರಿಂದ ನನಗೆ ತುಂಬಾ ವಿಷಾದವಾಗಿದೆ.

ವಿದೇಶಾಂಗ ವ್ಯವಹಾರಗಳ ಇಲಾಖೆಯು ಶಿಕ್ಷಣ ಇಲಾಖೆಗಿಂತ ಹೆಚ್ಚು ಮುಖ್ಯವಾದುದು ಎಂದು ಜನರು ಭಾವಿಸಬಹುದು. ಆದರೆ ಕಳೆದ ಅನೇಕ ವರ್ಷಗಳಿಂದ ಸರ್ಕಾರವನ್ನು ಅದರ ಕಾರ್ಯವಿಧಾನವನ್ನು ಅರಿತಿರುವ ನನಗನ್ನಿಸುವುದು ವಿದೇಶಾಂಗ ವ್ಯವಹಾರ ಸಚಿವಾಲಯದಲ್ಲಿ ಶ್ರೀ ಛಗ್ಲಾ ಅವರ ಕೊಡುಗೆ ವಿಶೇಷ ಏನು ಇರುವುದಿಲ್ಲ ಎಂದು.

ಭಾರತಕ್ಕೆ ಸಂಬಂಧಿಸಿದಂತೆ ನಾವು ಇನ್ನೂ ಒಂದು ಗಣನೀಯ ಸೇನಾ ಶಕ್ತಿಯಲ್ಲ. ವಿಶ್ವಶಾಂತಿಗೆ ಸಂಬಂಧಿಸಿದಂತೆ ಇನ್ನೂ ನಾವು ವಿಚಾರಗಳ ಹಂತದಲ್ಲಿದ್ದೇವೆ. ನಾವಿನ್ನೂ ಶಾಂತಿಗಾಗಿ ಅಂತರಾಷ್ಟ್ರೀಯವಾಗಿ ಕೈಗೊಳ್ಳುವ ಯಾವುದೇ ಕ್ರಮಕ್ಕೆ ನಿರ್ದಿಷ್ಟ ಪ್ರದೇಶದಲ್ಲಾಗಲಿ, ಪ್ರಪಂಚದಲ್ಲಾಗಲಿ, ಮೂಲಭೂತವಾಗಿ ಯಾವುದೇ ಕೊಡುಗೆಯನ್ನು ನೀಡುವ ಸ್ಥಿತಿಯಲ್ಲಿಲ್ಲ. ಪರಮಾಣು ಸ್ಪರ್ಧೆಯ ಈ ದಿನಗಳಲ್ಲಿ ಪರಮಾಣು ಪರೀಕ್ಷೆ ನಡೆಸದ ಶಕ್ತಿಯೊಂದು ಅಂತರರಾಷ್ಟ್ರೀಯ ಮಟ್ಟದ ಚರ್ಚೆಗಳಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸಲಾರದು. ಇವು ಕಟುವಾದ ಸತ್ಯಗಳು. ನಮ್ಮ ಎಲ್ಲಾ ಅರಕೆ ಕೊರತೆಗಳಿಗೆ ದಪ್ಪದಪ್ಪ ಮಾತುಗಳ ಮುಸುಕುಹಾಕುವುದು, ಅಸಹ್ಯವಾಗುವಷ್ಟು ಮಟ್ಟಿಗೆ ಸ್ಥೂಲವಾದ ಮಾತುಗಳನ್ನು ಪ್ರಥಮ ತತ್ವಗಳನ್ನು ಜಪಿಸುವುದು ಇವು ಈ ದೇಶದ ಅಭ್ಯಾಸವಾಗಿ ಹೋಗಿದೆ. ನಾನು ಎರಡು ತಿಂಗಳ ಕಾಲ ವಿದೇಶದಲ್ಲಿದ್ದೆ. ಈ ಮಾತುಗಳ ಪುನರುಚ್ಚಾರ ನಾವು ನಿರೀಕ್ಷಿಸಿದುದಕ್ಕಿಂತ ವಿರುದ್ಧವೇ ಆದ ಪರಿಣಾಮವನ್ನು ಉಂಟು ಮಾಡುವುದನ್ನು ನಾನೇ ನೋಡಿದ್ದೇನೆ.

ಭಾರತವು ಮಾತನಾಡುವ ಸಮಯ ಬಂತೆಂದರೆ ಅದು ತತ್ವಶಾಸ್ತ್ರ ; 'ಅದನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲ' ಎಂದು ಬಿಡುತ್ತಾರೆ. ನಮ್ಮ ರಾಯಭಾರ ನಿರ್ವಹಣೆ ಆ ಹಂತಕ್ಕೆ ಇಳಿದಿದೆ. ಆದ್ದರಿಂದ ಅಂತರರಾಷ್ಟ್ರೀಯ ರಾಜಕಾರಣದಲ್ಲಿ ಶ್ರೀ ಛಗ್ಲಾ ಅವರ ಸಾಮರ್ಥ್ಯ ಅಷ್ಟಾಗಿ ಉಪಯೋಗಕ್ಕೆ ಬರುತ್ತದೆ ಎಂದು ನನಗನ್ನಿಸುವುದಿಲ್ಲ. ಅವರು ಕಾಶ್ಮೀರದ ವಿಷಯದಲ್ಲಿ ನಮ್ಮ ನಿಲುವಿನ ಪ್ರತಿಪಾದನೆಗೆ ತುಂಬಾ ಉಪಯುಕ್ತರಾಗುತ್ತಾರೆ ಎಂದು ನನಗನ್ನಿಸುತ್ತದೆ. ಅದನ್ನು ಅವರು ಪರಿಣಾಮಕಾರಿಯಾಗಿ ನಿರ್ವಹಿಸಬಲ್ಲರು. ಅವರು ಮುಸ್ಲಿಮರು ಎಂಬುದರಿಂದಲ್ಲ, ನ್ಯಾಯ ವಿಚಾರದ ಅತ್ಯುಜ್ವಲ ತಾರೆಗಳಲ್ಲೊಬ್ಬರಾಗಿ ವಾದ ಮಾಡುವ ಸಾಮರ್ಥ್ಯವನ್ನು ಪಡೆದಿರುವುದರಿಂದ (ಉದ್ಗಾರಗಳು) ಆದ್ದರಿಂದ ಆಡಳಿತೀಯ ದಕ್ಷತೆಯನ್ನು ಕುರಿತು ಮಾತನಾಡುವಾಗ ಈ ಖಾತೆ ಬದಲಾವಣೆಯು ಆಡಳಿತದಲ್ಲಿ ದಕ್ಷತೆಯನ್ನು ತರುವುದಿಲ್ಲ ಎಂಬುದನ್ನು

ನಾನು ಹೇಳಬೇಕು. ನನ್ನ ಮಾತಿಗೆ ಏನಾದರೂ ಬೆಲೆ ಇರುವುದಾದರೂ ನನ್ನ ಕಡೆಗೆ ಬಹುಮತವಿಲ್ಲ ; ಇರುವುದು ನನ್ನ ಆತ್ಮಸಾಕ್ಷಿಯೊಂದೇ. ಶ್ರೀ ಭಗ್ಲಾ ಅವರನ್ನು ಸಾಧ್ಯವಾದಷ್ಟು ಬೇಗನೆ ಮುಂಚಿನ ಶಿಕ್ಷಣ ಖಾತೆಗೆ ಮತ್ತೆ ನೇಮಿಸಬೇಕು.

**ಒಬ್ಬ ಸದಸ್ಯರು** : ಅಂಥದೊಂದು ತಿದ್ದುಪಡಿಯನ್ನು ನೀವು ಈ ಮಸೂದೆಗೆ ತರಲು ಸಾಧ್ಯವಿಲ್ಲ.

**ಶ್ರೀ ಎಂ. ಸಿ. ಭಗ್ಲಾ : ತಿದ್ದುಪಡಿಯು ಕ್ರಮರಹಿತ ಎಂದು ಅಧ್ಯಕ್ಷರು ಆದೇಶಿಸುತ್ತಾರೆ.**

**ಶ್ರೀ ಕೆ. ಹನುಮಂತಯ್ಯ** : ಮುಖ್ಯ ಮಂತ್ರಿಗಳು ಮತ್ತು ಪ್ರಧಾನ ಮಂತ್ರಿಗಳು ಅಂತಹ ಅಸಂಗತಗಳನ್ನು ಮಾಡುತ್ತಲೇ ಇರುತ್ತಾರೆ. ಅಧಿಕಾರವನ್ನು ಒಂದು ಮಸೂದೆಯಲ್ಲಿ ಅಳವಡಿಸಬೇಕಾದ ಒಂದು ಕಾಲವು ಬರಬಹುದು. ಮುಂದಿನದು ಜಾತ್ಯಾತೀತತೆಯ ವಿಷಯ. ಎಷ್ಟೋ ವರ್ಷಗಳ ಹಿಂದೇ ಘಾನ ಎಂಬೆಸಿಯು ತಮ್ಮ ಸಾಧನೆಗಳನ್ನು ವೀಕ್ಷಿಸಲು ನನ್ನನ್ನು ಆಹ್ವಾನಿಸಿತು. ಚಲನಚಿತ್ರದಲ್ಲಿ ಅವರು ಎನ್‌ಕ್ರುಮಾ ವಿಶ್ವವಿದ್ಯಾನಿಲಯವನ್ನು ತೋರಿಸಿದರು. ನನ್ನ ಸುತ್ತ ಕುಳಿತಿದ್ದವರು ಕೇಳಿದರು. ಅವರ ಹೆಸರನ್ನೇ ಈ ವಿಶ್ವವಿದ್ಯಾನಿಲಯಕ್ಕೆ ಇಟ್ಟಿರಬೇಕಾದರೆ ಅವರು ಅದಕ್ಕೆ ಎಷ್ಟು ಹಣವನ್ನು ಕೊಟ್ಟಿರಬಹುದು. ರಾಯಭಾರಿ ತಲೆತಗ್ಗಿಸಿ ಸುಮ್ಮನಾಗಿಬಿಟ್ಟರು. ಒಂದು ವಿಶ್ವವಿದ್ಯಾಲಯಕ್ಕೆ ಒಬ್ಬ ವ್ಯಕ್ತಿಯ ಹೆಸರನ್ನಿಡಬಹುದೇ ಬೇಡವೆ ಎಂದು ವಾದ ಮಾಡುವ ಸ್ಥಿತಿಯಲ್ಲಿ ನಾನಿದ್ದೇವೆ. ಈ ವಿಚಾರದಲ್ಲಿ ಮಾತನಾಡುವುದು ನಮಗೆಲ್ಲರಿಗೂ ಮುಜುಗರದ ಸಂಗತಿ, ಅದರಲ್ಲೂ ನಮ್ಮ ಪ್ರಧಾನ ಮಂತ್ರಿಯವರ ಪುತ್ರಿಯೇ ಈಗ ಪ್ರಧಾನ ಮಂತ್ರಿಯಾಗಿರುವಾಗ ಒಂದು ವಿಶ್ವವಿದ್ಯಾನಿಲ್ಲಯಕ್ಕೆ ನೆಹರೂ ಅವರ ಹೆಸರನ್ನು ಇನ್ನೂ ಕೆಲವು ವರ್ಷಗಳ ನಂತರ ಇಟ್ಟಿದ್ದರೆ ತುಂಬಾ ಉತ್ತಮವಾಗುತಿತ್ತು. ಆಗ ಆ ಕೆಲಸವನ್ನು ನಿಜವಾದ [illegible] ವಿಶ್ವಾಸದಿಂದ ಸ್ವಯಂ ಪ್ರೇರಿತವಾಗಿ ಮಾಡಲಾಗಿದೆ ಎಂದು ಮುಂದಿನವರು [illegible]

ಶ್ರೀ ಎಂ. ಸಿ. ಭಗ್ಲಾ : ಆಕೆ ಪ್ರಧಾನ ಮಂತ್ರಿಯಾಗುವುದಕ್ಕಿಂತ ಮೊದಲೇ ಈ ಮಸೂದೆಯನ್ನು ಮಂಡಿಸಲಾಗಿತ್ತು.

**ಶ್ರೀ ಕೆ. ಹನುಮಂತಯ್ಯ** : ನಾನು ಹೇಳಿದಂತೆ. ನಾವು ಈ ವಿಚಾರವಾಗಿ ವಾದ ಮಾಡಬಹುದು. ಈಗಾಗಲೇ ಸಮಯವಾಗಿದೆ. ಒಬ್ಬ ವ್ಯಕ್ತಿಯು ಹೇಳಿದ ಮಾತು ಒಂದು ವಿಶ್ವವಿದ್ಯಾಲಯಕ್ಕೆ ಆದರ್ಶವಾಗಬೇಕು ಎಂಬ ಸಿದ್ಧಾಂತವನ್ನು ನಾನೆಂದೂ ಕೇಳಿಲ್ಲ. ಭಾರತದಲ್ಲಿ ಒಂದು ವೇಳೆ ಆ ಕೆಲಸ ನಡೆಯುವುದೇ ಆದರೆ ಮೊದಲ ಆದ್ಯತೆಯನ್ನು ಮಹಾತ್ಮ ಗಾಂಧಿಯವರಿಗೆ ನೀಡಬೇಕು. ಆತ ಒಬ್ಬ ಮಹಾನ್ ಪ್ರವಾದಿ ರಾಷ್ಟ್ರಪಿತ ಆಗಿದ್ದರು. ಮಿಕ್ಕ ಪ್ರತಿಯೊಬ್ಬರು ರಾಜ ನೀತಿಜ್ಞರೋ ರಾಜಕಾರಣಿಗಳೇ ಆಗಿದ್ದರು. ಮಹಾತ್ಮರವರನ್ನು ಅವರ ಬೋಧನೆಗಳನ್ನು ಕಾರ್ಯವಿಧಾನಗಳನ್ನು ಬದಿಗೊತ್ತಿ, ಈ ವಿಶ್ವವಿದ್ಯಾಲಯಕ್ಕೆ ಬೇರೊಬ್ಬರ ಹೆಸರನ್ನಿಡುವುದನ್ನು ಅಂತಿಮವಾಗಿ ಈಗಲ್ಲ ಅಂತಿಮವಾಗಿ ಈ ದೇಶದ ಜನತೆಯು ಸಂಪೂರ್ಣವಾಗಿ ಮೆಚ್ಚುವುದಿಲ್ಲವೆಂಬುದನ್ನು ನೀವು ನೋಡುವಿರಿ. ನಮ್ಮಲ್ಲಿ ಕೆಲವರು ಅವರ ದಾಕ್ಷಿಣ್ಯಕ್ಕೆ ಒಳಪಟ್ಟಿರಬಹುದು. ನಾವು ಹೇಗೆ ಅವರ ದಾಕ್ಷಿಣ್ಯದಲ್ಲಿದ್ದೇವೆ ಈಚೆಗೆ ನಾನು ಮೈಸೂರಿಗೆ ಹೋಗಿದ್ದಾಗ ಜವಾಹರಲಾಲ್ ನೆಹರೂ ನಿದಿಗೆ. ಕಡ್ಡಾಯವಾಗಿ ಚಂದಾ ಕೊಡಬೇಕೆಂದು ಒಂದು ಪರಿಪತ್ರವನ್ನು ಹೊರಡಿಸಲಾಗಿತ್ತೆಂದು ಕೇಳಿದೆ. ಅಂತಹ ಕೆಲಸಗಳು ನಡೆಯಬಾರದು ಎಂದು ನಾನು ಆಶಿಸುತ್ತೇನೆ. ಜವಾಹರಲಾಲ್‌ರ ಹೆಸರನ್ನು ಕಡ್ಡಾಯದ ಪರಿಪತ್ರಗಳ ಮೂಲಕ ಗೌರವಿಸುವ ಹಂತ ಈಗ ಬಂದಿದೆಯೇನು? ಒಬ್ಬ ವ್ಯಕ್ತಿಯು ಎಷ್ಟೇ ದೊಡ್ಡವನಾಗಿದ್ದರೂ ಆತನ ಮಾತುಗಳನ್ನು ಕೃತ್ಯಗಳನ್ನು ಒಂದು ವಿಶ್ವವಿದ್ಯಾಲಯದ ಧ್ಯೇಯೋದ್ದೇಶಗಳನ್ನಾಗಿ ಬಳಸುವುದು ಒಳ್ಳೆಯದಲ್ಲ ಎಂದು ದಾಖಲೆಯಲ್ಲಿ ಇರುವಂತಾಗಲಿ. ಇಲ್ಲಿ ನಿರೂಪಿಸಿರುವ ಧ್ಯೇಯಗಳಲ್ಲಿ ಕೆಲವು ಒಪ್ಪುವಂಥವಾಗಿವೆ ಎಂಬುದರಲ್ಲಿ ಸಂದೇಹವಿಲ್ಲ. ರಾಜ್ಯದ ಮುಖ್ಯನ್ಯಾಯಾಧೀಶ ಸ್ಥಾನವನ್ನಲಂಕರಿಸಿದ ಶ್ರೀ ಛಗ್ಲಾ ಅವರು ಇದನ್ನು ವಸ್ತು ನಿಷ್ಠವಾಗಿಯೂ ಯುಕ್ತಾಯುಕ್ತ ವಿವೇಚನೆಯಿಂದಲೂ ನೋಡಬೇಕು.

ಇನ್ನು ರಾಷ್ಟ್ರೀಯ ಭಾವೈಕ್ಯದ ವಿಚಾರ. ರಾಷ್ಟ್ರೀಯ ಏಕತೆಯನ್ನು ಈಗ ಹದಿನೈದೋ ಇಪ್ಪತ್ತೋ ವರ್ಷಗಳಿಂದ ಪ್ರವರ್ತಿಸಿಲ್ಲ. ಆದಿಶಂಕರಾಚಾರ್ಯರೂ ಅವರ ಪೂರ್ವಜರೂ ಅದನ್ನು ಸಹಸ್ರಾರು ವರ್ಷಗಳ ಹಿಂದೆಯೇ ಪ್ರವರ್ತಿಸಿದರು. ಬುದ್ಧನು 2500 ವರ್ಷಗಳ ಹಿಂದೆಯೇ ಅದನ್ನು ಸಾರಿದನು. ಅದರ ಕೀರ್ತಿಯೆಲ್ಲವನ್ನು ನಮಗೆ ಆರೋಪಿಸಿಕೊಳ್ಳುವುದು ವ್ಯರ್ಥವೆಂದು ತೋರುತ್ತದೆ. ಭಾಗತ ಎಂದಿನಿಂದಲೋ ಇದ್ದಿತು. ಉಪನಿಷತ್ತುಗಳ ಕಾಲದಲ್ಲಿ ವೇದಗಳ ಕಾಲದಲ್ಲಿ ಅನಂತರ ಸಂತರಿಂದ ಅದು ಏಕೀಕೃತವಾಯಿತು. ಆಚಾರ್ಯರು ಮತ್ತು ಗುರುಗಳು ಅದುವರೆಗೆ ನನ್ನನ್ನು ಹೇಳಲಾಗಿತ್ತೋ ಬೋಧಿಸಲಾಗಿತ್ತೋ ಮತ್ತು ಆಚರಿಸಲಾಗಿತ್ತೋ ಅದನ್ನು ಪುನರುಚ್ಚರಿಸಿದರು. ಆದರೆ ನಮ್ಮ ಅತ್ಯುತ್ಸಾಹದಲ್ಲಿ

ಇದನ್ನು ಒಬ್ಬ ವ್ಯಕ್ತಿಗೆ ಆರೋಪಿಸುತ್ತಿದ್ದೇವೆ. 1947ರ ನಂತರ ಅದು ಪ್ರಾರಂಭವಾಯಿತು ಎಂದು ನೀವು ಹೇಳಲು ಬಯಸುವುದಾದರೆ, ನಾನು ವಿನಯದಿಂದ ಹೇಳುತ್ತೇನೆ ಅದು ನಿಜವಲ್ಲ.

ಇನ್ನು ಸಾಮಾಜಿಕ ನ್ಯಾಯದ ವಿಷಯ. ಸಾಮಾಜಿಕ ನ್ಯಾಯವು ಯುಗದಿಂದ ಯುಗಕ್ಕೆ ಹೊಸ ಅರ್ಥ ಹೊಸ ರೂಪಗಳನ್ನು ಪಡೆಯುತ್ತದೆ. ಅದು ನಿರ್ದಿಷ್ಟ ಯುಗದ ಅಥವಾ ಸಮಾಜದ ದೋಷವಲ್ಲ. ಪ್ರತಿಯೊಂದು ಸಮಾಜದಲ್ಲೂ ಸಾಮಾಜಿಕ ನೈತಿಕತೆ, ಲೈಂಗಿಕ ಸಂಬಂಧ ಮೊದಲಾದವುಗಳ ಬಗೆಗೆ ವಿಭಿನ್ನ ಕಲ್ಪನೆಗಳಿವೆ. ಅದು ನಮ್ಮಕ್ಕಿಂತ ಭಿನ್ನವಾಗಿದ್ದರೆ ಅದ್ಕಕಾಗಿ ಯಾವ ವ್ಯಕ್ತಿಯನ್ನೇ ಆಗಲಿ, ನಿರ್ದಿಷ್ಟ ಸಮಾಜವನ್ನಾಗಲಿ ನಿಂದಿಸಬಾರದು. ನಾವು ಆಲೋಚಿಸುತ್ತಿರುವ ಸಾಮಾಜಿಕ ನ್ಯಾಯವು ನಮ್ಮ ಸಮಾಜಕ್ಕೆ ಪರಕೀಯವಲ್ಲ. ಇಲ್ಲಿ ಅದು ಹಿಂದಿನಿಂದಲೂ ಇದ್ದೇ ಇದೆ.

'ಧರ್ಮ ನಿರಪೇಕ್ಷ' ಎಂಬ ಪದಕ್ಕೆ ನನ್ನ ಆಕ್ಷೇಪವಿದೆ. ಸಾಮಾನ್ಯವಾಗಿ ಧರ್ಮನಿರಪೇಕ್ಷೆಯನ್ನು ಆಜ್ಞೇಯತವಾದ ಎಂದು ಅರ್ಥಮಾಡಿಕೊಳ್ಳಲಾಗುತ್ತದೆ. ಅದು ದೈವರಾಹಿತ್ಯ ಸಮಸ್ಯೆಗಳ ಕಡೆಗೆ ಅಧಾರ್ಮಿಕವಾದ ವ್ಯವಹರಣೆಗಳ ಮನೋವೃತ್ತಿಯನ್ನು ಹೊಂದಿದೆ. ನಾವು ಇಂದು ಆಚರಿಸುತ್ತಿರುವ ರೀತಿಯ ಧರ್ಮವು ಈ ಆದೇಶವನ್ನಾಳುವ ಅಂಶವಾಗಿರಬೇಕೆಂದು ಬಯಸುವವನು ನಾನಲ್ಲ. ನನ್ನ ಯೋಚನೆ ಅದಕ್ಕಿಂತ ತುಂಬ ದೂರ. ಮಹಾತ್ಮ ಗಾಂಧೀಜಿ ಹೇಳಿದರು. ''ಈಶ್ವರ ಅಲ್ಲಾ ತೇರೇ ನಾಮ್ ಸಬಕೋ ಸನ್ಮತಿದೇ ಭಗವಾನ್'' ಧರ್ಮ ಧರ್ಮಗಳ ನಡುವೆ ಜಾತಿಗೂ ಜಾತಿಗೂ ನಡುವೆ, ಒಂದು ಸಮುದಾಯಕ್ಕೂ ಇನ್ನೊಂದಕ್ಕೂ ನಡುವೆ ಸಾಮರಸ್ಯ ಇರಬೇಕೆಂಬ ವಿಚಾರವನ್ನು ಅವರು ಪ್ರತಿಪಾದಿಸಿದರು. ಅದನ್ನವರು ಸರ್ವಧರ್ಮ ಸಮನ್ವಯ ಎಂದು ಕರೆದರು.

**ಶ್ರೀ ಪ್ರಿಯ ಗುಪ್ತ** : ರಾಮಕೃಷ್ಣರೂ ಅದನ್ನು ಮಾಡಿದರು.

**ಕೆ. ಹನುಮಂತಯ್ಯ** : ರಾಮಕೃಷ್ಣ ಪರಮಹಂಸರು ಮತ್ತು ವಿವೇಕಾನಂದರು ಮೊದಲೇ ಈ ಕೆಲಸ ಮಾಡಿದರು. ಅದೇ ಭಾರತದ ಸಂಪ್ರದಾಯ. ಈ ದೇಶದಲ್ಲಿ ಧಾರ್ಮಿಕ ಸಹಿಷ್ಣುತೆ ಎಷ್ಟು ಉನ್ನತವಾಗಿದ್ದಿತೆಂದರೆ ಧರ್ಮನಿರಪೇಕ್ಷತೆ ಅಥವಾ ಧರ್ಮ ವಿರೋಧ ಎಂಬ ಪ್ರಶ್ನೆಯೇ ಅಲ್ಲಿ ಬರಲಿಲ್ಲ.

**ಡೆಪ್ಯುಟಿ ಸ್ಪೀಕರ್** : ಮಾನ್ಯ ಸದಸ್ಯರು ಈಗ ಉಪಸಂಹಾರ ಮಾಡಬಹುದು.

**ಶ್ರೀ ಹನುಮಂತಯ್ಯ** : ಇದು ಮಸೂದೆಯನ್ನು ಮಂಡಿಸುವ ಸಂದರ್ಭವಾಗಿದೆ.

**ಡೆಪ್ಯುಟಿ ಸ್ಪೀಕರ್** : ವ್ಯವಹಾರಗಳ ಸಲಹಾ ಸಮಿತಿಯು ಮಸೂದೆಯ ಎಲ್ಲಾ ಹಂತಗಳಿಗೂ ಒಟ್ಟು ಎರಡು ಗಂಟೆಗಳನ್ನು ನಿಗದಿಪಡಿಸಿದೆ.

**ಶ್ರೀ ಹನುಮಂತಯ್ಯ** : ಆದ್ದರಿಂದ, ಮಾನ್ಯರೆ, ಎಲ್ಲಾ ಧರ್ಮಗಳೂ ಒಂದೇ ಸತ್ಯದ ವಿವಿಧ ಮುಖಗಳು ಎಂದು ನೋಡುವ ಈ ಧಾರ್ಮಿಕ ಸಹಿಷ್ಣುತೆ ಪ್ರತಿಯೊಬ್ಬ ಭಾರತೀಯನ ರಕ್ತದಲ್ಲೇ ಸೇರಿರುವ ವಿಚಾರವಾಗಿದೆ. ಭಾರತದಲ್ಲಿ ವಿವಿಧ ಧರ್ಮಗಳನ್ನು ಅನುಸರಿಸುತ್ತಿರುವುದಾಗಿ ಹೇಳಿಕೊಳ್ಳುವವರೂ ಕೂಡ ಧರ್ಮಾಂಧತೆ ಮತ್ತು ಇತರ ಧರ್ಮಗಳ ಬಗೆಗೆ ಅಸಹನೆ ಈ ಮಟ್ಟಕ್ಕೆ ಇಳಿಯುವುದಿಲ್ಲ. ಎಲ್ಲರಿಗೂ ತಿಳಿದಿರುವಂತೆ ಈ ಸೆಕ್ಯೂಲರಿಸಂ ಎಂಬ ವಿಚಾರವು ಮಧ್ಯಯುಗದಲ್ಲಿ ಕಾಣಿಸಿಕೊಂಡಿತು. ಅದು ಯೂರೋಪಿನ ಕತ್ತಲ ಯುಗ, ಪೋಪ್ ಪೀಠವು ಚರ್ಚಿನ ಹಾಗೂ ಸರಕಾರದ ಕರ್ತವ್ಯಗಳೆರಡನ್ನು ನಿರ್ವಹಿಸುತ್ತಿತ್ತು. ಈ ಮಿಶ್ರಣಕ್ಕೆ ತಿರುಗಿಬಿದ್ದವರು ಜನರೇ. ಅವರು ಬಂಡೆದ್ದು ಈ ಧರ್ಮನಿರಪೇಕ್ಷಿಯ ಸೆಕ್ಯೂಲರಿಸಮ್‌ನ ವಿಚಾರವನ್ನು ರೂಪಿಸಿದರು ಬೇರೆಯೇ ಸಂದರ್ಭದಲ್ಲಿ ಬೇರೆಯೇ ಸಮಾಜದಲ್ಲಿ ಬೇರೆಯ ಮೌಲ್ಯಗಳಿರುವ ಸಮಾಜವೊಂದರಲ್ಲಿ ಅದು ಹುಟ್ಟಿತು, ಹರಳು ಗಟ್ಟಿತು. ಮಧ್ಯಯುಗದಲ್ಲಿ ಅವರು ಮಾಡುತ್ತಿದ್ದಂತೆ ಧಾರ್ಮಿಕ ನಂಬಿಕೆಗಳಿಗೋಸ್ಕರವಾಗಿ ಯಾರನ್ನು ನಾವು ಸಜೀವವಾಗಿ ಸುಡುವುದಿಲ್ಲ. ಜನರನ್ನು ಶೀಲುಬೆಗೇರಿಸುವುದಿಲ್ಲ. ಆದ್ದರಿಂದ ಮಧ್ಯಯಯುಗದಿಂದ ಮತ್ತು ಕತ್ತಲ ಯುಗದಿಂದ ಒಂದು ವಿಚಾರವನ್ನು ಎರವಲಾಗಿ ಪಡೆದು ಅವನ್ನು ಭಾರತದ ಮೇಲೆ ಹೇರುವುದು ಈ ದೇಶದ ನಾಗರಿಕತೆಗಾಗಲಿ ಘನತೆಗಾಗಲಿ ಗೌರವ ತೋರಿಸಿದಂತಾಗುವುದಿಲ್ಲ. ನ್ಯಾಯ ತೋರಿಸಿದಂತಾಗುವುದಿಲ್ಲ.

ಅದಕ್ಕೆ ಬದಲಾಗಿ, ಕಳೆದ 10-15 ವರ್ಷಗಳಿಂದ ಹೇಳುತ್ತಾ ಬಂದಿರುವುದನ್ನೇ ಗಿಣಿ ಪಾಠವಾಗಿ ಹೇಳದೆ ಮಹಾತ್ಮಾ ಗಾಂಧಿಯವರು ಮಾಡಿದ ಹಾಗೆ ಇತ್ಯಾರ್ಥಕ ಚಿಂತನೆ ನಡೆಸಿ ಈ ವಿಚಾರಕ್ಕೆ ನೀವು ಬಂದಿದ್ರೆ ನಾನು ಖಂಡಿತವಾಗಿ ಅಭಿನಂದಿಸುತ್ತಿದ್ದೆ. ನನಗೆ ತುಂಬಾ ಸಂತೋಷವಾಗುತ್ತಿತ್ತು.

*(ಲೋಕ ಸಭೆ ಕಲಾಪ ದಿನಾಂಕ : 16-11-1966)*

## (2) ರಾಜ್ಯಪಾಲರ ಅಧಿಕಾರ ಕುರಿತು

**ಶ್ರೀ ಹನುಮಂತಯ್ಯ (ಬೆಂಗಳೂರು )** : ಮಾನ್ಯರೆ, ಕಳೆದ ವಾರಾಂತ್ಯ ನಾನು ಭೂಪಾಲದಲ್ಲಿದ್ದೆ. ರಾಜಕೀಯ ಪರಿಸ್ಥಿತಿ ಅಸ್ಥಿರವಾಗಿತ್ತು. ನಾನು ಸಂಧಿಸಿದ ಹಲವರು ಇಂದು ಜನಸಂಘದ ಮುಖ್ಯಸ್ಥರು ಹೇಳಿದ ಮಾತನ್ನೇ ಹೇಳಿದರು. ನಾವು ಸುಪ್ರಸಿದ್ಧ ಮಾನಕಗಳನ್ನು ಸಂಪ್ರದಾಯಗಳನ್ನು ಪ್ರಜಾಸತ್ತಾತ್ಮಕ ನಡುವಳಿಕೆಯ ತತ್ವಗಳನ್ನು ಅನುಸರಿಸಬೇಕು. ಈ ವಿಷಯದಲ್ಲಿ ತಾವು ಸಂಸತ್ತಿನ ಮಾದರಿಯನ್ನು ನೋಡುವುದಾಗಿಯೂ ಅವರು ಹೇಳಿದರು. ಇಲ್ಲಿ ದೆಹಲಿಯಲ್ಲಿ ರಾಜಕೀಯ ವರ್ತನೆ ಮತ್ತು ಸಾಂವಿಧಾನಿಕ ನಡವಳಿಕೆಗಳಿಗಾಗಿ ಮಾನಕಗಳನ್ನು ನಿರ್ಮಿಸುವುದೇ ಸಂಸತ್ತು. (ಗದ್ದಲ)

**ಶ್ರೀ ಜೆ. ಬಿ. ಕೃಪಲಾನಿ** : ತತ್ವವನ್ನು ಬೋಧಿಸುತ್ತಿದ್ದಾರೆ.

**ಹನುಮಂತಯ್ಯ** : ನಾನು ತತ್ವವನ್ನು ಬೋಧಿಸುತ್ತಿರುವುದಾಗಿ ಆಚಾರ್ಯ ಕೃಪಲಾನಿ ಅವರು ಹೇಳುತ್ತಾರೆ. ಸದಾ ಕಾಲವೂ ಎಲ್ಲ ಭಾಷಣಗಳಲ್ಲೂ ಅವರು ಅದನ್ನೇ ಮಾಡುತ್ತಾರೆ. ಆದ್ದರಿಂದ ಈ ದಿನ ನಾನು ಹಾಗೆ ಮಾಡಿದರೆ ಅವರು ಕ್ಷಮಿಸಬೇಕು. ಅದು ಕಾಂಗ್ರೆಸ್ ಪಕ್ಷ ಹಾಗೂ ಇತರ ಪ್ರಜಾಸತ್ತಾತ್ಮಕ ಪಕ್ಷಗಳ ನಡುವೆ ಸಮಾನವಾಗಿರುವ ಕ್ಷೇತ್ರ ನಾವು ಸಂವಿಧಾನವನ್ನು ನಿಜವಾದ ಪ್ರಜಾಸತ್ತಾತ್ಮಕ ಸಂಪ್ರದಾಯಗಳ ಹಾಗೆ ಸಂವಿಧಾನದ ನಿಜವಾದ ಸತ್ವದ ಪ್ರಕಾರ ಕಾರ್ಯರೂಪದಲ್ಲಿ ತೋರಿಸಬೇಕು. ನಾನು ಭೂಪಾಲ್ ಅಥವಾ ಪಂಜಾಬ್ ವಿಷಯಕ್ಕೆ ಹೋಗುವುದಿಲ್ಲ. ಇಡೀ ಜಗತ್ತಿನಲ್ಲಿ ಸ್ವಯಂ ಸ್ಪಷ್ಟವಾಗಿರುವಂತಹ ಮೂರು ತತ್ವಗಳನ್ನು ಮಾತ್ರ ಇಲ್ಲಿ ನಿರೂಪಿಸಲು ಬಯಸುತ್ತೇನೆ.

ಒಬ್ಬ ಗವರ್ನರ್ ಹೋಗಲಿ, ರಾಷ್ಟ್ರಪತಿಯು ಸ್ವತಂತ್ರವಾಗಿ ವರ್ತಿಸುವುದಿಲ್ಲ. ಬ್ರಿಟನ್ನಿನ್ನಲ್ಲಿಯೂ ರಾಜನಾಗಲಿ ರಾಣಿಯಾಗಲಿ ಪ್ರಧಾನ ಮಂತ್ರಿಯ ಸಲಹೆಯಂತೆಯೇ ಕ್ರಮ ಕೈಗೊಳ್ಳಬೇಕು. ನಾವು ರಚಿಸಿಕೊಂಡಿರುವ ಸಂವಿಧಾನದಲ್ಲಿ ಇದೇ ತತ್ವವನ್ನು ಅಳವಡಿಸಿದ್ದೇವೆ. ರಾಷ್ಟ್ರಪತಿ ಅಥವಾ ರಾಜ್ಯಪಾಲನು, ಪ್ರಧಾನ ಮಂತ್ರಿಯ ಅಥವಾ ಮುಖ್ಯಮಂತ್ರಿಯ ಸಲಹೆಯಂತೆ ನಡೆದುಕೊಳ್ಳಬೇಕು. ಇದು ಕಾಂಗ್ರೆಸ್ ಪ್ರಾಂತಗಳಿಗೆ ಮಾತ್ರವಲ್ಲ, ಕಾಂಗ್ರೆಸ್ಸೇತರ ಸಚಿವ ಸಂಪುಟಗಳಿರುವ ಪ್ರಾಂತಗಳಿಗೂ ಅನ್ವಯಿಸುತ್ತದೆ ಎಂದು ರಾಜ್ಯಪಾಲನೋ ರಾಷ್ಟ್ರಪತಿಯೋ ತನಗಿಚ್ಛೆಬಂದಂತೆ ವರ್ತಿಸಿದ ದಿನ ಅವರು

ಮುಖ್ಯಮಂತ್ರಿ ಅಥವಾ ಪ್ರಧಾನ ಮಂತ್ರಿಯ ಸಲಹೆಯಂತೆ ನಡೆಯಬೇಕು ಎಂಬ ಸಂವಿಧಾನಿಕ ತತ್ವವನ್ನು ಅವರು ಅತಿಕ್ರಮಿಸಿದಂತಾಗುತ್ತದೆ. ಒಂದು ವಿಶೇಷ ರಾಜಕೀಯ ಪರಿಸ್ಥಿತಿಯುಂಟಾದಾಗ ಅಥವಾ ಆಡಳಿತೀಯ ಸಮಸ್ಯೆಯೊಂದು ಉದ್ಭವಿಸಿದಾಗ ರಾಜ್ಯಾಪಾಲರು ಯಾರ ಸಲಹೆಯನ್ನು ಪಡೆಯಬೇಕು? ಮುಖ್ಯ ಮಂತ್ರಿಯ ಸಲಹೆಯನ್ನು ಪಡೆಯಬೇಕೆನ್ನುವುದು ಸುಪ್ರಸಿದ್ಧವಾಗಿರುವ ತತ್ವ ಅಷ್ಟೇ ಹೊರತು ರಾಜ್ಯಪಾಲನು ತನಗಿಚ್ಛೆ ಬಂದಂತೆ ಸ್ವತಂತ್ರವಾಗಿ ವರ್ತಿಸುವುದು ಸಾಧ್ಯವಿಲ್ಲ. ಕೇಂದ್ರ ಸರ್ಕಾರವು ಇಲ್ಲಿಂದ ಏನೋ ಒಂದು ಕ್ರಮ ಕೈಗೊಳ್ಳಬೇಕೆಂದು ರಾಜ್ಯಪಾಲನಿಗೆ ತಿಳಿಸಿದರೆ, ಅದು ಪ್ರಾಂತೀಯ ಸ್ವಾಯತ್ತತೆಯನ್ನು ಕೇಂದ್ರವು ಅತಿಕ್ರಮಿಸಿದಂತಾಗುತ್ತದೆ. ಇದನ್ನು ಎಲ್ಲರೂ ಒಪ್ಪುತ್ತಾರೆ. ವಿಶೇಷವಾಗಿ ಕಾಂಗ್ರೆಸ್ಸೇತರ ಸಂಪುಟಗಳು ಇದನ್ನು ಪ್ರತಿಪಾದಿಸುತ್ತವೆ.

ಭಾರತದಲ್ಲಿ ನಾವು ಪಕ್ಷಾಧಾರಿತ ಸರಕಾರಗಳನ್ನು ನಡೆಸುತ್ತೇವೆ. ನಾವು ಅಳವಡಿಸಿಕೊಂಡಿರುವ ಪ್ರಜಾಪ್ರಭುತ್ವದ ವಿನ್ಯಾಸ ಅದು ಆದ್ದರಿಂದ ನಾವು ಪಕ್ಷ ವ್ಯವಸ್ಥೆಯಲ್ಲಿ ಬದುಕಿದ್ದೇವೆ. ಯಾವನೇ ಮುಖ್ಯ ಮಂತ್ರಿಯು ಆ ಪದವಿಯನ್ನು ಅಲಂಕರಿಸಬೇಕಾದರೆ ಅದನ್ನು ಒಂದು ಪಕ್ಷದ ಮುಖ್ಯಸ್ಥನಾಗಿರಲೇಬೇಕು. ಮುಖ್ಯ ಮಂತ್ರಿಯ ಈ ಅಧಿಕಾರವನ್ನು ಸೂಕ್ತವಾಗಿ ಕಾಪಾಡುವುದಕ್ಕೆ ಬೇಕಾದ ಸಹಿಷ್ಣುತೆ ಮತ್ತು ತಾಳ್ಮೆ ನಮಗಿರಬೇಕು.

ಏನಾದರೊಂದು ಕಾನೂನು ಬಾಹಿರವಾದ ಅಥವಾ ಅಸಾಂವಿಧಾನಿಕವಾದ ಸಂದರ್ಭವಿದ್ದಾಗ ಅಥವಾ ಅಖಿಲ ಭಾರತ ಮಟ್ಟದಲ್ಲಿ ಪರಿಗಣಿಸಬೇಕಾದ ಏನಾದರೊಂದು ವಿಚಾರವಿದ್ದರೆ, ಆಗ ಕೇಂದ್ರ ಸರ್ಕಾರವು ಗವರ್ನರ್ ಮೂಲಕ ರಾಜ್ಯ ಸರ್ಕಾರಕ್ಕೆ ಸಲಹೆ ಮಾಡಬಹುದು ಅಥವಾ ವರ್ತಿಸಬಹುದು. ಶಾಸನ ಸಭೆಯನ್ನು ಕೂಡಿಸುವುದಕ್ಕೂ ಮುಂದಕ್ಕೆ ಹಾಕುವುದಕ್ಕೂ ಸಂವಿಧಾನದಲ್ಲಿ ನಿರ್ದಿಷ್ಟ ಅವಕಾಶಗಳಿವೆ. ಈ ವಿಚಾರದಲ್ಲೂ ರಾಜ್ಯಪಾಲನಿಗೆ ಸಲಹೆ ಕೊಡುವವನೂ ಮುಖ್ಯ ಮಂತ್ರಿಯೇ. ಇಂದು ರಾಜ್ಯಪಾಲರು ವಿಧಾನ ಸಭೆಯನ್ನು ಮುಂದೂಡಿದ್ದರೆ, ಅದು ಮುಖ್ಯ ಮಂತ್ರಿಯ ಸಲಹೆಯಂತೆ. ಇದೇ ಈಗಿರುವ ಪರಿಸ್ಥಿತಿ ಎಂದು ನಾನು ಊಹಿಸಿದ್ದೇನೆ. ನನಗೆ ಗೊತ್ತಿಲ್ಲ. ಅವರು ಹಾಗೆ ಸಲಹೆ ಮಾಡಿದ್ದರೆ ಅದು ಸರಿಯಾದ ಸಾಂವಿಧಾನಿಕ ಸ್ಥಿತಿಯಲ್ಲ. ಸ್ಥಗಿತಗೊಳಿಸುವುದೆಂದರೆ ವಿಧಾನ ಸಭೆಯು ವಿಸರ್ಜನೆಯಾಗಿದೆಯೆಂದಾಗಲಿ, ಮತ್ತೆ ಅದು ಕೂಡುವುದಿಲ್ಲವೆಂದಾಗಲಿ ಅರ್ಥವಲ್ಲ. ಆ ಅಸೆಂಬ್ಲಿಯು ಮತ್ತೆ ಅಗತ್ಯವಾಗಿ ಸೇರುತ್ತದೆ, ಈ ತಿಂಗಳ ಮಧ್ಯೆ ಸೇರಲಿದೆಯೆಂದು ಕೇಳಿದ್ದೇನೆ. ಆದ್ದರಿಂದ ಈ

ಸದನವನ್ನು ಮುಂದೂಡಬೇಕೆಂಬ ಸೂಚನೆಯನ್ನು ತಂದಿರುವವರು ಒಂದೋ ಎರಡೋ ವಾರ ಇನ್ನೊಂದು ಸದನವೂ ಮುಂದೆ ಹೋದರೆ ಅದನ್ನು ಸಹಿಸಿಕೊಳ್ಳಬೇಕು. ಪ್ರತಿಯೊಂದು ಪಕ್ಷಕ್ಕೂ ಅದರದ್ದೇ ನಿಯಮಾವಳಿಯೂ ನಡವಳಿಕೆಯು ಒಂದು ಸಂಹಿತೆಯೂ ಇರುತ್ತದೆ. ಜನಸಂಘ ಮತ್ತು ಸ್ವತಂತ್ರ ಪಕ್ಷಗಳೂ ಇದಕ್ಕೆ ಹೊರತಲ್ಲ. ಚುನಾವಣಾ ಪ್ರಣಾಳಿಕೆಗಳನ್ನು ಪ್ರಕಟಿಸಲಾಗುತ್ತದೆ. ಆಯಾ ಪಕ್ಷದ ಮುಖ್ಯ ಸಚೇತಕರು ಅಭ್ಯರ್ಥಿಗಳನ್ನು ಚುನಾಯಿಸುತ್ತಾರೆ. ಒಂದು ನಿರ್ದಿಷ್ಟ ಪಕ್ಷದಿಂದ ಟಿಕೇಟ್ ಪಡೆದು ಚುನಾವಣೆಗೆ ನಿಲ್ಲುವ ಪ್ರತಿಯೊಬ್ಬ ಸದಸ್ಯನೂ ರಾಜೀನಾಮೆ ಕೊಡುವುದಕ್ಕೆ ಮುಂಚೆ ಒಂದು ಮುಚ್ಚಳಿಕೆಯನ್ನು ಕೊಡುತ್ತಾನೆ.

ಸ್ಪೀಕರ್ : ಅದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ.

ಶ್ರೀ ಹನುಮಂತಯ್ಯ : ಈ ವಿಷಯದಲ್ಲಿ ಸಭಾತ್ಯಾಗ ಮಾಡಿದ ಕಾಂಗ್ರೆಸ್ ಸದಸ್ಯರಾಗಲಿ ರಾಜೀನಾಮೆ ಕೊಟ್ಟವರಾಗಲಿ ತಾವು ಯಾವ ವಿಧಿಗೆ ಬದ್ಧವಾಗಿದ್ದರೋ, ಯಾವ ಪ್ರಮಾಣಕ್ಕೆ ಸಹಿ ಮಾಡಿದ್ದರೋ ಅದನ್ನು ಅನುಸರಿಸಿದಂತಾಗಲಿಲ್ಲ ಎಂದು ತೋರಿಸುವುದಕ್ಕಾಗಿ ಇದನ್ನು ವಿವರಿಸುತ್ತಿದ್ದೇವೆ. ಪ್ರಜಾಸತ್ತೆಯ ಮೌಲ್ಯಗಳನ್ನು ನಾವು ಹಾಕಿಕೊಡಬೇಕು ಎಂದು ಅವರೇ ಹೇಳುತ್ತಿದ್ದರು. ಇದೇ ರೀತಿಯಾಗಿ ಜನ ಸಂಘ ಮತ್ತು ಸ್ವತಂತ್ರ ಪಕ್ಷಗಳ ನಿಯಮಗಳು ಭಾಧಿತವಾದರೆ ಈ ಪಕ್ಷಗಳು ಬೆಳೆಯುವುದಾದರೂ ಹೇಗೆ ? ಇದೇ ತಾನೇ ಮಾತನಾಡಿದ ಡಿ. ಎಂ. ಕೆ. ಸದಸ್ಯರು, ಕಾಂಗ್ರೆಸ್ ಸಚಿವ ಸಂಪುಟವು ಪತನ ಹೊಂದುತ್ತಿರುವುದರಿಂದ ತನಗೆ ಸಂತೋಷವಾಗಿದೆ ಎಂದು ಹೇಳಿದರು. ಇದು ನಗೆ ನಿರ್ದಿಷ್ಟವಾಗಿ ವಿಷಾದವಾಗಿದೆ. ನಾವು ವಿಚಾರವನ್ನು ರೀತಿಯಲ್ಲಿ ನೋಡಬಾರದು. ಸಾಂವಿಧಾನಿಕ ಔಚಿತ್ಯ ಮತ್ತು ರಾಜಕೀಯ ನೈತಿಕತೆಗಳ ದೃಷ್ಟಿಯಿಂದ ನಾವು ಇದನ್ನು ನಿರ್ಧರಿಸಬೇಕು.

ಶ್ರೀ ಎಸ್. ಕಂದಪ್ಪನ್ : ಇದು ನಿಮ್ಮದೇ ಆಂತರಿಕ ಸಮಸ್ಯೆ.

ಶ್ರೀ ಹನುಮಂತಯ್ಯ : ಅಖಿಲ ಭಾರತ ಅನ್ವಯವುಳ್ಳ ಈ ವಿಚಾರವನ್ನು ವೈಯಕ್ತಿಕ ವಿಚಾರಗಳೆಂದು ನೀವು ಭಾವಿಸುವುದಾದರೆ, ಜನಸಂಘದ ನಾಯಕರು ಹೇಳಿದಂತೆ ಸಂಪ್ರದಾಯವನ್ನು ನಿರ್ಮಿಸುವುದಕ್ಕೆ ಬದಲಾಗಿ ನಮ್ಮದೇ ಮಾನಸಿಕ ಒಲವಿಗೆ ತಕ್ಕಂತೆ ಮಾತನಾಡುತ್ತಿರುತ್ತೇವೆ.

ಆದ್ದರಿಂದ ಪ್ರಜಾಸತ್ತೆಯಲ್ಲಿ ವಿಶ್ವಾಸವಿರುವ ಎಲ್ಲಾ ಪಕ್ಷಗಳಲ್ಲೂ ನಾನು ಮನವಿ ಮಾಡಿ ಕೊಳ್ಳುತ್ತೇನೆ. ಅವರು ಸೂಕ್ತ ರೀತಿಯಲ್ಲಿ ಸೂಕ್ತ ವಿಧಾನಗಳಿಂದ ಅಧಿಕಾರಕ್ಕೆ ಬರಬೇಕೇ ಹೊರತು ಇನ್ನೊಬ್ಬರ ದೌರ್ಬಲ್ಯವನ್ನು ಉಪಯೋಗಿಸಿಕೊಂಡು ತಮ್ಮ ಇಷ್ಟಾರ್ಥ ಪೂರೈಕೆಗಾಗಿ ಸೂಕ್ತವಲ್ಲದ ವಿಧಾನಗಳನ್ನು ಅನುಸರಿಸಬಾರದು.

ಮಾನ್ಯರೇ, ಈ ಪ್ರಶ್ನೆಯನ್ನು ಒಂದು ರಾಜಕೀಯ ಕೋನದಿಂದ ನೋಡಲು ನಾನು ಬಯಸುವುದಿಲ್ಲ. ಅದನ್ನು ಸಾಂವಿಧಾನಿಕ ದೃಷ್ಟಿಯಿಂದ ಪರಿಶೀಲಿಸಲು ನನ್ನ ಶಕ್ತಿಯಿರುವಷ್ಟು ಮಟ್ಟಿಗೆ ಪ್ರಯತ್ನಿಸುತ್ತೇನೆ. ಆಡಳಿತ ಸುಧಾರಣಾ ಆಯೋಗವು ಈ ಪ್ರಶ್ನೆಯನ್ನು " ಕೇಂದ್ರ ಮತ್ತು ರಾಜ್ಯ ಸಂಬಂಧ" ಎಂಬ ಶೀರ್ಷಿಕೆಯಿಂದ ಅಧ್ಯಯನ ಮಾಡುತ್ತಿದೆ. ಭಾರತದ ಮಾಜಿ ಆಟಾರ್ನಿ ಜನರಲ್ ಶ್ರೀ ಸೆಟಲ್‌ವಾಡ್ ಅವರ ಅಧ್ಯಕ್ಷತೆಯಲ್ಲಿ ಒಂದು ಅಧ್ಯಯನ ತಂಡವನ್ನು ನೇಮಿಸಿದೆವು. ಅವರು ಈಗ ವರದಿ ಸ್ಲಲಿಸಿದ್ದಾರೆ. ಸದನದ ಒಳಗೂ ಹೊರಗೂ ನಡೆಯುತ್ತಿರುವ ಚರ್ಚೆಗಳಿಂದ ರಾಜ್ಯಪಾಲರ ಅಧಿಕಾರವನ್ನು ಕುರಿತು ಇನ್ನಷ್ಟು ಸ್ಪಷ್ಟೀಕರಣದ ಅಗತ್ಯವಿದೆ ಎಂಬುದು ಅರ್ಥವಾಗುತ್ತದೆ. ಅದರಲ್ಲೂ ರಾಜ್ಯಗಳಲ್ಲೂ ಕೇಂದ್ರದಲ್ಲು ಬೇರೆಬೇರೆ ಪಕ್ಷಗಳು ಸರ್ಕಾರವನ್ನು ರಚಿಸುವ ಸಂದರ್ಭದಲ್ಲಿ ಇದು ಬಹು ಮುಖ್ಯವಾಗುತ್ತದೆ. ಈಗ ಮುಂದಿರುವ ಪ್ರಶ್ನೆ ಗೃಹ ಸಚಿವಾಲಯವು ಸಂವಿಧಾನದ ಅವಕಾಶಗಳಿಗೆ ಅನುಗುಣವಾಗಿ ವರ್ತಿಸಿದೆಯೆ ಅಥವಾ ಪಕ್ಷದ ಉದ್ದೇಶಗಳಿಗಾಗಿ ಸಂವಿಧಾನದ ಯಾವುದಾದರೂ ತತ್ವಗಳನ್ನು ಉಲ್ಲಂಘಿಸಿದೆಯೆ ಎನ್ನುವುದು.

ಶ್ರೀ ನಾಥಪೈ ಹಿರಿಯ ಪ್ರಜಾಪ್ರಭುತ್ವವಾದಿ. ಈ ದೇಶದಲ್ಲಿ ಪ್ರಜಾಪ್ರಭುತ್ವವು ಸುರಕ್ಷಿತವಾಗಿರುವಂತೆ ಮಾಡಲು ಸಂಪ್ರದಾಯಗಳನ್ನು ಸಾಂವಿಧಾನಿಕ ಅವಕಾಶಗಳನ್ನು ಎತ್ತಿ ಹಿಡಿಯುವುದರಲ್ಲಿ ಅವರು ಯಾರಿಗೂ ಎರಡನೆಯವರಲ್ಲ ಎಂಬ ದೃಢವಾದ ನಂಬಿಕೆ ನನಗಿದೆ. ಬಿಹಾರದ ರಾಜ್ಯಪಾಲರ ವಿಷಯವನ್ನು ಮೊದಲು ತೆಗೆದುಕೊಳ್ಳುತ್ತೇನೆ 156(3)ನೆಯ ಸಂಬಂಧಿತ ಅನುಚ್ಛೇದವು ಹೀಗೆ ಹೇಳುತ್ತದೆ ;

ಈ ಅನುಚ್ಛೇದದ ಅವಕಾಶಗಳಿಗೆ ಒಳಪಟ್ಟು ಒಬ್ಬ ರಾಜ್ಯಪಾಲರು ಅಧಿಕಾರವನ್ನು ವಹಿಸಿಕೊಂಡ ದಿನದಿಂದ ಐದು ವರ್ಷಗಳ ಕಾಲ ಆ ಹುದ್ದೆಯಲಿರುತ್ತಾರೆ. ಗವರ್ನರರು ಅಧಿಕಾರಾವಧಿಯು ಮುಗಿದು ಹೋಗಿದ್ದರೂ ಮುಂದಿನವರು ವಹಿಸಿಕೊಳ್ಳುವವರೆಗೂ ಅಧಿಕಾರದಲ್ಲಿ ಮುಂದುವರಿಯುತ್ತಾರೆ.

ಸಂವಿಧಾನವು ಅಧಿಕಾರಾವಧಿಯನ್ನು ಐದು ವರ್ಷ ಎಂದು ನಿಗದಿಪಡಿಸಿದೆ. ಅದನ್ನು ವಿಸ್ತರಿಸುವುದಕ್ಕಾಗಲಿ ಮೊಟಕು ಗೊಳಿಸುವುದಕ್ಕಾಗಲಿ ಸರ್ಕಾರಕ್ಕೆ ಅವಕಾಶ ಕೊಟ್ಟಿಲ್ಲ. ಅವಕಾಶವು ಅಧಿಕಾರ ವಹಿಸಿಕೊಳ್ಳುವ ಕಾಲಾವಕಾಶಕ್ಕೆ ಮಾತ್ರ ಎಡೆಕೊಟ್ಟಿದೆ. ಇನ್ನೊಬ್ಬ ರಾಜ್ಯಪಾಲರು ಅಧಿಕರಾರ ವಹಿಸಿಕೊಳ್ಳುವವರೆಗೆ ಒಂದು ವಾರವೋ ಕೆಲವು ವಾರಗಳೋ ಆಗಬಹುದು. ಈ ಅನುಚ್ಛೇದವನ್ನು ಅದರ ಅವಕಾಶಗಳನ್ನು ಕಟ್ಟುನಿಟ್ಟಾಗಿ ಅನುಷ್ಠಾನಗೊಳಿಸಬೇಕು. ಬಿಹಾರದ ಈಗಿನ ಗವರ್ನರರು ಐದು ವರ್ಷಗಳ ಅವಧಿಯನ್ನು ಪೂರೈಸಿದ್ದಾರೆ. ಅವರಾಗಲಿ ಮುಖ್ಯ ಮಂತ್ರಿಯವರಾಗಲಿ ಅಥವಾ ನಮ್ಮಲ್ಲಿ ಬೇರೆ ಯಾರೇ ಆಗಲಿ ಯಾವುದೇ ವಿಧಾನದಿಂದ ಅವರ ಅವಧಿಯನ್ನು ವಿಸ್ತರಿಸುವ ಪ್ರಯತ್ನ ಮಾಡಿದರೆ ಅದು ಅಸಂವಿಧಾನಿಕವಾಗುತ್ತದೆ. ಗಂಭೀರವಾದ ನಡವಳಿಕೆಯಾಗುವುದಿಲ್ಲ. ಈಗ ನಾನು ಉದ್ಧರಿಸಿರುವ ಅನುಚ್ಛೇದವನ್ನು ಉಲ್ಲಂಘಿಸುವಂತೆ ಗೃಹ ಸಚಿವರನ್ನು ಒತ್ತಾಯಪಡಿಸುವುದು ಮುಖ್ಯ ಮಂತ್ರಿಯವರಿಗೆ ಭೂಷಣವಲ್ಲ ಭಾರತ ಸರ್ಕಾರವು ಸಂವಿಧಾನದ ಅವಕಾಶಗಳಿಗೆ ಅನುಗುಣವಾಗಿ ನಡೆಯಲು ಪ್ರಯತ್ನಿಸುತ್ತಿದೆ. ಬಿಹಾರದ ಮುಖ್ಯ ಮಂತ್ರಿಯವರು - ಹಾಲಿ ಇರುವ ರಾಜ್ಯಪಾಲರನ್ನು ಕುರಿತು ಅಪಾರವಾದ ಪ್ರೀತಿಯಿರಬಹುದು, ಅಥವಾ ಬೇರೆ ಯಾವುದೇ ಕಾರಣವಿರಬಹುದು - ಗೃಹ ಸಚಿವರನ್ನು ಈ ರಾಜ್ಯಪಾಲರ ಅಧಿಕಾರಾವಧಿಯನ್ನು ವಿಸ್ತರಿಸುವಂತೆ ಕೇಳಿದರೆ ವಿಸ್ತರವಾಗಿ ಸಂವಿಧಾನವು ನೀಡಿರುವ ಅಧಿಕಾರವನ್ನು ಅತಿಕ್ರಮಿಸಿ ಹೋಗಬೇಕೆಂದು ಹೇಳಿದ ಹಾಗೆಯೇ. ನನ್ನ ಗೌರವಾನ್ವಿತ ಮಿತ್ರರಾದ ಶ್ರೀ ಚಟರ್ಜಿ ಇಂತಹ ಪೂರ್ವನಿದರ್ಶನಗಳಿವೆ ಎಂದು ಹೇಳುತ್ತಾರೆ. ನನಗೆ ಅವು ಗೊತ್ತು. ಹಿಂದಿನ ಪ್ರಧಾನ ಮಂತ್ರಿಯವರೊಂದಿಗೆ ಉದ್ದಕ್ಕೂ ನಾನು ಅದು ತಪ್ಪು ಐದು ವರ್ಷ ಅಧಿಕಾರವಧಿಯನ್ನು ಪೂರೈಸಿದ ರಾಜ್ಯಪಾಲರನ್ನು ಮುಂದುವರಿಸುವುದು ಅ ಸಾಂವಿಧಾನಿಕವಾಗುತ್ತದೆ ಎಂದು ಹೇಳುತ್ತಲೇ ಬಂದಿದ್ದೇನೆ. ಅವರಿಗೆ ಅಷ್ಟೊಂದು ಅಪೇಕ್ಷೆಯಾದರೆ, ಒಬ್ಬ ವ್ಯಕ್ತಿಯನ್ನು ಕುರಿತು ಅಂತಹ ಅಕ್ಕರೆಯಿದ್ದರೆ ಬೇರೊಂದು ರಾಜ್ಯದ ರಾಜ್ಯಪಾಲರನ್ನಾಗಿ ಅಥವಾ ಅದೇ ರಾಜ್ಯದಲ್ಲೇ ಇನ್ನೊಂದು ಅವಧಿಗೆ ನೇಮಿಸಬಹುದು. ಅದು ಸಂವಿಧಾನಕ್ಕೆ ಅನುಗುಣವಾದ ಕ್ರಮವಾಗುತ್ತದೆ. ಆದರೆ ಅವರನ್ನು ಅಲ್ಲೇ ಉಳಿಸಿಕೊಂಡು ಅವಧಿಯನ್ನು ವಿಸ್ತರಿಸುತ್ತಾ ಹೋಗುವುದು ಸಂವಿಧಾನದ ಅವಕಾಶಗಳಿಗೆ ಅನುಗುಣವಾಗಿರುವುದಿಲ್ಲ.

ಎರಡನೆಯದಾಗಿ, ಬಿಹಾರದ ಮುಖ್ಯ ಮಂತ್ರಿಯವರನ್ನು ಸಲಹೆ ಕೇಳಿರುವುದಾಗಿ ನನ್ನ ಪ್ರಿಯ ಮಿತ್ರರು ಶ್ರೀ ನಾಥಪೈ ವಾದ ಮಾಡುತ್ತಾರೆ. ಅವರು ಸಲಹೆ ಪಡೆಯುವುದನ್ನು ಗೃಹ ಸಚಿವರು ನಿರ್ಣಯ ಎಂದು ತೆಗೆದುಕೊಂಡಿಲ್ಲ. ಶ್ರೀ ನಾಥಪೈ ಅವರಿಗೆ ''ಸಲಹೆ''

ಎಂಬ ಪದದ ಅರ್ಥ ಚೆನ್ನಾಗಿಯೇ ತಿಳಿದಿದೆ ಎಂದು ನಂಬುತ್ತೇನೆ. ಅದು ''ನಿರ್ಣಯ''. ಅಲ್ಲ. ಮುಖ್ಯ ಮಂತ್ರಿಯವರ ಸಲಹೆ ಪಡೆಯಲೇ ಬೇಕು. ಅದೇ ಸಂಪ್ರದಾಯ. ಅವರ ಸಲಹೆ ಪಡೆದು ಕೊಂಡಾದ ಮೇಲೆ ಭಾರತ ಸರ್ಕಾರವು, ಆ ಸಲಹೆಯು ಕೊಟ್ಟಿರುವ ಸೂಚನೆಯು, ಅಥವಾ ನೀಡಿರುವ ಅಭಿಪ್ರಾಯ ಸಂವಿಧಾನಕ್ಕೆ ಸುಸಂಗತವಾಗಿದೆಯೇ ಇಲ್ಲವೆ ಎಂದು ತೂಗಿ ನೋಡಬೇಕು.

ಪ್ರಸ್ತುತ ವಿಷಯದಲ್ಲಿ ಬಿಹಾರದ ಮುಖ್ಯ ಮಂತ್ರಿಯವರು ರಾಜ್ಯಪಾಲರನ್ನು ಅನಿರ್ದಿಷ್ಟ ಕಾಲವ್ರೋ ಒಂದು ವರ್ಷವ್ರೋ ಮುಂದುವರಿಸಬೇಕೆಂದು ಗೃಹ ಸಚಿವರಿಗೆ ಹೇಳಿದರೆ, ಅದಕ್ಕೆ ಸಂವಿಧಾನದಲ್ಲಾಗಲಿ ಬೇರೆಯಾವುದೇ ಒಂದು ಶಾಸನದಲ್ಲಾಗಲಿ ಆ ಮುಂದುವರಿಕೆಗೆ ಅವಕಾಶವೆಲ್ಲಿದೆ ? ಹಾಗಿದ್ದರೂ ಬಿಹಾರದ ಮುಖ್ಯ ಮಂತ್ರಿಯವರೋ ಇತರರೋ ರಾಜ್ಯಪಾಲರನ್ನು ಅಸಂವಿಧಾನಿಕವಾಗಿ ಮುಂದುವರಿಸಲು ಪಟ್ಟುಹಿಡಿದರೆ, ಅದು ಸಂವಿಧಾನದ ಅವಕಾಶಗಳಿಗೆ ವಿರುದ್ಧವಾಗುವುದರಿಂದ, ಸಂವಿಧಾನವನ್ನು ಎತ್ತಿ ಹಿಡಿಯುವ ಶ್ರೀ ಸಾಥಸ್ಯೆ ಅದನ್ನು ಖಂಡಿತವಾಗಿ ಬೆಂಬಲಿಸಲಾರರು ಎಂದು ಭಾವಿಸುತ್ತೇನೆ.

**6-00 ಗಂಟೆ**

ಕನುಂಗೋ ಅವರ ವಿಷಯಕ್ಕೆ ಬರುವುದಾದರೆ, ಅವರ ವ್ಯಕ್ತಿತ್ವನ್ನು ಕುರಿತು ನಾವು ಯಾವ ವಿವಾದಕ್ಕೂ ಪ್ರವೇಶಿಸುತ್ತಿಲ್ಲ. ಪ್ರತಿಯೊಬ್ಬರ ವ್ಯಕ್ತಿತ್ವವನ್ನು ಕುರಿತು ಕೆಲವರು ಹೊಗಳುತ್ತಾರೆ. ಕೆಲವರು ತೆಗಳುತ್ತಾರೆ. ಆದರೆ ಇಲ್ಲಿ ಪ್ರಶ್ನೆ ಅದಲ್ಲ: ಕೆಲವರಿಗೆ ಕನುಂಗೋ ಒಳ್ಳೆಯವರೆಂದು ಕಾಣಬಹುದು. ಮತ್ತೆ ಕೆಲವರಿಗೆ ಅಷ್ಟು ಒಳ್ಳೆಯವರೆಂದು ಕಾಣದಿರಬಹುದು. ಆದರೆ ಈ ಚರ್ಚೆಗೆ ಅದು ಅಸಂಗತ. ಶ್ರೀ ಕನುಂಗೋ ಐದು ವರ್ಷಗಳ ಅಧಿಕಾರಾವಧಿಯನ್ನು ಇನ್ನೂ ಮುಗಿಸಿಲ್ಲ. ಕೆಲವು ಸದಸ್ಯರು ಆರೋಪಿಸಿರುವಂತೆ ಅವರು ಸೋತ ಅಭ್ಯರ್ಥಿಯೂ ಅಲ್ಲ ಅವರನ್ನು ಐದು ವರ್ಷದ ಅವಧಿಯೊಳಗೆ ಒಂದು ರಾಜ್ಯದಿಂದ ಇನ್ನೊಂದಕ್ಕೆ ನೇಮಿಸಲಾಗಿದೆ, ಅದು ಸಂಪೂರ್ಣವಾಗಿ ಸಾಂವಿಧಾನಿಕವಾಗಿದೆ.

ಪಶ್ಚಿಮ ಬಂಗಾಳಕ್ಕೆ ಸಂಬಂಧಿಸಿದಂತೆ, ಶಾಸನ ಸಭೆಯನ್ನು ಕರೆಯಲು ರಾಜ್ಯಪಾಲರಿಗೆ ಅಧಿಕಾರವಿದೆಯೇ ಇಲ್ಲವೇ ಎನ್ನುವುದನ್ನು 174ನೇ ಪ್ರಕರಣವು ಸ್ಪಷ್ಟವಾಗಿ ನಿರೂಪಿಸುತ್ತದೆ. ಗವರ್ನರ್ ಕೇವಲ ಮೊಹರಲ್ಲ. ಸಂವಿಧಾನವು ಅವರಿಗೆ ಬೇಕಾದಷ್ಟು ಅಧಿಕಾರ ನೀಡಿರುವುದನ್ನು ನಾವು ನೆನಪು ಮಾಡಿಕೊಳ್ಳಬಹುದು. ಅವರ ಸ್ಥಾನ

ಒಂದು ರಾಜ್ಯದ ತಲೆಯಾಳಿನ ಸ್ಥಾನ. ಕಾರ್ಯಾಂಗದ ಮುಖ್ಯಸ್ಥನ ಸ್ಥಾನ. ಪ್ರತಿಯೊಂದು ರಾಜ್ಯದಲ್ಲೂ ಒಂದು ಶಾಸನ ಸಭೆಯಿರುತ್ತದೆ. ಅದರಲ್ಲಿ ಗವರ್ನರರೂ ಸಂದರ್ಭಕ್ಕೆ ತಕ್ಕಹಾಗೆ ದ್ವಿಸದನ ಶಾಸನ ಸಭೆಯೋ ಏಕ ಸದನದ ಶಾಸನ ಸಭೆಯೋ ಇರುತ್ತದೆ ಎಂಬುದಾಗಿ 168ನೆಯ ಪ್ರಕರಣವು ಹೇಳುತ್ತದೆ. ಆದ್ದರಿಂದ ರಾಜ್ಯಪಾಲನು ಶಾಸನ ಸಭೆಯ ಅವಿಭಾಜ್ಯ ಅಂಗ, ಆದರೆ ಮುಖ್ಯಮಂತ್ರಿ ಹಾಗಲ್ಲ, ರಾಜ್ಯಪಾಲನಿಗೆ ಸ್ವತಂತ್ರವಾದೊಂದು ಸಂವಿಧಾನಿಕ ಸ್ಥಾನಮಾನವಿರುತ್ತದೆ. ಅದು ಮುಖ್ಯ ಮಂತ್ರಿಯು ಪಡೆದಿರುವ ಸ್ಥಾನಮಾನ ಮತ್ತು ಅಧಿಕಾರಗಳಿಗಿಂತ ಬೇರೆ ರೀತಿಯದು. ಶಾಸನ ಸಭೆಯ ಭಾಗವಾಗಿ ರಾಜ್ಯಪಾಲನು ಶಾಸನ ಸಭೆಯ ಮತ್ತು ಅದರ ಕಾರ್ಯಕಲಾಪಗಳ ಸೂಕ್ತ ನಿರ್ವಹಣೆಯಲ್ಲಿ ಆಸಕ್ತಿ ವಹಿಸಿದರೆ ಅವರು ವಿಹಿತವಾಗಿ, ಸಂವಿಧಾನ ಬದ್ಧವಾಗಿ ನಡೆದುಕೊಂಡಂತಾಗಿರುತ್ತದೆ. ಇನ್ನು 174ನೆಯ ಪ್ರಕರಣವು ಹೀಗೆ ಹೇಳುತ್ತದೆ :

''ರಾಜ್ಯಪಾಲನು ಕಾಲದಿಂದ ಕಾಲಕ್ಕೆ ರಾಜ್ಯದ ಶಾಸನ ಸಭೆಯ ಸದನದ ಅಥವಾ ಉಭಯ ಸದನಗಳ ಸಭೆಯನ್ನು ಸೂಕ್ತವೆಂದು ಆತನು ಭಾವಿಸುವ ಸ್ಥಳದಲ್ಲಿ ಮಾತ್ರ ಆ ಸಮಯಕ್ಕೆ ಸೇರುವಂತೆ ಕರೆಯಬಹುದು''.

ಶಾಸನ ಸಭೆಯ ಅಧಿವೇಶನವನ್ನು ಕರೆಯುವ ಈ ಅಧಿಕಾರವನ್ನು ಸಲಹಾತ್ಮಕವಾಗಿ ರಾಜ್ಯಪಾಲರಿಗೆ ನೀಡಲಾಗಿದೆ. ಇನ್ನೂ ಅನೇಕ ಸದಸ್ಯರೊಂದಿಗೆ ನಾನು ಸಂವಿಧಾನ ರಚನಾ ಸಭೆಯಲ್ಲಿ ಭಾಗವಹಿಸಿದ್ದೇನೆ. ರಾಜ್ಯಾಂಗ ಸಭೆಯ ಕಾರ್ಯ ಕಲಾಪಗಳಲ್ಲಿ ಇನ್ನು ಹೆಚ್ಚು ಪರಿಣಾಮಕಾರಿಯಾದ ರೀತಿಯಲ್ಲಿ ಭಾಗವಹಿಸಲು ನನಗೆ ಸಾಧ್ಯವಾಗದೆ ಹೋದರೂ ಕೊನೆಯ ಪಕ್ಷ ಆ ಚರ್ಚೆಗಳನ್ನು ನಾನು ಅರ್ಥ ಮಾಡಿಕೊಂಡಿದ್ದೇನೆ. ಸಂವಿಧಾನದಲ್ಲಿ ರಾಜ್ಯಾಂಗ ಸಭೆಯು ಈ ಅವಕಾಶಗಳನ್ನು ಸೇರಿಸಿದಾಗ ಅವರ ಉದ್ದೇಶ ಏನಿದ್ದಿತು ಎಂಬುದು ನನಗೆ ತಿಳಿದಿದೆ. ಒಬ್ಬ ಮುಖ್ಯ ಮಂತ್ರಿಯು ಕಾನೂನನ್ನು ತನ್ನ ಕೈಗೆತ್ತಿಕೊಂಡು ವಿಧಾನ ಸಭೆಯ ಅಧಿವೇಶನವನ್ನೇ ಕರೆಯದೆ ತನ್ನ ಇಚ್ಛೆಯೇ ಜನತೆಯ ಇಚ್ಛೆ ಎಂದು ಹೇಳಿಕೊಳ್ಳಬಹುದು. ಇಂತ ಸಂದರ್ಭದಲ್ಲಿ ರಕ್ಷಣೆಗೋಸ್ಕರವಾಗಿ, ನಿಷ್ಪಕ್ಷಪಾತಿಯಾದ ಯಾವುದೇ ರಾಜಕೀಯ ಪಕ್ಷದೊಂದಿಗೆ ಸಂಬಂಧ ಪಡೆದಿರದ ಯಾವುದೇ ರಾಜಕೀಯ ಸಿದ್ಧಾಂತಕ್ಕೆ ಕಟ್ಟು ಬಿದ್ದಿರದ ಒಬ್ಬ ವ್ಯಕ್ತಿಯನ್ನು ಒಂದು ರಾಜ್ಯದ ಮುಖ್ಯನಾಗುವಂತೆ ಕೇಳಲಾಗುತ್ತದೆ. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಅಥವಾ ಯಾವುದೇ ಬಿಕ್ಕಟ್ಟು ತಲೆದೋರಿದಾಗ, ಸುವಿಧಾನದ ಅವಕಾಶಗಳಿಗನುಗುಣವಾಗಿ ನಿಷ್ಪಕ್ಷಪಾತಯುತ ನಿರ್ಣಯವನ್ನು ಅವನು ಕೈಗೊಳ್ಳಬಲ್ಲನು.

ಈ ನಿರ್ದಿಷ್ಟ ಸಂದರ್ಭದಲ್ಲಿ ಪಶ್ಚಿಮ ಬಂಗಾಳ ವಿಧಾನ ಸಭೆಯಲ್ಲಿರುವವ ವಿರೋಧ ಪಕ್ಷದ ನಾಯಕರೂ ಮತ್ತು ಇತರ ಕೆಲವರೂ ತಮಗೆ ಬಹುಮತವಿದೆ ಎಂದು ಹೇಳುತ್ತಾರೆ. ಮುಖ್ಯ ಮಂತ್ರಿಯಾಗಿರುವವರೂ ತಮಗೆ ಬಹುಮತವಿದೆ ಎಂದು ಹೇಳುತ್ತಾರೆ. ರಾಜ್ಯಪಾಲರಿಗೆ ತುಂಬಾ ಕಷ್ಟದ ಸ್ಥಿತಿ ಒದಗಿದೆ. ಅವರು ಎರಡು ಪಕ್ಷಗಳ ನಡುವೆ ವಸ್ತುನಿಷ್ಠವಾಗಿ ತೀರ್ಪುಕೊಡಬೇಕಾಗುವ ನ್ಯಾಯಾಧೀಶರಂತೆ ತೀರ್ಮಾನ ಕೈಗೊಳ್ಳಬೇಕಾಗಿದೆ. ಇಲ್ಲಿ ಎರಡು ಪಕ್ಷಗಳಿವೆ. ಇದು ಮುಖ್ಯ ಮಂತ್ರಿಯು ಆಡಳಿತ ಕಾರ್ಯಾಂಗ ಕರ್ತವ್ಯ ಅಥವಾ ನೀತಿ ನಿರೂಪಣೆಗಳಿಗೆ ಸಂಬಂಧಿಸಿದಂತೆ ಚಲಾಯಿಸುವ ಅಧಿಕಾರಗಳನ್ನು ಪ್ರಶ್ನಿಸುತ್ತಿರುವ ಸಂದರ್ಭವಲ್ಲ. ಇದು ಗವರ್ನರ್ ಕೈಗೊಳ್ಳಬೇಕಾದ ಒಂದು ಕ್ರಮ. ಇಲ್ಲಿ ಅವರ ಹಿತವೂ ಹಾಗೂ ಮುಖ್ಯ ಮಂತ್ರಿಯ ಅಸ್ತಿತ್ವವೂ ಪಣವಾಗಿದೆ. ಇಂಥದೊಂದು ಸಂದರ್ಭದಲ್ಲಿ ತೀರ್ಮಾನ ಕೈಗೊಳ್ಳಲು ಖಂಡಿತವಾಗಿಯೂ ಮುಖ್ಯ ಮಂತ್ರಿಯು ಅತ್ಯುತ್ತಮವಾದ ವ್ಯಕ್ತಿ ಅಲ್ಲ. ಇಂತಹ ಸನ್ನಿವೇಶಗಳಲ್ಲಿ ವಸ್ತುನಿಷ್ಠವಾದ ದೃಷ್ಟಿಯಿಂದ ನೋಡಬೇಕಾಗುತ್ತದೆ. ಅವನು ಸಹಜವಾಗಿಯೇ ವ್ಯಕ್ತಿನಿಷ್ಠ ದೃಷ್ಟಿಯಿಂದ ಪರಿಸ್ಥಿತಿಯನ್ನು ನೋಡುತ್ತಾನೆ. ಈ ಬಗೆಯ ಸನ್ನಿವೇಶಗಳನ್ನು ವಸ್ತುನಿಷ್ಠವಾಗಿಯೇ ನೋಡಬೇಕು. ಪ್ರತಿಯೊಬ್ಬ ಮುಖ್ಯ ಮಂತ್ರಿಯೂ ವ್ಯಕ್ತಿ ನಿಷ್ಠವಾದ ನಿರ್ಣಯವನ್ನು ಕೈಗೊಳ್ಳಲು ಬಿಟ್ಟು ಬಿಟ್ಟರೆ ಸಂವಿಧಾನವೇ ಕುಸಿದು ಬೀಳುತ್ತದೆ. ಆದ್ದರಿಂದ ಗವರ್ನರ್‌ನಿಗೆ ಎರಡೂ ಸ್ಥಾನಗಳ ನಡುವೆ ಇಬ್ಬರು ವ್ಯಕ್ತಿಗಳ ನಡುವೆ ಮಧ್ಯಸ್ಥಿಕೆ ನಡೆಸುವ ಅಥವಾ ಅವರ ಮೌಲ್ಯ ಮಾಪನ ಮಾಡುವ ಕಷ್ಟದ ಕೆಲಸ ಇದೆ. ಅದನ್ನು ಅವರು ಮಾಡಲು ಸಾಧ್ಯವಾಗುವುದು ಶಾಸನ ಸಭೆಯ ಅಧಿವೇಶನವನ್ನು ಕರೆಯುವುದರ ಮೂಲಕ ಮಾತ್ರವೇ. ಇಲ್ಲಿ ಅವರು ಸಚಿವ ಸಂಪುಟವನ್ನು ವಜಾ ಮಾಡಲು ಸೂಚಿಸುತ್ತಿಲ್ಲ, ರಾಷ್ಟ್ರಪತಿ ಆಡಳಿತವನ್ನು ಹೇರಲು ಸೂಚಿಸುತ್ತಿಲ್ಲ. ರಾಷ್ಟ್ರಪತಿಯವರಿಗೆ ಆ ಕ್ರಮವನ್ನು ಕೈಗೊಳ್ಳುವಂತೆ ಶಿಫಾರಸ್ಸು ಮಾಡುವ ಅಧಿಕಾರವೇನೋ ಗವರ್ನರ್‌ನಿಗಿದೆ. ಇಲ್ಲಿ ಅವರು ಅದೇನನ್ನೂ ಮಾಡದೆ ವಿಧಾನ ಸಭೆಯನ್ನು ಸಾಧ್ಯವಾದಷ್ಟು ಬೇಗನೆ ಕರೆಯಬೇಕೆಂದು ಮುಖ್ಯ ಮಂತ್ರಿಯನ್ನು ಕೇಳುತ್ತಿದ್ದಾರೆ, ಅಷ್ಟೆ. ಆತ್ಮಗೌರವವಿರುವ ಯಾವ ಮುಖ್ಯ ಮಂತ್ರಿಯೇ ಆಗಲಿ, ತನ್ನ ಅಸ್ತಿತ್ವವನ್ನೇ ಪ್ರಶ್ನಿಸಿರುವಾಗ ತನಗಿರುವ ಬಹುಮತವನ್ನು ಪ್ರಶ್ನಿಸಿರುವಾಗ, ''ಒಂದೋ ಎರಡೋ ತಿಂಗಳೇಕೆ ಕಾಯಬೇಕು? ಈಗಿಂದೀಗಲೆ ಒಂದು ವಾರದಲ್ಲೇ ಅಧಿವೇಶನ ಕರೆಯೋಣ'' ಎಂದು ಹೇಳಬೇಕು.

*(ಲೋಕಸಭೆ ಕಲಾಪ ದಿನಾಂಕ : 20-7-1967)*

## (3) ಜಮ್ಮು - ಕಾಶ್ಮೀರ ಕುರಿತ ಗೊತ್ತುವಳಿ

ಶ್ರೀ ಕೆ. ಹನುಮಂತಯ್ಯ (ಬೆಂಗಳೂರು ) - ಮಾನ್ಯರೆ, ಒಂದು ತೀರ್ಮಾನಕ್ಕೆ ಬರಲು ಮಾಡಿದ ಪ್ರಯತ್ನಗಳನ್ನು ಡಿಎಂಕೆ ಸದಸ್ಯರು ಮೆಚ್ಚಿಕೊಳ್ಳುತ್ತಿರುವುದು ನನಗೆ ತುಂಬಾ ಸಂತೋಷವುಂಟುಮಾಡಿದೆ. ಅದರಲ್ಲೂ ವಿಶೇಷವಾಗಿ ಸರ್ಕಾರವು ಕೈಗೊಂಡಿರುವ ಕ್ರಮಗಳನ್ನು ಅವರು ಒಪ್ಪಿರುವುದು ಹೆಚ್ಚಿನ ಸಂತೋಷವಾಗಿದೆ.

ಮಾನ್ಯರೆ, ನಾವು ಈಗಾಗಲೆ ಬಹುಕಾಲದಿಂದಲೂ ಕಾಶ್ಮೀರದ ವಿಷಯವನ್ನು ಕುರಿತು ತುಂಬಾ ಎಳೆದಾಡಿದ್ದೇವೆ ಎನಿಸುತ್ತದೆ. ಆ ರಾಜ್ಯ ಇರುವ ಸ್ಥಳ ಈ ಬಗೆಯ ಭಿನ್ನಾಭಿಪ್ರಾಯಕ್ಕೆ ಕಾರಣವಾಗಿರಬಹುದು. ಭಾರತದ ನಕ್ಷೆಯಲ್ಲಿ ಕಾಶ್ಮೀರವು ಅತ್ಯಂತ ಉತ್ತರದ ನೆಲೆ, ಅದರ ಎತ್ತರವೂ ಐದರಿಂದ ಆರು ಸಾವಿರ ಅಡಿಗಳಿಗಿಂತ ಹೆಚ್ಚು. ವಿವಾದಕ್ಕೂ ಅದು ಪಡೆದಿರುವ ಪ್ರಾಮುಖ್ಯಕ್ಕೂ ಈ ಎತ್ತರದ ನಲೆಯೂ ಒಂದು ರೀತಿಯಲ್ಲಿ ಕಾರಣವಾಗಿರಬಹುದು. ''ಮಚಾಡೋ ಎಬೌಟ್ ನಥಿಂಗ್'' ಎಂಬ ಹೆಸರಿನ ಒಂದು ನಾಟಕವನ್ನು ಷೇಕ್ಸ್‌ಪಿಯರ್ ಬರೆದಿದ್ದಾನೆ. ಅದನ್ನು ತುಸುವೇ ಬದಲಿಸಿ ಅಲ್ಪಕ್ಕೆ ಅತಿ ಅಬ್ಬರ ಮಾಡುವ ನಿದರ್ಶನ ಇದು ಎಂದು ಹೇಳಬಯಸುತ್ತೇನೆ. ಕಾಶ್ಮೀರದ ಇಡೀ ಜನಸಂಖ್ಯೆ ಒಟ್ಟು ಸೇರಿದರೂ ನಮ್ಮಲ್ಲಿ ಕೆಲವರ ಮತ ಕ್ಷೇತ್ರಗಳಿಗೆ ಸಮನಾಗುವಷ್ಟು ಇಲ್ಲ. ಬೆಂಗಳೂರಿನ ಜನ ಸಂಖ್ಯೆಯಷ್ಟೂ ಅಲ್ಲ. ಆದರೆ ಅದರ ಪ್ರಾಮುಖ್ಯವನ್ನು ನಿರ್ಧರಿಸುವುದು ಈ ಅಂಶವಲ್ಲ. ಅದನ್ನು ನಿರ್ಧರಿಸಿರುವುದು ವಿವಾದವೇ ಹೊರತು ದೇಶದ ಪ್ರಗತಿಗೆ ಅದು ನೀಡಿರುವ ಕೊಡುಗೆಯಿಂದ ಅಲ್ಲ. ಏಕತೆ ಅಖಂಡತೆಗಳ ವಿಷಯುದಲ್ಲಿ ಅಲ್ಲಿನ ಕೆಲವು ನಾಯಕರು ಹಾಕಿದ ಮಾದರಿಯಿಂದಲೂ ಅಲ್ಲ.

ಎರಡನೆಯ ಮಹಾಯುದ್ಧವಾದ ಮೇಲೆ ''ಸೇನಾ ನೆರವು'' ಎನ್ನುವುದೊಂದು ಚಾಲ್ತಿಯಲ್ಲಿತ್ತು. ಯುರೋಪಿಯನ್ ದೇಶಗಳು ಆರ್ಥಿಕವಾಗಿ ಪುನಚ್ಚೇತನ ಪಡೆಯುವುದಕ್ಕೆ ಅದು ಸಹಾಯಕವಾಗಿತ್ತು. ಕೊನೆಗೆ ಅದು ತಮಷೆಯ ಮಾತಿನಲ್ಲಿ ಪರ್ಯವಸಾನವಾಯಿತು. ಅಮೇರಿಕದಿಂದ ಹೊಸದಾಗಿ ಹಣ ಬೇಕಾಗಿರುವ ಯಾವುದೇ ಒಂದು ದೇಶವು ಅಲ್ಲಿ ತುಂಬಾ ಜನ ಕಮ್ಯೂನಿಸ್ಟರಿದ್ದಾರೆ ಎಂದು ಹೇಳಿದರೆ ಸಾಕಾಗಿತ್ತು. ಹೆಚ್ಚು ಹೆಚ್ಚು ನೆರವು ಪಡೆಯಲು, ಹೀಗೆ ಕಮ್ಯೂನಿಸ್ಟ್ ಬೇತಾಳವನ್ನು ಉಪಯೋಗಿಸುತ್ತಿದ್ದರು. ಹಾಗೆಯೇ ಇಲ್ಲಿ, ಪ್ಲೆಬಿಸೈಟ್, ಜನ

ಮತಗಣನೆ ಅಥವಾ ಪ್ರತ್ಯೇಕತೆಗಳಿಗೆ ಬೇಕಾದವರನ್ನು ಉಪಯೋಗಿಸಲಾಗಿದೆ. ಹೆಚ್ಚು ಹೆಚ್ಚಾಗಿ ನೆರವು ಪಡೆಯುವ ಸಲುವಾಗಿ ಮತ್ತು ಹೆಚ್ಚಿನ ಪ್ರಾಮುಖ್ಯವನ್ನು ಪಡೆಯುವುದಕ್ಕಾಗಿ ಹೀಗೆ ಮಾಡಲಾಗಿದೆ ಎಂದು ನನಗೆ ತೋರುತ್ತದೆ. ಭಾರತ ಸರ್ಕಾರದ ರಚನೆಯನ್ನು ನೀವು ಪರೀಕ್ಷಿಸಿ ನೋಡಿದರೆ ಕಾಶ್ಮೀರದಿಂದ ಬಂದಿರುವ ವ್ಯಕ್ತಿಗಳಿಗೆ ಸಚಿವ ಸಂಪುಟದಿಂದ ಕೆಳಗಿನ ಹಂತಗಳ ಆಡಳಿತೀಯ ವ್ಯವಸ್ಥೆಯಲ್ಲಿ ಪರಿಮಾಣಾನುಸಾರಿಯಲ್ಲದಷ್ಟು ಪ್ರಾಮುಖ್ಯ ಕೊಟ್ಟಿರುವುದು ಕಂಡುಬರುತ್ತದೆ. ಉದ್ದಕ್ಕೂ ಯೋಜನೆಗಳನ್ನು ರೂಪಿಸುವವರು, ನಿರ್ವಹಿಸುವವರು ಅವರೇ ಆಗಿದ್ದಾರೆ. ಅವರೇ ಪ್ರಧಾನ ಮಂತ್ರಿಯವರಿಗೂ ನೆರವಾಗುತ್ತಿದ್ದಾರೆ. ಉದ್ದೇಶವಿಲ್ಲದೆಯೇ ವಿರೋಧ ಪಕ್ಷಗಳ ಜನರೂ ಕಾಶ್ಮೀರದ ಈ ಮೇಲು ಸ್ಥಿತಿಗೆ ಇಂಬುಗೊಡುತ್ತಿದ್ದಾರೆ. ಪರಿಮಾಣಾನುಸಾರಿಯಲ್ಲದ ಈ ಪ್ರಾಮುಖ್ಯವನ್ನಾಗಲಿ, ಶಕ್ತಿಯನ್ನಾಗಲಿ ನಾನು ಮತ್ಸರಿಸುತ್ತಿಲ್ಲ. ಏಕೆಂದರೆ, ನಾವೆಲ್ಲರೂ ಭಾರತೀಯರು, ಯಾರಿಗೆ ಆಗಲಿ ಕಾಶ್ಮೀರ, ಕರ್ನಾಟಕ, ತಮಿಳುನಾಡು ಅಥವಾ ಉತ್ತರ ಪ್ರದೇಶ ಎಲ್ಲಿಂದಲೇ ಬಂದವರಿಗೆ ಆಗಲಿ ಸ್ಥಾನಗಳು ದೊರೆತರೆ ಅದರಲ್ಲಿ ಅಸಮಾಧಾನಗಳ ಕಾರಣವೇ ಇಲ್ಲ. ಒಬ್ಬ ಭಾರತೀಯನಿಗೂ ಮತ್ತೊಬ್ಬ ಭಾರತೀಯನಿಗೂ ನಾವು ವ್ಯತ್ಯಾಸ ಕಲ್ಪಿಸುವುದಿಲ್ಲ. ಈ ಅನಗತ್ಯ ಪ್ರಾಮುಖ್ಯವನ್ನು ಕುರಿತು ನಾವು ಸಹಿಷ್ಣುತೆಯ ಭಾವನೆಯನ್ನು ಬೆಳೆಸಿಕೊಂಡಿದ್ದೇವೆ. ಆರೋಪಿಸಲಾಗುತ್ತಿರುವ ಅಸಮತೋಲನವು ಇನ್ನು ಬೆಳೆಯದಂತೆ ನೋಡಿಕೊಳ್ಳಬೇಕು. ಉದ್ದೇಶವಿಲ್ಲದೆಯೂ ಪ್ರಜ್ಞಾಪೂರ್ವಕವಲ್ಲದೆಯೂ ಈ ಪ್ರಶ್ನೆಯನ್ನು ಬೆಳಸಬಾರದೆಂದು ವಿರೋಧ ಪಕ್ಷದ ಸದಸ್ಯರನ್ನು ಪ್ರಾರ್ಥಿಸುತ್ತಲೇ ಬಂದಿದ್ದೇವೆ. ಕಾಶ್ಮೀರವು ಸಮಸ್ಯೆಯಾಗಿರುವುದಕ್ಕೆ ಕಾರಣ ಭಾರತಕ್ಕೆ ಸ್ವಾತಂತ್ರ್ಯವನ್ನು ನೀಡಿದಾಗ ಅಥವಾ ಅದರ ಜೊತೆ ಜೊತೆಗೆ ಸಂಬಂಧಿಸಿದ ದುರದೃಷ್ಟಕರ ಬೆಳವಣಿಗೆ.

ಆಗ ದ್ವಿರಾಷ್ಟ್ರತತ್ವವು ವಿವಾದಕ್ಕೆ ಒಳಗಾಯಿತು. ಸ್ವಲ್ಪ ಕಾಲ ಶೇಖ್ ಅಬ್ದುಲ್ಲಾ ಅವರು ಅಮೋಘವಾಗಿ ಎಂದು ನಾನು ಹೇಳದಿದ್ದರೂ ಬಹಳ ಉಚಿತವಾದ ರೀತಿಯಲ್ಲಿ ನಡೆದುಕೊಂಡರು. ಏಕೆಂದರೆ ನಮ್ಮಲ್ಲಿ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಅನೇಕರು ಅಖಂಡತೆ, ಏಕತೆ, ಸಂವಿಧಾನ ರಚನೆ ಮೊದಲಾದವುಗಳಿಗಾಗಿ ಸಮಾನವಾದ ಪಾತ್ರವನ್ನು ನಿರ್ವಹಿಸಿದ್ದೇವೆ. ಆದರೆ ಆ ಪ್ರದೇಶದ ಕೆಲವು ನಾಯಕರು ರಾಷ್ಟ್ರೀಯ ಅಂತರರಾಷ್ಟ್ರೀಯ ವರ್ತಮಾನ

ಪತ್ರಿಕೆಗಳ ಮುಖ ಪುಟದಲ್ಲಿ ಪ್ರಮುಖವಾದ ಸ್ಥಳದಲ್ಲಿ ಸುದ್ದಿಯಲ್ಲಿರಬೇಕೆಂಬುದಕ್ಕಾಗಿ ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಂಡರು. ಆದ್ದರಿಂದ ವಿರೋಧ ಪಕ್ಷದ ನಾಯಕರನ್ನು ಎಚ್ಚರಿಸಬಯಸುತ್ತೇನೆ. ಅಲ್ಲ ಪ್ರಾರ್ಥಿಸಬಯಸುತ್ತೇನೆ. ಈ ಅನಗತ್ಯ ಪ್ರಾಮುಖ್ಯವನ್ನು ಇನ್ನು ದಯವಿಟ್ಟು ಪ್ರೋತ್ಸಾಹಿಸಬಾರದು, ಬೆಳೆಸಬಾರದು, ನಮ್ಮೆಲ್ಲರನ್ನು ಅಂದರೆ ರಾಜ್ಯಗಳನ್ನು ಅವುಗಳ ಸೂಕ್ತ ಸ್ಥಾನದಲ್ಲಿ ಇರಿಸಿದ್ದರೆ ಈ ಬಗೆಯ ವಿವಾದವು ಇರಲಿಲ್ಲ.

ಶೇಖ್ ಅಬ್ದುಲ್ಲಾ ಅವರು, ಆಗ ಕರೆಯುತ್ತಿದ್ದಂತೆ ಕಾಶ್ಮೀರದ ಪ್ರಧಾನ ಮಂತ್ರಿಯಾಗಿದ್ದಾಗ ನಾನು ಕರ್ನಾಟಕದಲ್ಲಿ ಒಬ್ಬ ಬಡಪಾಯಿ ಮುಖ್ಯ ಮಂತ್ರಿಯಾಗಿದ್ದೆ. ನಿಮ್ಮಲ್ಲಿ ಅನೇಕರಿಗೆ ತಿಳಿದಿರಲಾರದು. ಆ ರಾಜ್ಯದಲ್ಲಿ ಎರಡು ಧ್ವಜಗಳಿರಬೇಕೆಂಬ ವಿವಾದವೆದ್ದಿತ್ತು. ಈ ಜನರಿಗೂ ಎರಡು ಧ್ವಜಗಳಿರಬೇಕೆಂದು ವಾದಿಸುತ್ತಿದ್ದ ಕಾಶ್ಮೀರ ಸರ್ಕಾರಕ್ಕೂ ಮಾದರಿಯಾಗುವಂತೆ ನಾನು ರಾಜ್ಯದ ಬಾವುಟವನ್ನು ತೆಗೆದು ಹಾಕಿ ನಮ್ಮ ರಾಷ್ಟ್ರ ಧ್ವಜವೊಂದೇ ಎತ್ತರದಲ್ಲಿ ಗಂಭೀರವಾಗಿ ಹಾರುವಂತೆ ಮಾಡಿದೆ. ಆ ದಿನಗಳಲ್ಲಿ ಪ್ರಧಾನ ಮಂತ್ರಿಯಾಗಿದ್ದ ಜವಾಹರಲಾಲ್ ನೆಹರೂ ಅವರು ಈ ಕ್ರಮವನ್ನು ಬಹಳ ಪ್ರಶಂಸಿಸಿದರು, ಶೇಖ್ ಅಬ್ದುಲ್ಲಾ ಅವರಿಗೂ ಈ ಮೂಲಕ ಒಂದು ಸೂಚನೆ ಕೊಟ್ಟಿದಕ್ಕಾಗಿ ನನ್ನನ್ನು ಅಭಿನಂದಿಸಿದರು. ಆದರೆ ಶೇಖ್ ಅಬ್ದುಲ್ಲಾ ಆ ಸೂಚನೆಯನ್ನು ಸ್ವೀಕರಿಸಲಿಲ್ಲ. ನಿಮಗೆಲ್ಲ ತಿಳಿದಿರುವಂತೆ ಕಾಶ್ಮೀರಕ್ಕೆ ಪ್ರತ್ಯೇಕ ಸ್ಥಾನ ಮಾನವಿರಬೇಕೆಂದು ಕೇಳುವವರೇ ಹೋದರು. ಬೆಂಕಿ ಉರಿಯುತ್ತಲೆ ಇರುವಂತೆ ನೋಡಿಕೊಳ್ಳುವುದರಲ್ಲಿ ಆಸಕ್ತರಾದ ಕೆಲವು ಹೊರದೇಶಗಳೂ ಅವರಿಗೆ ಸಹಾಯ ಮಾಡಿದುವು ಎಂದು ಕೂಡ ಕೇಳಿದೆ.

**ಶ್ರೀ ಎಸ್. ಎ. ಶಮೀಮ್** : ಶೇಖ ಅಬ್ದುಲ್ಲಾ ಅವರು ವಿದೇಶಗಳಿಂದ ನೆರವು ಪಡೆಯಲು ಅವಕಾಶವನ್ನು ಪಡೆದುಕೊಂಡರು ಎಂದು ಇವರು ಹೇಳುತ್ತಿದ್ದಾರೆ. ನಿಮಗೆ ನಾಚಿಕೆಯಾಗಬೇಕು.

**ಶ್ರೀ ಕೆ. ಹನುಮಂತಯ್ಯ** : ಶ್ರೀ ಶಮೀಮ್ ಅವರನ್ನು ನಾನು ಗಂಭೀರವಾಗಿ ತೆಗೆದು ಕೊಳ್ಳುವುದಿಲ್ಲ.

**ಶ್ರೀ ಎಸ್. ಎ. ಶಮೀಮ್** : ನಿಮ್ಮ ಪಕ್ಷವೇ ನಿಮ್ಮನ್ನು ಗಂಭೀರವಾಗಿ ತೆಗೆದುಕೊಂಡಿಲ್ಲ. ಅವರೇ ಗೇಲಿಮಾಡುತ್ತಿದ್ದಾರೆ.

**ಶ್ರೀ ಕೆ. ಹನುಮಂತಯ್ಯ** : ಏಕೆಂದರೆ ಅವರ ಹೆಸರೇ ಷೇಮ್ ಎಂಬುದಕ್ಕೆ ಪ್ರಾಸವಾಗುತ್ತದೆ.

**ಶ್ರೀ ಎಸ್ ಎ. ಶಮೀಮ್** : ನಿಮಗೂ ಅದೇ ಅನ್ವಯವಾಗುತ್ತದೆ.

**ಶ್ರೀ ಕೆ. ಹನುಮಂತಯ್ಯ** : ಈ ಶೇಖ್ ಅಬ್ದುಲ್ಲಾ ಪ್ರಶ್ನೆಯನ್ನು ನಾವು ಅನೇಕ ಸಾರಿ ವೀಕ್ಷಿಸಿ ಸಭೆಗಳಲ್ಲಿ ಚರ್ಚಿಸಿದ್ದೇವೆ. ಈ ವಿಷಯವಾಗಿ ನಾನು ಕೊನೆಯ ಸಾರಿ ಮಾತನಾಡಿದಾಗ ನನ್ನ ಮಿತ್ರರಾದ ಶೇಖ್ ಅಬ್ದುಲ್ಲಾ ಅವರ ಮನೋಧರ್ಮವನ್ನು ಒಪ್ಪಲಿಲ್ಲ ಎಂಬುದನ್ನು ನನ್ನ ಕೆಲವು ಮಿತ್ರರು ನೆನೆಯಬಹುದು. ಇಲ್ಲಿ ನಿಮಗೆ ಇನ್ನೊಂದು ವಿಷಯವನ್ನು ಹೇಳಬಹುದು ಇಷ್ಟೆಲ್ಲಾ ಅಭಿಪ್ರಾಯಭೇದಗಳಿದ್ದರೂ ನನಗೂ ಅವರಿಗೂ ನಡುವೆ ಉತ್ತಮವಾದ ಸ್ನೇಹವಿದೆ. ನಮ್ಮ ಸರ್ಕಾರದ ನಾಯಕರುಗಳು ಅವರನ್ನು ವಿರೋಧಿಯೆಂದು ಪರಿಗಣಿಸಿದ ದಿನಗಳಲ್ಲಿ ಒಮ್ಮೆ ಅವರು ನನ್ನ ಮನೆಗೆ ಬಂದು ಈ ಸಮಸ್ಯೆಯನ್ನು ನನ್ನೊಂದಿಗೆ ಚರ್ಚಿಸಿದರು. ನಾನು ಅವರಿಗೆ ಸರಿಯಾದ ಸಲಹೆ ನೀಡಿದ್ದೆ.

**ಶ್ರೀ ಎಸ್. ಎ. ಶಮೀಮ್** : ಎಲ್ಲರನ್ನು ಬಿಟ್ಟು ನಿಮ್ ಬಳಿಗೆ ಬಂದರೆ ? ಎಂಥ ದಡ್ಡರಿರಬೇಕು.

**ಶ್ರೀ ಕೆ. ಹನುಮಂತಯ್ಯ** : ಅವರ ಸುತ್ತ ಮೂರ್ಖರ ತಂಡವಿದ್ದಿತು, ಅವರು ತಪ್ಪುದಾರಿಗೆಳೆದರು.

ಸೂಕ್ತ ರೀತಿಯ ಶಿಕ್ಷಣ ಪಡೆಯಲು ಅವರಿಗೆ 20 ವರ್ಷಗಳು ಹಿಡಿದುವು. ವೈಯಕ್ತಿಕವಾದ ಯಾವುದೇ ನಿರೀಕ್ಷೆಯಲ್ಲದೆ ಅಲಿಪ್ತವಾಗಿ ಹೇಳುತ್ತೇನೆ. ನಮ್ಮ ನಾಯಕಿ ಶ್ರೀಮತಿ ಇಂದಿರಾ ಗಾಂಧಿಯವರಲ್ಲಿ ಸೂಕ್ತ ಸಮಯಕ್ಕೆ ಸೂಕ್ತ ರಾಜಕೀಯ ಉಪಕ್ರಮಗಳನ್ನು ಕೈಗೊಳ್ಳುವ ಸಾಮರ್ಥ್ಯವುಳ್ಳ ವ್ಯಕ್ತಿಯನ್ನು ಕಂಡೆ. ಆಕೆ ಸರಿಯಾಗಿ ತೂಗಿ ನೋಡಬಲ್ಲರು, ಸರಿಯಾದ ನಿರ್ಣಯವನ್ನು ತೆಗೆದುಕೊಳ್ಳಬಲ್ಲರು. ಈ ಸಂದರ್ಭದಲ್ಲಿ ಆದದ್ದೂ ಹಾಗೆಯೇ. ಒಪ್ಪಂದದಲ್ಲಿ ಅವರು ಏನೇನನ್ನು ಒಪ್ಪಿಕೊಂಡಿದ್ದಾರೋ ಅದನ್ನು ಆಗಲೇ ಮಾಡಿದ್ದರೆ ಬಂಧಿತರಾಗಬೇಕಾಗಿರಲಿಲ್ಲ. ಇಷ್ಟೆಲ್ಲಾ ವಿವಾದಗಳಿಗೆ ಅವಕಾಶವೇ ಇರುತ್ತಿರಲಿಲ್ಲ. ವಾಸ್ತವಾಗಿ ಕೇಂದ್ರ ಸಚಿವ ಸಂಪುಟದಲ್ಲೋ ಅಥವಾ ಇಷ್ಟಪಡುವ ಬೇರೆ ಯಾವುದೇ ಉತ್ತಮ ಸ್ಥಾನದಲ್ಲೋ ಇರಬಹುದು ಎಂದು ಕೂಡ ಖಾಸಗಿಯಾಗಿ ನಾನು ಅವರಿಗೆ ಹೇಳಿದ್ದೆ.

ಮಾನ್ಯರೇ ಕೇಂದ್ರ ಸರ್ಕಾರವು, ಎಲ್ಲರೂ ಅರ್ಥ ಮಾಡಿಕೊಳ್ಳಬೇಕು, ಕೇಂದ್ರ ಸರ್ಕಾರವೇ ಮಿಕ್ಕ ಯಾವುದೇ ರಾಜ್ಯ ಸರ್ಕಾರವು ರಾಜ್ಯ ಸರ್ಕಾರವೇ. ಆದ್ದರಿಂದ ಮುಖ್ಯ ಮಂತ್ರಿ ಯಾರೇ ಆಗಿರಲಿ ರಾಜ್ಯ ಸರ್ಕಾರವನ್ನು ಕೇಂದ್ರ್ರದೊಂದಿಗೆ ಸಮನೆಂಬ ಧೋರಣೆಯಿಂದ ಮಾತನಾಡುವುದು ಒಂದು ಇರುವೆಯು ಒಂದು ಆನೆಯೊಂದಿಗೆ ವಾದಮಾಡಿದ ಹಾಗೆ ಎಂದು ಅವರಿಗೆ ನಾನು ಹೇಳಿದ್ದೆ.

ಸ್ವಾತಂತ್ರ್ಯ ಹೋರಾಟದ ಅನುಭವ ಪಡೆದು ಏಕತಾ ಸಾಧನೆಯನ್ನು ನನ್ನದೇ ಸಣ್ಣ ರೀತಿಯಲ್ಲಿ ಮಾಡಿದ ಅನುಭವದಿಂದ ನಾನು ಮಾತನಾಡುತ್ತಿದ್ದೆ. ಭಾರತದಂತಹ ದೇಶದಲ್ಲಿ ಎಲ್ಲಾ ರಾಜ್ಯಗಳು ಮತ್ತು ಸರ್ಕಾರಗಳನ್ನು ಸಮನಾಗಿ ಪರಿಗಣಿಸುವುದು ಸಾಧ್ಯವಿಲ್ಲ. ನ್ಯಾಯಿಕ ಅರ್ಥದಲ್ಲಲ್ಲ ರಾಜಕೀಯ ಅರ್ಥದಲ್ಲಿ. ಡಿಎಂಕೆ ಯಲ್ಲೇ ಆಗಲಿ ಪ್ರತಿಯೊಬ್ಬರೂ ಕರುಣಾನಿಧಿಯವರೊಂದಿಗೆ ಸಮಾನತೆಯನ್ನು ಕೇಳಿದರೆ ಕರುಣಾನಿಧಿಯೇ ಇರುವುದಿಲ್ಲ.

ಆದ್ದರಿಂದ ಭಾರತದ ಏಕತೆಯೇ ಎಲ್ಲಾ ಆಡಳಿತೀಯ ವ್ಯವಸ್ಥೆಗಳಲ್ಲಿ ರಾಜಕೀಯ ಅಥವಾ ಸಾಂವಿಧಾನಿಕ ವ್ಯವಸ್ಥೆಗಳಲ್ಲಿ ಬಲವಾದ ತಳಹದಿ ಮತ್ತು ಅತ್ಯಂತ ಮಹತ್ವ ಪೂರ್ಣವಾದ ಅಂಶ. ರಾಜ್ಯದ ಸ್ವಾಯತ್ತತೆಯನ್ನು ವಾದಿಸುತ್ತಿರುವ ಇದೇ ಜನರೇ ಕೇಂದ್ರಕ್ಕೆ ಬಂದರೆ, ಅದಕ್ಕೆ ವಿರುದ್ಧವಾಗಿ ವಾದ ಮಾಡಲು ತೊಡಗುತ್ತಾರೆ ಎಂದು ನಾನು ಬಲ್ಲೆ. ಏಕೆಂದರೆ ವ್ಯಕ್ತಿನಿಷ್ಠತೆ ಮಾನವನ ಸ್ವಭಾವ. ಎಲ್ಲಾ ಬಗೆಯ ರಾಜಕೀಯ ಮತ್ತು ವ್ಯಕ್ತಿಗತ ಆಮಿಷಗಳಿಂದ ಮೇಲೆ ಏರಿರುವ ಮಹಾತ್ಮಗಾಂಧಿ ಮೊದಲಾದ ವ್ಯಕ್ತಿಗಳು ಮಾತ್ರ ನಿಷ್ಪಕ್ಷಪಾತಿಗಳಾಗಿಯೂ ವಸ್ತು ನಿಷ್ಠರಾಗಿರುವವರು. ಆದ್ದರಿಂದ ನಾವು ಎಲ್ಲೇ ಇರಲಿ, ನಮ್ಮ ದೃಷ್ಟಿಯಲ್ಲಿ ಅದು ಅತ್ಯಂತ ಶ್ರೇಷ್ಠವಾದ ಸ್ಥಳವಾಗುತ್ತದೆ. ಡಿಎಂಕೆ. ಯ ರಾಜಕೀಯ ವಿಚಾರಗಳ ವಿಕಾಸದಲ್ಲೂ ನಾನು ಇದೇ ಬೆಳವಣಿಗೆಯನ್ನು ನೋಡುತ್ತೇನೆ. ಹಿಂದಿನ ಮುಖ್ಯ ಮಂತ್ರಿ ಶ್ರೀ ಅಣ್ಣಾದೊರೈ ನನ್ನ ಸನ್ಮಿತ್ರರಾಗಿದ್ದರು. ನಾನು ಅಧಿಕಾರದಲ್ಲಿ ಇರದಾಗಲೂ ಅವರು ನನ್ನ ಬಗ್ಗೆ ಬಹಳ ಒಳ್ಳೆಯ ಮಾತುಗಳನ್ನಾಡುತ್ತಿದ್ದರು.

**ಶ್ರೀ ಚೆಳಿಯನ್** : ಅದು ದೊಡ್ಡತನ.

**ಕೆ. ಹನುಮಂತಯ್ಯ** : ಮಾನ್ಯರೆ, ಅವರ ಡಿಎಂಕೆಯು ಭಾರತ ಸ್ವಾತಂತ್ರ್ಯ ನಂತರ ಪ್ರತ್ಯೇಕ 'ಸ್ಥಾನಮಾನದ ಪರವಾಗಿತ್ತು. ಆದರೆ ಅವರ ಪ್ರತಿನಿಧಿಗಳು ಸಂಸತ್ತಿಗೆ ಬಂದಾಗ ರಾಷ್ಟ್ರ ರಾಜಕಾರಣದ ಮುಖ್ಯವಾಹಿನಿಯಲ್ಲಿ ಬೆರೆತುಕೊಂಡರು. ಸಂಸತ್ ಸದಸ್ಯರೊಂದಿಗೆ ವೈಯಕ್ತಿಕವಾಗಿ ಸ್ನೇಹವಿದ್ದುದರಿಂದ ಇದು ನನಗೆ ಗೊತ್ತು. ಅವರು ನಮ್ಮ ನಿಲುವನ್ನು ಬದಲಾಯಿಸಿದರು. ಅವರನ್ನು ಅವರ ರಾಷ್ಟ್ರಭಕ್ತಿಯನ್ನು ನಾನು ವಂದಿಸುತ್ತೇನೆ. ಯಾವುದೇ ಔಪಚಾರಿಕತೆಗೆ ಅಂಟಿಕೊಳ್ಳದೆ ತಮ್ಮ ರಾಜಕೀಯ ನಿಲುವನ್ನು ಬದಲಾಯಿಸಿಕೊಳ್ಳಲು ಅವರು ಪ್ರತಿಷ್ಠೆಯ ಮೇಲೆ ನಿಲ್ಲಲಿಲ್ಲ. ಇಚ್ಛಾಪೂರ್ವಕವಾಗಿ ಭಾರತದ ರಾಜ್ಯಗಳಲ್ಲಿ ಒಂದಾದರು. ಈಗ ಅವರು ರಾಜ್ಯದ ಸ್ವಾಯತ್ತತೆಯನ್ನು ಬಯಸುತ್ತಿದ್ದಾರೆ. ನಿಮಗೆ ತಿಳಿದಿರುವಂತೆ ನಾನು ಆಡಳಿತ ಸುಧಾರಣಾ ಆಯೋಗದ ಅಧ್ಯಕ್ಷನಾಗಿದ್ದೆ. ಕೇಂದ್ರ - ರಾಜ್ಯಗಳ ಸಂಬಂಧಗಳನ್ನು ಕುರಿತ ತನ್ನ ವರದಿಯನ್ನು ಆಯೋಗವು ಸಲ್ಲಿಸಿದೆ ದಿವಂಗತ ಜನರಲ್ ಸೆಟಲ್‌ವಾಡ್, ಸಿ.ಡಿ. ದೇಶಮುಖ್ ಮೊದಲಾದ ಭಾರತದ ಎಲ್ಲೆಡೆಯ ಸಮರ್ಥ ನ್ಯಾಯವಾದಿಗಳು ಆಯೋಗಕ್ಕೆ ನೆರವಾದರು.

ಆ ಸಮಯದಲ್ಲಿ ಈ ವಿಷಯವಾಗಿ ಒಡನೆಯೇ ವರದಿಯನ್ನು ಸಲ್ಲಿಸಬೇಕೆಂದೂ ಸಮಸ್ಯೆಯನ್ನು ತುರ್ತಾಗಿ ಪರಿಶೀಲಿಸಬೇಕಾಗಿದೆಯೆಂದು ಭಾರತ ಸರ್ಕಾರದಿಂದ ನನಗೆ ತುರ್ತು ಪತ್ರವು ಬಂದಿತು. ಅದು ಆಗ ಇದ್ದ ಸಂದರ್ಭ. ಎಲ್ಲಾ ಸೂಚನೆಗಳನ್ನು ಸಲಹೆಗಳನ್ನೂ ಸ್ವಾಯತ್ತತೆಗಾಗಿ ಬೇಡಿಕೆಯನ್ನು ಪರಿಶೀಲಿಸಿದ ಮೇಲೆ ನಾವು ಈ ನಿರ್ಣಯಕ್ಕೆ ಬಂದೆವು :

''ಆದ್ದರಿಂದ ಸಂವಿಧಾನಕ್ಕೆ ಯಾವುದೇ ತಿದ್ದುಪಡಿ ಸೂಚಿಸಬೇಕಾದ ಅಗತ್ಯವಿದೆ ಎಂದು ನಾವು ಭಾವಿಸುವುದಿಲ್ಲ. ಆದರೆ ರಾಜ್ಯಗಳಿಗೆ ಇನ್ನು ಹೆಚ್ಚಿನ ಆರ್ಥಿಕ ಮತ್ತು ಆಡಳಿತೀಯ ಕರ್ತವ್ಯಗಳನ್ನು ಅಧಿಕಾರಗಳನ್ನು ವಹಿಸಬಹುದು ಎಂದು ನಾವು ಶಿಫಾರಸ್ಸು ಮಾಡುತ್ತೇವೆ. ಆದ್ದರಿಂದ, ಕೇಂದ್ರ ಮತ್ತು ರಾಜ್ಯಗಳ ನಡುವೆ ಸಂಬಂಧವು ಹೆಚ್ಚು ಹಿತವಾಗುವುದು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಆಡಳಿತದಲ್ಲಿ ದಕ್ಷತೆಯನ್ನು ಉಳಿತಾಯವನ್ನು ಸಾಧಿಸುವುದು ಈ ಎರಡೂ ಉದ್ದೇಶಗಳ ಸಾಧನೆಯಾಗುತ್ತದೆ. ಕೇಂದ್ರ ರಾಜ್ಯ ಸಂಬಂಧದ ಸಮಸ್ಯೆಯ ಪರಿಹಾರ ಸಂವಿಧಾನ ತಿದ್ದುಪಡಿಯಲಿಲ್ಲ. ಸಂವಿಧಾನ ನಿರ್ಮಾಪಕರು ಯಾವ ರೀತಿಯಲ್ಲಿ ಅದು ಕಾರ್ಯಗತಗೊಳ್ಳಬೇಕೆಂದು ಬಯಸಿದ್ದರೋ ಆ ದೃಷ್ಟಿಯಿಂದ ಸಂವಿಧಾನದ ಅವಕಾಶಗಳನ್ನು ಸಂಬಂಧಿಸಿದ ಎಲ್ಲರೂ ಕಾರ್ಯಗತಗೊಳಿಸುವುದರಲ್ಲಿದೆ''. ಕಾಂಗ್ರೆಸ್ ಮುಖ್ಯ ಮಂತ್ರಿಗಳು ಕೂಡ ಕೆಲವೊಂದು

ಆರ್ಥಿಕ ಅಧಿಕಾರಗಳನ್ನು ಹೊಣೆಗಾರಿಕೆಗಳನ್ನು ವಹಿಸಿಕೊಡಬೇಕೆಂದು ಪ್ರತಿಪಾದಿಸುತ್ತಲೇ ಇದ್ದಾರೆ. ಮಹಾತ್ಮ ಗಾಂಧಿಯವರು ಒಮ್ಮೆ ಭಾರತಕ್ಕೆ ಸರಿಹೊಂದುವಂತಹ ಬಗೆಯ ಆಡಳಿತ ವ್ಯವಸ್ಥೆಯನ್ನು ಚಿತ್ರಿಸಿ ಒಂದು ಹೇಳಿಕೆ ನೀಡಿದರು. ಅದೊಂದು ಪಿರಮಿಡ್ ಆಕಾರದ ರಚನೆಯಾಗಬೇಕು. ಬುಡವು ನೆಲದ ಮೇಲೆ ಭದ್ರವಾಗಿ ನಿಂತಿರಬೇಕು. ನೆತ್ತಿಯು ನೆಲದ ಮೇಲೂ ತಳ ಮೇಲುಗಡೆಯು ಇರುವ ತಲೆಕೆಳಗು ಸ್ಥಿತಿಯಲ್ಲಲ್ಲ. ಹಾಗಾದರೆ ಅದು ಹಾಸ್ಯಾಸ್ಪದವಾಗಿ ಕಾಣಿಸುತ್ತದೆ. ಭಾರತದಂತಹ ದೊಡ್ಡ ದೇಶದಲ್ಲಿ 60 ಕೋಟಿ ಜನರಿರುವ ಇಡೀ ದೇಶದ ವ್ಯವಹಾರಗಳನ್ನು 20 ಜನ ಬುದ್ಧಿವಂತರು ನಿರ್ವಹಿಸಬೇಕಾಗಿದೆ. ವ್ಯಕ್ತಿಗಳ ಮತ್ತು ದೇಶದ ಬಗೆಗೆ ವ್ಯಕ್ತಿಗತ ಪರಿಜ್ಞಾನ ಅವರಿಗಿರಬೇಕಾಗಿದೆ. ತಾನು ನಿರ್ವಹಿಸಬೇಕಾಗಿರುವ ಸಮಸ್ಯೆಗಳನ್ನು ಚೆನ್ನಾಗಿ ತಿಳಿದುಕೊಂಡಿರದೆ ಹೋದರೆ ಸರ್ಕಾರದಲ್ಲಿ ಯಾರೂ ದಕ್ಷತೆಯಿಂದ ಕೆಲಸ ಮಾಡಲು ಸಾಧ್ಯವಿಲ್ಲ ಎನ್ನುವುದು ನನ್ನ ಒಂದು ಸಿದ್ಧಾಂತ. ಬರುಬರುತ್ತಾ ಭಾರತದಲ್ಲಿ ಆಡಳಿತ ವ್ಯವಸ್ಥೆಯು ವ್ಯಕ್ತಿ ಸಂಬಂಧವನ್ನು ಕಳೆದುಕೊಂಡಿದೆ. ಆದ್ದರಿಂದ ಎಲ್ಲೆಲ್ಲಿ ದಕ್ಷತೆ ಮಿತವ್ಯಯಗಳು ಅಗತ್ಯವಾಗಿವೆಯೋ ಅಲ್ಲೆಲ್ಲ ಆರ್ಥಿಕ ಮತ್ತು ಆಡಳಿತ ಅಧಿಕಾರವಹಿಸಿ ಕೊಡುವಂಥ ರೀತಿಯ ಕೆಲವು ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಇದನ್ನು ವ್ಯಕ್ತಿ ಸಂಬಂಧವಿಲ್ಲದಂತೆ ಅಖಿಲ ಭಾರತ ಮಟ್ಟದಲ್ಲಿ ಯಾವುದೇ ನಿರ್ದಿಷ್ಟ ರಾಜ್ಯವು ನಿರ್ದಿಷ್ಟ ಸೌಲಭ್ಯವನ್ನು ಕೋರದೆ ಈ ಸಮಸ್ಯೆಯನ್ನು ಒಂದೇ ರೀತಿಯಲ್ಲಿ ನೋಡದೆ ಪರೀಕ್ಷಿಸಬೇಕಾಗಿದೆ.

ಡಿಎಂಕೆ ಮಾತ್ರವಲ್ಲ. ಪತ್ರವ್ಯವಹಾರಗಳನ್ನು ಗಮನಿಸಿದರೆ ಕಾಂಗ್ರೆಸ್ ಮುಖ್ಯ ಮಂತ್ರಿಗಳು ಅಂತಹ ಅಧಿಕಾರ ವರ್ಗಾವಣೆಗಳಿಗೆ ಒತ್ತಾಯಿಸಿರುವುದು ಕಂಡು ಬರುತ್ತದೆ. ಅದು ಈಡೇರುತ್ತದೆ. ಅದಕ್ಕೂ ಕಾಶ್ಮೀರಕ್ಕೂ ಯಾವ ಸಂಬಂಧವೂ ಇಲ್ಲ ಕಾಶ್ಮೀರ ವಿಚಾರವನ್ನು ರಾಜ್ಯ ಸ್ವಾಯತ್ತತೆಯ ವಿಚಾರದೊಂದಿಗೆ ಬೆರೆಸಿದ್ದೆ ಆದರೆ ನಿಮ್ಮ ವಾದವು ಬಿದ್ದು ಹೋಗುತ್ತದೆ. ನಿಮ್ಮನ್ನು ತಪ್ಪಾಗಿ ತಿಳಿದುಕೊಳ್ಳುವ ಸಾಧ್ಯತೆಯೂ ಇದೆ. ಶೇಖ್ ಅಬ್ದುಲ್ಲಾ ಅವರನ್ನೂ ಹಾಗೆ ತಿಳಿದುಕೊಳ್ಳಲಾಯಿತು. ಕೊನೆಗೆ ಈ ಒಪ್ಪಂದ ಮಾಡಿಕೊಂಡು ಅವರು ತಪ್ಪು ತಿಳುವಳಿಕೆಯನ್ನು ಪರಿಹರಿಸಬೇಕಾಯಿತು. ಮುದ್ರಿತವಾಗಿ ಪ್ರಕಟವಾಗಿರುವ ಅವರ ಹೇಳಿಕೆಗಳನ್ನು ಯಾರೂ ಪ್ರಶ್ನಿಸುವಂತಿಲ್ಲ. ಒಂದು ಕಾಲದಲ್ಲಿ ಅವರು ಕಾಶ್ಮೀರವು ಒಂದು ಸ್ವತಂತ್ರ ರಾಜ್ಯವಾಗಿರಬೇಕೆಂದು ಅವರು ಬಯಸಿದರು. ಇನ್ನೊಂದು ಸಲ ಜನಮತಗಣನೆ ಆಗಬೇಕು ಎಂದರು; ಮತ್ತೊಂದು ಸಲ ಏನಾದರೂ ವಿಶೇಷ ಸ್ಥಾನಮಾನ ಇರಬೇಕು ಎಂದರು. ಈ ವಿವಾದವು

ನಡೆಯುತ್ತಿದ್ದಾಗ ಈಗ ನಿಮಗೆ ನಾನು ಬಯಲು ಪಡಿಸುತ್ತಿದ್ದೇನೆ. ಒಮ್ಮೆ ಪಂಡಿತ್ ನೆಹರೂ ಅವರನ್ನು ''ಅವರಿಗೆ ನಿಜವಾಗಿ ಏನು ಬೇಕಾಗಿದೆ'' ಎಂದು ನಾನು ಕೇಳಿದೆ. ಆ ದಿನಗಳಲ್ಲಿ ಕೆಲವು ಮಾತುಕತೆಗಳು ನಡೆಯುತ್ತಿದ್ದವು. ಪಂಡಿತ್ ಜೀ ಹೇಳಿದರು. 'ಅವರಿಗೆ ಸಹಪ್ರಭುತ್ವ ಅಂಥದೇನೋ ಒಂದು ಬೇಕಾಗಿದೆ'' ಎಂದರು. ಆದರೆ ನಿಮ್ಮ ಮಹಾನ್ ನಾಯಕರಿಗೆ ಕೀರ್ತಿ ಸಲ್ಲಬೇಕು, ಶೇಕ್ ಅಬ್ದುಲ್ಲಾ ಅವರನ್ನು ಕುರಿತು ವ್ಯಕ್ತಿಗತ ವಿಶ್ವಾಸವಿದ್ದರೂ ಈ ಸಮಸ್ಯೆಯ ಪರಿಹಾರಕ್ಕೆ ತಮ್ಮ ಶಕ್ತಿಮೀರಿ ಶ್ರಮಿಸಲು ಬಯಸಿದ್ದರೂ, ಆ ಬೇಡಿಕೆಗೆ ಬಗ್ಗಲಿಲ್ಲ. ಏಕೆಂದರೆ ಅವರು ವೈಯುಕ್ತಿಕ ಸ್ನೇಹಕ್ಕಿಂತ ಭಾರತೀಯ ಏಕತೆ ಅಖಂಡತೆ ಬಹಳ ಮುಖ್ಯವಾದದ್ದು ಎಂದು ಭಾವಿಸಿದ್ದರು. ಮಾನ್ಯರೆ, ಪ್ರಧಾನ ಮಂತ್ರಿಯವರು ಸದನದ ಮುಂದೆ ಈ ಹೇಳಿಕೆಯನ್ನು ಕುರಿತು ಹಾಗೂ ಒಪ್ಪಂದದ ಷರತ್ತುಗಳನ್ನು ಕುರಿತು ಮಂಡಿಸಿರುವ ದಾಖಲೆಗಳು ತುಂಬಾ ತೃಪ್ತಿಕರವಾಗಿವೆ.

**ಡೆಪ್ಯುಟಿ ಸ್ಪೀಕರ್ ಅವರು** : ನೀವು ಹೇಳಿಕೆಯನ್ನು ಕುರಿತು ಮಾತನಾಡಲು ತೊಡಗಿದಿರಿ. ಈಗ 20 ನಿಮಿಷಗಳನ್ನು ತೆಗೆದುಕೊಂಡಿದ್ದೀರಿ.

**ಶ್ರೀ ಕೆ. ಹನುಮಂತಯ್ಯ** : ತಮ್ಮ ಆದೇಶವನ್ನು ನಾನು ಪಾಲಿಸುತ್ತೇನೆ. ಕೊನೆಗೆ ಅವರು ಒಪ್ಪಿಕೊಂಡಿದ್ದಾರೆ. ಅದು ಅಂತಿಮ ಎಂದು ನಾನು ಆಶಿಸಿದ್ದೇನೆ. ಮಾತುಕತೆಗಳ ಮುಖ್ಯ ಉದ್ದೇಶ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ನಡುವಣ ಬಾಂಧವ್ಯದ ಸ್ವರೂಪವನ್ನು ಮನದಟ್ಟು ಮಾಡಿಕೊಳ್ಳಲು ಉಭಯ ಪಕ್ಷಗಳಲ್ಲಿ ಇದ್ದಿರಬಹುದಾದ ಮಿಥ್ಯಾಭೀತಿಗಳನ್ನು ಹೋಗಲಾಡಿಸುವುದು. ಒಕ್ಕೂಟದಲ್ಲಿ ವಿಲೀನ ಹಾಗೂ ಕ್ರೋಢೀಕರಣವು ಖಾಯಂ ಆದದ್ದು ಅದರಲ್ಲಿ ಬದಲಾವಣೆ ಇಲ್ಲ ಎಂದು ಅವರು ಸಮ್ಮತಿಸಿದ್ದಾರೆ. ನಾಕಷ್ಟು ಕಾಲ ಯೋಚನೆ ಮಾಡಿ ಕಷ್ಟವನ್ನು ಅನುಭವಿಸಿ ಈ ಎರಡು ಭರವಸೆಗಳನ್ನು ನೀಡಿದ್ದಾರೆ. ಏನಿದ್ದರೂ ಯಾತನಾನುಭವವು ಮನುಷ್ಯನನ್ನು ಬುದ್ಧಿವಂತನನ್ನಾಗಿ ಮಾಡುತ್ತದೆ. ಅವರು ಈಗ ಬುದ್ಧಿವಂತರಾಗಿದ್ದಾರೆ, ಇದೆಲ್ಲ ಪ್ರಧಾನ ಮಂತ್ರಿಯವರ ಸಾಧನೆ. ಏನಾದರೂ ವಿಶೇಷ ಸ್ಥಾನಮಾನ ಅಥವಾ ಅಂಥದೇನಾದರೂ ಬೇಕೆಂದು ಪಟ್ಟು ಹಿಡಿದಿದ್ದ ಹಿಂದಿನ ಕಾಶ್ಮೀರಿ ನಾಯಕರ ಮನೋಧರ್ಮದಲ್ಲಿ ಪರಿವರ್ತನೆಯನ್ನು ಅವರು ತಂದಿದ್ದಾರೆ, ನಾವು ಈ ಒಪ್ಪಂದವನ್ನು ಸರ್ವಾನುಮತದಿಂದ ಅಂಗೀಕರಿಸೋಣ, ಮತ್ತೆ ವಿವಾದವನ್ನು ಬೆಳೆಸಿ ಭಾರತದ ಮಿಕ್ಕಭಾಗವೂ ಅದರಿಂದ ಶೋಷಿತವಾಗಲು ಬಿಡದಿರೋಣ.

*(ಲೋಕ ಸಭೆ ಕಲಾಪ ದಿನಾಂಕ : 3-3-1975)*

## (4) ಕಮ್ಯೂನಿಸ್ಟ್ ರಾಜ್ಯ ವ್ಯವಸ್ಥೆ ಕುರಿತು

ಶ್ರೀ ಹನುಮಂತಯ್ಯ (ಬೆಂಗಳೂರು) : ಮಾನ್ಯರೆ, ಒಂದು ಗಂಟೆಗೂ ಹೆಚ್ಚಾಗಿ ನಾವು ಕಮ್ಯೂನಿಸಂ ಕುರಿತು ಒಂದು ಉಪನ್ಯಾಸವನ್ನು ಕೇಳಿ ಪ್ರಯೋಜನ ಪಡೆದುಕೊಂಡಿದ್ದೇವೆ. ಇಡೀ ಭಾಷಣವು ಕಮ್ಯೂನಿಸಂನ ಗುಣಗಳ ಹೊಗಳಿಕೆಯಿಂದ ತುಂಬಿತ್ತು. ಈ ದೇಶದಲ್ಲಿ ಶ್ರಮಿಕರ ಸರ್ವಾಧಿಕಾರವು ಸ್ಥಾಪನೆಗೊಂಡ ದಿನ ಹೇಗೆ ಎಲ್ಲವೂ ಬಂಗಾರವಾಗಿ ಪರಿವರ್ತಿಯಾಗಿ ಬಿಡುವುದು ಎಂದು ರಸವತ್ತಾಗಿ ವರ್ಣಿಸಲಾಯಿತು.

ಶ್ರೀ ಎಸ್. ಎ. ಡಾಂಗೆ : ಹರ್‍ಯಾಣದಲ್ಲಿ ಅಂಥದೇನೂ ಇರಲಿಲ್ಲ. ಕಮ್ಯುನಿಸ್ಟ್ ಸರ್ವಾಧಿಕಾರವಿರಲಿಲ್ಲ.

ಶ್ರೀ ಹನುಮಂತಯ್ಯ : ಕಾಂಗ್ರೆಸ್ ಪಕ್ಷಕ್ಕೆ ಸಂಬಂಧಿಸಿದಂತೆ, ಯಾವುದೇ ಪಕ್ಷದಿಂದ ಬರಲಿ, ಒಳ್ಳೆಯ ಲಾಭಕರವಾದ ವಿಚಾರಗಳು ಬಂದಾಗ ನಾವು ಮನಸ್ಸನ್ನು ಮುಚ್ಚಿಕೊಳ್ಳುವವರಲ್ಲ ಎಂಬುದು ಶ್ರೀ ಡಾಂಗೆ ಅವರಿಗೆ ಗೊತ್ತು. ಕಾಂಗ್ರೆಸ್ ಪಕ್ಷದ ಬಲವಿರುವುದೇ ಒಳ್ಳೆಯ ವಿಚಾರಗಳನ್ನು ಅರಗಿಸಿ ಕೊಳ್ಳವುದರಲ್ಲಿ, ವಿರೋಧ ಪಕ್ಷಗಳಾದರೆ, ಪರಿಣಾಮಗಳ ವಿವೇಚನೆಯಿಲ್ಲದೆ ಅಥವಾ ಈ ದೇಶಕ್ಕೆ ಅವುಗಳು ಅನ್ವಯಿಸುತ್ತವೆಯೋ ಇಲ್ಲವೊ ಎಂಬ ಯೋಚನೆಯಿಲ್ಲದೆ ತಮ್ಮದೇ ವಿಚಾರಗಳಿಗೆ ಅಂಟಿಕೊಳ್ಳುತ್ತಾರೆ. ಅದೇ ಅವರ ದೌರ್ಬಲ್ಯವಾಗಿದೆ. ನನ್ನ ಮಟ್ಟಿಗೆ ಹೇಳುವುದಾದರೆ, ಈ ದೇಶವನ್ನು ಸಂಪದ್ಭರಿತವನ್ನಾಗಿಯೂ ಸಂತೋಷಕರವನ್ನಾಗಿಯೂ ಮಾಡಬಲ್ಲ ಯಾವುದೇ ಸಿದ್ಧಾಂತವನ್ನು ಒಪ್ಪಿಕೊಳ್ಳ ಬಯಸುತ್ತೇನೆ.

ಅಂದು ಒಂದುದಿವಸ ರಷ್ಯದ 50ನೆಯ ವಾರ್ಷಿಕೋತ್ಸವವನ್ನು ಕುರಿತು ಬೇಕಾದಷ್ಟು ಸಾಹಿತ್ಯವನ್ನು ನಮಗೆ ಒದಗಿಸಲಾಯಿತು. ನನಗೆ ರಷ್ಯವನ್ನು ಕುರಿತು ಪ್ರೀತಿ, ನಾನು ಯಾವ ರೀತಿಯಲ್ಲೂ ಅದನ್ನು ಅಗೌರವಿಸ ಬಯಸುವುದಿಲ್ಲ. ನಿದರ್ಶನಕ್ಕಾಗಿ ಮಾತ್ರ ನನ್ನ ಸನ್ಮಿತ್ರರಿಗೆ ಒಂದು ಮಾತು ಹೇಳಬಯಸುತ್ತೇನೆ.

ಶ್ರೀ ಎಸ್. ಎ. ಡಾಂಗೆ : *ಅದು 50 ವರ್ಷ ಬದುಕಿದೆ ಎನ್ನುವುದು ನಿಮಗೆ* ಇಷ್ಟವಾಗುತ್ತಿಲ್ಲ ಅಷ್ಟೆ.

**ಶ್ರೀ ಹನುಮಂತಯ್ಯ** : ಕಳೆದ 50 ವರ್ಷಗಳಿಂದ ಅವರು ಆರ್ಥಿಕಾಭಿವೃದ್ಧಿಗಾಗಿ ಶ್ರಮಿಸುತ್ತಿದ್ದಾರೆ. ಆದರೂ ಅದು ಏಳಿಗೆಯ ಮತ್ತು ಸಮೃದ್ಧಿಯ ಪೂರ್ಣ ಹಂತವನ್ನು ತಲುಪಿದೆ ಎಂದು ನನ್ನ ಮಿತ್ರರು ಶ್ರೀ ಡಾಂಗೆ ಹಾಗೂ ಅವರ ಸಹೋದ್ಯೋಗಿಗಳು ಹೇಳಬಲ್ಲರೇನು? ಜಗತ್ತಿನ ಚಿತ್ರವನ್ನು ನೀವು ನೋಡಿದರೆ, ಡೆನ್ಮಾರ್ಕ್ -ನಾರ್ವೇ-ಸ್ವೀಡನ್ ಈ ಸ್ಕಾಂಡಿನೇವಿಯನ್ ದೇಶಗಳು ಅತ್ಯುನ್ನತವಾದ ಜೀವನ ಮಟ್ಟವನ್ನು ಪಡೆದಿವೆ.

**ಶ್ರೀ ಎಸ್. ಎ. ಡಾಂಗೆ** : ನೀವು? ನಿಮ್ಮದು ಹೇಗೆ ?

**ಶ್ರೀ ಹನುಮಂತಯ್ಯ** : ಯೂರೋಪಿನಲ್ಲಿ ಇನ್ನೂ ದಕ್ಷಿಣಕ್ಕೆ ಹೋದರೆ ಅತ್ಯುನ್ನತ ಜೀವನಮಟ್ಟ ಕಂಡುಬರುವುದು ಸ್ವಿಜರ್ಲೆಂಡಿನಲ್ಲಿ, ಏಷ್ಯಕ್ಕೆ ಬಂದರೆ ಜಪಾನಿನಲ್ಲಿ ಅದನ್ನು ನೋಡಬಹುದು. ಚೈನಾ ಆಗಲಿ ರಷ್ಯಾ ಆಗಲಿ ಇನ್ನು ಹಿಂದೆ ಬಿದ್ದಿವೆ. ಇದು ಎಲ್ಲರೂ ಒಪ್ಪಿರುವ ಸಂಗತಿ. ಇದು ಆಹಾರ ವಸ್ತುಗಳ ವಿಷಯದಲ್ಲಿ ಇನ್ನೂ ಹೆಚ್ಚು ಸತ್ಯ. ಸದಾಕಾಲವು ಶಾಂತಿಯನ್ನು ಕುರಿತು ಸಮ್ಮೇಳನಗಳನ್ನು ನಡೆಸುತ್ತಾರೆ. ಇಲ್ಲಿರುವ ಸದಸ್ಯರು ಅವರ ಅನುಯಾಯಿಗಳು ಕ್ರಾಂತಿಯ ದಿನದಂದು ಕ್ರೆಮ್ಲಿನ್ನಿನೆದುರು ಕೆಂಪು ಚೌಕದಲ್ಲಿ ಈ ಕಮ್ಯೂನಿಸ್ಟ್ ದೇಶಕ್ಕೆ ಇರುವ ಉದ್ದೇಶ ಶಾಂತಿ ಎಂಬುದರ ಸಾಕ್ಷಿ ಸ್ವಲ್ಪವಾದರೂ ಕಂಡು ಬಂದಿರಬೇಕಾಗಿತ್ತೆಂದು ಮನಗಾಣಬೇಕು ಅದು ಕಂಡು ಬಂದಿದ್ದರೆ ನನಗೆ ತುಂಬಾ ಸಂತೋಷವಾಗುತ್ತಿತ್ತು.

ಒಬ್ಬ ಸದಸ್ಯರು : ನೀವೇಕೆ ಪ್ರಧಾನ ಮಂತ್ರಿಯವರನ್ನು ಅಲ್ಲಿಗೆ ಹೋಗಬಾರದೆಂದು ಹೇಳಲಿಲ್ಲ?

**ಶ್ರೀ ಹನುಮಂತಯ್ಯ** : ನಾನು ಅಲ್ಲಿಗೆ ಹೋಗಿದ್ದೇನೆ. ಮಾನವನ ಸುಖ ಸಂತೋಷಗಳಿಗೆ ಸಾಧಕವಾಗಿ ಅವರು ಬೆಳೆಯುವ ಆಹಾರ ವಸ್ತುಗಳು, ಉತ್ಪಾದಿಸುವ ಬಟ್ಟೆ, ಅವರು ತಯಾರಿಸುವ ರೇಡಿಯೋಗಳು ಮೊದಲಾದವನ್ನು ಪ್ರದರ್ಶಿಸುವುದಕ್ಕೆ ಬದಲಾಗಿ ಅವರು ಅತ್ಯಾಧುನಿಕ ಮಾರಕಾಸ್ತ್ರಗಳನ್ನು ಪ್ರದರ್ಶಿಸುತ್ತಾರೆ. ನಾನು ಅಮೇರಿಕವನ್ನು ಬೆಂಬಲಿಸುತ್ತಿಲ್ಲ. ಅವರು ಅವುಗಳನ್ನು ತಯಾರಿಸಿರಬಹುದು. ಉಪಯೋಗಿಸುತ್ತಲೂ ಇರಬಹುದು, ರಷ್ಯನರು ತಯಾರಿಸಿದರೂ ಉಪಯೋಗಿಸುತ್ತಿಲ್ಲದಿರಬಹುದು ಆದರೆ ಬಡತನಕ್ಕೆದುರು ಹೋರಾಡಿ ಅದನ್ನು ನಿರ್ಮೂಲ ಮಾಡುವುದಕ್ಕಾಗಿ ಪಣತೊಟ್ಟಿರುವ ಈ ಕಮ್ಯೂನಿಸ್ಟ್ ದೇಶಗಳು ನಿಜವಾಗಿ ಬಡತನದ ಮೇಲೆ ಯುದ್ಧ ಮಾಡಿ ಜಯಗಳಿಸಿವೆಯೆ? ಯುದ್ಧದ ಆಯುಧಗಳನ್ನು, ತೋಳ ಬಲವನ್ನು ಪ್ರದರ್ಶಿಸುತ್ತಿರುವುದೇ

ಅವರು ಬಡತನದೆದುರು ಹೋರಾಡಿ ಜನರನ್ನು ಸಂತುಷ್ಟರನ್ನಾಗಿಯೂ ಸಂಪದ್ಯುಕ್ತರನ್ನಾಗಿಯೂ ಮಾಡುವುದಕ್ಕಿಂತ ಬೇರೆಯಾದ ಏನನ್ನೋ ಅವರು ನಡೆಸುತ್ತಿದ್ದಾರೆ ಎಂಬುದನ್ನು ತೋರಿಸುತ್ತದೆ.

(ಲೋಕ ಸಭೆ ಕಲಾಪ ದಿನಾಂಕ : 22-11-1967)

## (5) ರೈಲ್ವೆ ಮುಂಗಡ ಪತ್ರ 1972-73

**ರೈಲ್ವೆ ಸಚಿವರು (ಶ್ರೀ ಹನುಮಂತಯ್ಯ)** : ಸದನದ ಮುಂದೆ ಮಂಡಿಸಲಾಗಿರುವ ಬಡ್ಜೆಟ್ಟಿಗೆ ಬಹುಮಟ್ಟಿಗೆ ಸ್ವಾಗತ ದೊರಕಿರುವುದು ನನಗೆ ತುಂಬಾ ಸಂತೋಷವನ್ನುಂಟು ಮಾಡಿದೆ. ಸದನದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯವನ್ನು ಮಾತ್ರ ನಾನು ಲೆಕ್ಕಕ್ಕೆ ಹಿಡಿಯುತ್ತಿಲ್ಲ, ಸದನದ ಹೊರಗೆ ಜನರು, ಪತ್ರಿಕೆಗಳು ವ್ಯಕ್ತಪಡಿಸಿರುವ ಅಭಿಪ್ರಾಯವನ್ನು ಪರಿಗಣಿಸಿದ್ದೇನೆ. ಭಾರತದ ಮುಖ್ಯ ವೃತ್ತ ಪತ್ರಿಕೆಗಳಲ್ಲಿ ಹೆಚ್ಚು ಕಡಿಮೆ ಎಲ್ಲವುಗಳ ಅಗ್ರಲೇಖನಗಳನ್ನು ಪರಿಶೀಲಿಸಿದ್ದೇನೆ, ಕೊಟ್ಟಿರುವ ಶೀರ್ಷಿಕೆ ಕೆಂಪಿನಿಂದಾಚೆಗೆ ರೈಲ್ವೆ ಎಂದೋ ರೈಲ್ವೆ ಮತ್ತೆ ಹಳಿಯ ಮೇಲೆ ಎಂದೋ ಇದೆ.

ಯಾವುದೇ ಒಂದು ಸಂಪಾದಕೀಯವನ್ನು

**ಶ್ರೀ ಜ್ಯೋತಿರ್ಮಯ ಬಸು** : ನಿಮಗೆ ವಿಪುಲವಾದ ಮಾಹಿತಿ ಒದಗಿಸುವ ಪಿ.ಐ.ಬಿ. ಇದೆ ಎಂದು ನನಗೆ ಗೊತ್ತು.

**ಶ್ರೀ ಕೆ. ಹನುಮಂತಯ್ಯ** : ನಾನೇ ಮಾಹಿತಿ ಪಡೆದುಕೊಳ್ಳುತ್ತೇನೆ. ಪಿ.ಐ.ಬಿ. ಯನ್ನು ಅವಲಂಬಿಸುವುದಿಲ್ಲ.

ಈ ಸದನದ ಸದಸ್ಯರೂ ಪತ್ರಿಕೆಗಳೂ ಮಾಡಿರುವ ಈ ವಿಹಿತವಾದ ಮೌಲ್ಯಮಾಪನಕ್ಕೆ ನಾನು ಅತ್ಯಂತ ಆಭಾರಿಯಾಗಿದ್ದೇನೆ. ಸಂಪಾದಕೀಯಗಳು ಕೆಲವು ಕೊರತೆಗಳನ್ನೂ ದೋಷಗಳನ್ನು ತೋರಿಸಿಕೊಟ್ಟಿವೆ ಎಂಬುದನ್ನು ಬಲ್ಲೆ. ರೈಲ್ವೆ ಆಡಳಿತವು ದೋಷಗಳನ್ನು ಪರಿಹರಿಸಿಕೊಂಡು ಸುಧಾರಣೆಗೆ ಅವಕಾಶವಿರುವಲ್ಲೆಲ್ಲಾ ಸುಧಾರಣೆಗಳನ್ನು ಕಾರ್ಯಗತಗೊಳಿಸಲು ಅವಿರತವಾಗಿ ಶ್ರಮಿಸುತ್ತಿದೆ ಎಂದು ಮತ್ತೆ ಮತ್ತೆ ಹೇಳುತ್ತಿದ್ದೇನೆ. ಅದನ್ನು ಮತ್ತೊಮ್ಮೆ ಪುನರುಕ್ತಿಸಬೇಕಾದ ಆವಶ್ಯಕತೆಯಿಲ್ಲ.

ಸನ್ಮಾನ್ಯ ಸದಸ್ಯರು ಉದ್ದೇಶಿತ ತೆರಿಗೆಗಳನ್ನು ಕುರಿತು ಮಾತನಾಡಿದ್ದಾರೆ. ನಗರ ರೈಲ್ವೆ ದರಗಳ ವಿನ್ಯಾಸವನ್ನು ಒಂದು ರೂಪಕ್ಕೆ ತರುವುದರ ಬಗ್ಗೆ ಹೇಳುವುದಾದರೆ, ಮುಂಬಯಿಂದ ಬಂದಿರುವವರ ಹೊರತು ಬೇರೆ ಯಾವ ಸದಸ್ಯರೂ ಅದನ್ನು ಕುರಿತು ಮಾತನಾಡಿದಂತೆ ನನಗೆ ಕಾಣಿಸಲಿಲ್ಲ. ಈ ಸಮನ್ವಯಕ್ಕೆ ನಾನು ವಿವರವಾಗಿ ಕಾರಣಗಳನ್ನು ನೀಡಿದ್ದೇನೆ. ಇಲ್ಲಿ ತುಂಬಾ ಮುಖ್ಯವಾದ ವಿಚಾರವೆಂದರೆ, ಕಲ್ಕತ್ತಾ, ಮದರಾಸು ಮತ್ತು ಮುಂಬಯಿ ಮಹಾನಗರಗಳನ್ನು ಒಂದೇ ರೀತಿಯಲ್ಲಿ ಪರಿಗಣಿಸುವುದು. ಅನ್ಯಾಯ ಮತ್ತು. ಪಕ್ಷಪಾತಗಳನ್ನು ಮುಂದುವರಿಸುತ್ತಲೇ ಇದ್ದರೆ ಸಾಮಾಜಿಕ ನ್ಯಾಯವಾದರೂ ಎಲ್ಲಿಂದ ದೊರಕೀತು? ನಗರದಲ್ಲಿ ವಾಸ ಮಾಡುವವರಿಗೆ ಅದರಲ್ಲೂ ನೌಕರಿಯಲ್ಲಿರುವವರಿಗೆ, ಸೂಚಿಸಿರುವ ಸಣ್ಣ ಮೊತ್ತದ ಏರಿಕೆ ಈ ದಿನಗಳಲ್ಲಿ ಏನೇನೂ ಅಲ್ಲ ಇದನ್ನು ನೀವು ಒಬ್ಬೊಬ್ಬರೂ ಬಲ್ಲಿರಿ. ದೇಶದಲ್ಲಿಯೇ ಅತ್ಯಂತ ಕಡಿಮೆ ವರಮಾನವಿರುವ ಗ್ರಾಮೀಣ ಜನರ ಪರಿಸ್ಥಿತಿಯೂ ನನಗೆ ಅರ್ಥವಾಗುತ್ತದೆ. ಈ ಎರಡು ಮಹಾನಗರಗಳಲ್ಲಿರುವ ಕಾರ್ಖಾನೆಗಳ ಕಾರ್ಮಿಕರು ಹಾಗೂ ಕಚೇರಿ ಕೆಲಸಗಾರರು ತಿಂಗಳಿಗೆ ೫ ಪೈಸೆಯಿಂದ ಮೊದಲುಗೊಂಡು 2.15 ರೂ.ವರೆಗೆ ಬೇರೆ ಬೇರೆಯಾಗಿರುವ ಈ ಅಲ್ಪ ಮೊತ್ತವನ್ನು ಕೊಡಲು ಹಿಂಜರಿಯಲಾರರು ಎಂಬ ಭರವಸೆಯಿದೆ. ಅದರಿಂದ ರೈಲ್ವೆಯ ಹಣಕಾಸು ಪರಿಸ್ಥಿತಿ ಉತ್ತಮವಾಗುತ್ತದೆ. ಸಮಾನತೆ ಮತ್ತು ನ್ಯಾಯಗಳು ಉಳಿಯುತ್ತವೆ. ಹಾಗೂ ಸೇವೆಯಲ್ಲಿ ಸುಧಾರಣೆಯಾಗುತ್ತೆ. (ಗದ್ದಲ) ಮುಂಬಯಿ ಸದಸ್ಯರು ಸಾರ್ವಜನಿಕ ಅಭಿಪ್ರಾಯವನ್ನು ಅರಿತಿದ್ದಾರೆ. ಡಾ: ಕೈಲಾಸ್ ಅವರ ವಯಸ್ಸಿಗೆ ಮತ್ತು ಅನುಭವಕ್ಕೆ ನಾನು ಹೆಚ್ಚಿನ ಗೌರವ ಇಟ್ಟುಕೊಂಡಿದ್ದೇನೆ. ಅವರು ಒಂದು ಟೆಲಿಗ್ರಾಂ ತೋರಿಸಿದ್ದಾರೆ. ಆದರೆ ಚೆಂಬರ್ ಆಫ್. ಕಾಮರ್ಸ್ ಇಂದಾಗಲಿ, ಈ ಮಹಾನಗರಗಳ ಬೇರೆ ಯಾವುದೇ ಸಂಸ್ಥೆಗಳಿಂದಾಗಲಿ ನನಗೆ ಯಾವ ತಂತಿಯೂ ಬಂದಿಲ್ಲ. ಎಲ್ಲೋ ಕೆಲವು ಜನರು ತಾವೇ ಒಂದು ಸಂಸ್ಥೆಯ ಹೆಸರಿಟ್ಟುಕೊಂಡು ಟೆಲಿಗ್ರಾಂ ಕಳಿಸಿದ್ದಾರೆ. ಆದರೆ ಗೌರವಾನ್ವಿತ ಸದಸ್ಯರು ಸಾರ್ವಜನಿಕ ಅಭಿಪ್ರಾಯವನ್ನು ಸರಿಯಾಗಿ ಬೆಳೆಸಿದ ಪಕ್ಷದಲ್ಲಿ ಈ ದರಗಳ ಏರಿಕೆಯಲ್ಲಿರುವ ನ್ಯಾಯವು ನಿಮಗೆ ತಿಳಿಯುತ್ತದೆ. ಅವರು ತಮ್ಮ ಮತ ಕ್ಷೇತ್ರಗಳ ಬಗೆಗೆ ಚೆನ್ನಾಗಿ ತಿಳಿದುಕೊಂಡಿರಬೇಕು ನಿಜ. ಆದರೆ ಅವರು ಇಡೀ ದೇಶದ ಹಿತಾಸಕ್ತಿಯ ಬಗೆಗೆ ಇನ್ನೂ ಹೆಚ್ಚಾಗಿ ತಿಳಿದುಕೊಂಡಿರಬೇಕೆಂದು ನಾನು ಆಶಿಸುತ್ತೇನೆ. ಶೇಕ್ಸ್‌ಪಿಯರನ ನಾಟಕವೊಂದರಲ್ಲಿ ಯಾರೋ ಹೇಳುವ ಈ ಮಾತು ಸುಪ್ರಸಿದ್ಧವಾಗಿದೆ :. "ನಾನು ಸೀಸರನನ್ನು ಪ್ರೀತಿಸುತ್ತೇನೆ. ಆದರೆ ನಾನು ರೋಮನ್ನು ಇನ್ನೂ ಹೆಚ್ಚಾಗಿ ಪ್ರೀತಿಸುತ್ತೇನೆ." ನಿಮ್ಮ ಮತಕ್ಷೇತ್ರವನ್ನು

ಪ್ರೀತಿಸಿ, ತುಂಬಾ ಸಂತೋಷ, ಆದರೆ ದೇಶವನ್ನು ಮಿಗಿಲಾಗಿ ಪ್ರೀತಿಸಿ, ರಾಜ್ಯದ ನಿರ್ದಿಷ್ಟ ಮತಕ್ಷೇತ್ರದ ಹಿತಾಸಕ್ತಿಗಳನ್ನು ಎಲ್ಲಾ ದೃಷ್ಟಿಗಳಿಂದಲೂ ರಕ್ಷಿಸಿ. ; ಆದರೆ ದೇಶದಲ್ಲಿ ನ್ಯಾಯ ಮತ್ತು ಸಮಾನತೆಗಳ ನಿಜವಾದ ಪಾಲಕರಾಗಿ.

ಮಾನ್ಯ ಸದಸ್ಯರಲ್ಲಿ ಅನೇಕರು ರೈಲ್ವೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಕುರಿತು ಚೆನ್ನಾಗಿ ಆಲೋಚಿಸಿದ್ದಾರೆ. ಆದರೆ ಅವರೇ ಇಲ್ಲೊಂದು ರೈಲ್ವೆ ಮಾರ್ಗವನ್ನು ಕೊಟ್ಟಿದ್ದಕ್ಕೆ, ಅಲ್ಲೊಂದು ಮಾರ್ಗವನ್ನು ಕೊಡದುದಕ್ಕೆ ಅಸಮಾಧಾನಗೊಂಡರು. ಈ ಸದಸ್ಯರು ಮಾತನಾಡುವುದಕ್ಕೆ ಮುಂಚೆ ಭಾರತದ ರೈಲ್ವೆ ನಕ್ಷೆಯನ್ನು ಒಮ್ಮೆ ನೋಡಬೇಕೆಂದು ಕೋರುತ್ತೇನೆ. ಅದಕ್ಕೆ ಕಾರಣಗಳೇನು? ಒಂದು ಪ್ರದೇಶದಲ್ಲಿ ಕಡಿಮೆ ರೈಲು ಮಾರ್ಗಗಳಿವೆ. ಇನ್ನೊಂದು ಪ್ರದೇಶದಲ್ಲಿ ಅಧಿಕವಾಗಿವೆ. ನಕ್ಷೆಯನ್ನು ನೋಡಿದರೆ ತಿಳಿದುಬರುವ ಈ ಅಂಶವೇ ಸಾಕು, ಬೇರೆ ಕಾರಣ ಬೇಕಾಗೇ ಇಲ್ಲ. ಈ ಅಸಮತೋಲನವನ್ನು ಸರಿಪಡಿಸಲು ನಾನು ಪ್ರಯತ್ನಿಸುತ್ತಿದ್ದೇನೆ. ಈ ಮಧ್ಯೆ ಯಾವುದೇ ನಿರ್ದಿಷ್ಟ ಪ್ರದೇಶದ ರೈಲ್ವೆ ಪ್ರಗತಿಯನ್ನು ತಡೆಹಿಡಿಯುತ್ತಿಲ್ಲ. ಉಪಲಬ್ಧಸಂಪನ್ಮೂಲದಿಂದಲೇ ಪ್ರತಿಯೊಂದು ರಾಜ್ಯಕ್ಕೂ ಒಂದು ಮಾರ್ಗವನ್ನೋ ಪರಿವರ್ತನೆ ಯೋಜನೆಯನ್ನೋ ಕೊಡಲು ಪ್ರಯತ್ನಿಸುತ್ತಿದ್ದೇವೆ. ಪ್ರತಿಯೊಂದು ರಾಜ್ಯವೂ ತನಗೆ ನ್ಯಾಯವು ದೊರಕಿರುವುದನ್ನು ತಿಳಿಯಬೇಕು. ಹಾಗೆ ಮಾಡದೆ ರಾಜ್ಯ ಪ್ರಜ್ಞೆಎಂದೋ ಮತಕ್ಷೇತ್ರ ಪ್ರಜ್ಞೆಎಂದೋ ಕರೆದು ಹುಯಿಲೆಬ್ಬಿಸುವುದಕ್ಕಾಗಿ ಮಾತ್ರ ಮಾತನಾಡಿದರೆ ನಾನು ಅಸಹಾಯಕ.

**ಶ್ರೀ ರಾಮಧನ್** : ದಕ್ಷಿಣದಲ್ಲಿ ಕೈಗೊಂಡಿರು ...ರ್ಗ ಪರಿವರ್ತನೆಗಳು ಸಮರ್ಥನೀಯವಾಗಿವೆಯೆ ಇಲ್ಲವೆ ಎಂದು ಪರಿಶೀಲಿ...ಲು ಒಂದು ವಿಚಾರಣಾ ಸಮಿತಿಯನ್ನು ನೇಮಿಸಬೇಕೆಂದು ಸಚಿವರನ್ನು ಕೋರುತ್ತೇ... (ಗದ್ದಲ).

**ಶ್ರೀ ಹನುಮಂತಯ್ಯ** : ಸನ್ಮಾನ್ಯ ಸದಸ್ಯರಿಗೆ ವಿಚಾರಣಾ ಸಮಿತಿಯ ಅಗತ್ಯವೇ ಬರುವುದಿಲ್ಲ. ಅವರು ಭಾರತದ ರೈಲ್ವೆ ನಕ್ಷೆಯನ್ನು ತೆಗೆದುಕೊಂಡು ದೇಶದ ಪ್ರತಿಯೊಂದು ಭಾಗದಲ್ಲಿ ರೈಲ್ವೆ ಮಾರ್ಗದ ಉದ್ದ ಎಷ್ಟಿದೆಯೆಂಬುದನ್ನು ಲೆಕ್ಕಹಾಕಿದರೆ ಸಾಕು. ಇದಕ್ಕೆಲ್ಲಾ ಸಮಿತಿ ಬೇಕಾಗಿಲ್ಲ. ಮಾನ್ಯ ಸದಸ್ಯರು ಪ್ರಮಾಣಿಕರಾದುದರಿಂದ ಸರಿಯಾದ ತೀರ್ಮಾನಕ್ಕೆ ಬರುತ್ತಾರೆ ಎಂಬ ವಿಶ್ವಾಸ ನನಗಿದೆ.

ಈಗ ಪ್ರಯಾಣ ಶುಲ್ಕದ ದರ ಹೊಂದಾಣಿಕೆಗಾಗಿ ಸೂಚಿಸಿರುವ ತೆರಿಗೆಗಳ ಬಗ್ಗೆ ಹೇಳಬಯಸುತ್ತೇನೆ. ಹೊಂದಾಣಿಕೆಯ ರೂಪದಲ್ಲಿ ಸೂಚಿತವಾಗಿರುವ ತೆರಿಗೆ ಸಲಹೆಗಳು ಸದನದ ಸಮ್ಮತಿಯನ್ನು ಪಡೆದಿರುವುದರಿಂದ ನನಗೆ ಹೆಚ್ಚಿನ ಸಮಾಧಾನವಾಗಿದೆ. ವಾಸ್ತವವಾಗಿ ಮಾನ್ಯರೆ, ಮೌನವಾಗಿಯೇ ನನ್ನ ಎಲ್ಲಾ ಸಲಹೆಗಳಿಗೂ ಸದನವು ಅಂಗೀಕಾರ ನೀಡಿದೆ ಎಂದು ಭಾವಿಸುತ್ತೇನೆ.

**ಶ್ರೀ ಜ್ಯೋತಿರ್ಮಯ ಬಸು** . :ದು ಅಂದಾಜು ಮಾಡುವ ಬಹು ಜಾಣತನದ ಮಾರ್ಗ. ಹನುಮಂತಯ್ಯನವರೆ ನೀವು ನಿಜವಾಗಿ ಜಾಣರು.

**ಶ್ರೀ ಹನುಮಂತಯ್ಯ** : ಈ ಪಾರ್ಲಿಮೆಂಟು ರೈಲ್ವೆ ಆಡಳಿತವೊಂದರ ಪಾಲಕನಲ್ಲ, ಅದು ಇಡೀ ಸರ್ಕಾರದ ಸೌಧವನ್ನು ಎಚ್ಚರಿಕೆಯಿಂದ ಕಾಯುವ ಪಾಲಕ. ಯಾವಾಗ ಪರಿಸ್ಥಿತಿ ಶಾಂತವಾಗಿರುತ್ತದೆಯೋ ಆಗ ಪಾಲಕನೂ ಸದ್ದಿಲ್ಲದೆ ಕುಳಿತುಕೊಳ್ಳುತ್ತಾನೆ. ಅಲುಗಾಡುವುದಿಲ್ಲ. ಉಲ್ಲಂಘನೆ ಅಥವಾ ಕ್ಷೋಭೆ ಕಂಡು ಬಂದಾಗ ಕತ್ತಿ ಕಠಾರಿಗಳನ್ನು ಹಿಡಿದು ಮೇಲೇಳುತ್ತಾನೆ. ಸದನದಲ್ಲಿ ಕೋರಂ ಇಲ್ಲದೆ ಹೋದರೆ ಸದಸ್ಯರು ರೈಲ್ವೆ ಬಡ್ಜೆಟ್ ವಿಷಯದಲ್ಲಿ ತೃಪ್ತರಾಗಿದ್ದಾರೆ. ಅದರ ಬಗ್ಗೆ ಚಿಂತನೆ ಅವಕಾಶವಿಲ್ಲ ಎಂದು ಅರ್ಥವಾಗುತ್ತದೆ (ಗದ್ದಲ)

ಸಾಗಣೆ ಶುಲ್ಕ ಮತ್ತು ಪ್ರಯಾಣ ಶುಲ್ಕಗಳಲ್ಲಿ ಏರಿಕೆಯನ್ನು ಕುರಿತು ಮಾತನಾಡುವ ಸದಸ್ಯರು ಈ ವಿಷಯವಾಗಿ ಸಮತೋಲನ ದೃಷ್ಟಿಯಿಂದ ಆಲೋಚಿಸಬೇಕೆಂದು ಬೇಡುತ್ತೇನೆ. ಸಾಮಗ್ರಿಗಳ ಬೆಲೆಗಳು ಪ್ರತಿದಿನ ಪ್ರತಿ ವರ್ಷ ಏರುತ್ತಿವೆ. ಪ್ರತಿವರ್ಷವೂ ಏರಿಕೆ ಯಾವ ಪ್ರಮಾಣದಲ್ಲಿದೆ ಎಂಬುದನ್ನು ಅಂಕಿ ಸಂಖ್ಯೆಗಳು ಹೇಳುತ್ತವೆ. ಮಾನ್ಯ ಸದಸ್ಯರು ಕಾರ್ಮಿಕರನ್ನು ಕುರಿತು ಬಹುವಾಗಿ ಸಹಾನುಭೂತಿ ಹೊಂದಿದ್ದಾರೆ, ನಾನು ಅವರಲ್ಲಿ ಒಬ್ಬ. ಕಳೆದ ಹತ್ತು ವರ್ಷಗಳಲ್ಲಿ ಕೂಲಿ ವಿಪರೀತವಾಗಿ ಏರಿದೆ. ಅನೇಕ ವಲಯಗಳಲ್ಲಿ ಎರಡೋ ಮೂರೋ ಪಟ್ಟು ಹೆಚ್ಚಾಗಿದೆ.

**ಶ್ರೀ ಜ್ಯೋತಿರ್ಮಯ ಬಸು** : ಹಾಗೆಯೇ ಜೀವನ ವೆಚ್ಚವೂ.

**ಶ್ರೀ ಕೆ. ಹನುಮಂತಯ್ಯ** : ಕೂಲಿಯಲ್ಲಿ ಆಗಿರುವ ಈ ಏರಿಕೆಗೆ ನೀವು ಆಕ್ಷೇಪವೆತ್ತುವುದಿಲ್ಲ. ಪ್ರಯಾಣ ದರ ಏರಿಕೆ ಮತ್ತು ಸಾಗಣೆ ಶುಲ್ಕ ಏರಿಕೆಗಳಿಗೆ ನೀವು ಆಕ್ಷೇಪವೆತ್ತುವುದಾದರೆ; ಯಾವ ಕಮ್ಯೂನಿಸ್ಟನು ಬಡ್ಜೆಟ್‌ನ್ನು ಸಮತೋಲನ ಮಾಡಬಲ್ಲನು! ಶ್ರೀ ಜ್ಯೋತಿರ್ಮಯ ಬಸು ಒಬ್ಬ ಅರ್ಥಶಾಸ್ತ್ರಜ್ಞರ ಹೆಸರು ಹೇಳಿದರು. ಗೌರವ ...ಸಗಳ್ಳೊಬ್ಬರಾಗಿರಲಿ, ಅವರು ಹಾಗೆ ಸಲಹೆ ಮಾಡಿದರೆ ಅದನ್ನು ನಾನು ಮಾಡುತ್ತೇನೆ.

**ಶ್ರೀ ಜ್ಯೋತಿರ್ಮಯ ಬಸು** : ಸಂತೋಷವಾಗಿ.

**ಶ್ರೀ ಹನುಮಂತಯ್ಯ** : ವೇತನ ಆಯೋಗದ ಶಿಫಾರಸು ಮತ್ತು ಇತರ ಕಾರಣಗಳಿಂದ ವೇತನವು ಏರುತ್ತಿದ್ದರೂ ಪ್ರಯಾಣ ದರದಲ್ಲಾಗಲಿ ಸರಕೂ ಸಾಗಣೆ ದರದಲ್ಲಾಗಲಿ ಏರಿಕೆ ಅಗತ್ಯವಿಲ್ಲ ಎಂದು ಅವರು ಹೇಳುತ್ತಾರೇನು?

ಸನ್ಮಾನ್ಯ ಸದಸ್ಯರು ವೆಚ್ಚ ಮಾತ್ರವಲ್ಲ, ಆದಾಯದ ವಿಶೇಷ ಹೊಣೆಯನ್ನು ಪರಿಶೀಲಿಸಬೇಕೆಂದು ನಾನು ಬಯಸುತ್ತೇನೆ. ಒಂದು ಇನ್ನೊಂದನ್ನು ಸಮಾನ ನೆಲೆಯಲ್ಲಿ ಸಂಧಿಸಬೇಕು. ಹಾಗಿಲ್ಲದೆ ಹೋದರೆ ರೈಲ್ವೆ ಆಡಳಿತದಂತಹ ದೊಡ್ಡ ಆಡಳಿತವಿರಲಿ. ಚಿಕ್ಕದಾದ ಒಂದು ಕುಟುಂಬವನ್ನು ಕೂಡ ಸರಿಯಾಗಿ ನಿರ್ವಹಿಸಲು ಸಾಧ್ಯವಾಗುವುದಿಲ್ಲ.

**ಸನ್ಮಾನ್ಯ ಸಿ.ಪಿ.ಐ (ಎಂ)** : ಸದಸ್ಯರು ಇರುವ ಬಂಡವಾಳ ಸಾಲಗಳ ಭಾರತೀಯ ಮತ್ತು ವಿದೇಶೀಯ ಇತ್ಯಾದಿಗಳನ್ನು ಕುರಿತು ಉಲ್ಲೇಖಿಸಿದರು, ಶೇಕಡ 6 ರಂತೆ ಡಿವಿಡೆಂಡ್ ಕೊಡುವುದರ ಔಚಿತ್ಯವನ್ನು ಅವರು ಪ್ರಶ್ನಿಸಿದರು. ನಮ್ಮಲ್ಲಿ ಅನೇಕರಿಗೆ ತುಂಬಾ ತೊಡಕಿನ ವಿಷಯವಾದ ಹಣಕಾಸು ವಿಚಾರಗಳಲ್ಲಿ ಆಸಕ್ತಿ ತೋರಿಸುವ ಕೆಲವರು ಸದಸ್ಯರಿದ್ದಾರೆ ಎನ್ನುವುದನ್ನು ಗಮನಿಸಿ ನನಗೆ ತುಂಬಾ ಸಂತೋಷವಾಗುತ್ತದೆ. ಸನ್ಮಾನ್ಯ ಸದಸ್ಯರ ಬಳಿ ಈಗಾಗಲೆ ಈ ಮಾಹಿತಿ ಇದೆ. ಅವರು ಅದನ್ನು ಬೇರೆಯಾಗಿ ಕೇಳಬೇಕಾದ ಅಗತ್ಯವಿರಲಿಲ್ಲ. ಅವರಿಗೆ ಒದಗಿಸಲಾಗಿರುವ ಇಂಡಿಯನ್ ರೈಲ್ವೇಸ್ 1970-71 ಪ್ರಕಟಣೆಯ 66-67ನೇ ಪುಟಗಳನ್ನು ತಿರುವಿ ಹಾಕಿದರೆ ಸಾಕು. ಅವರು ಸೂಚಿಸಿರುವ ಎಲ್ಲಾ ಶೀರ್ಷಿಕೆಗಳ ಮೇಲಿನ ಹೂಡಿಕೆ ಎಷ್ಟೆಂಬುದನ್ನು ಅಲ್ಲಿ ಕೊಟ್ಟಿದೆ. ಸಂಖ್ಯೆಗಳು ಹೀಗಿವೆ : ವಿವಿಧ ಮೂಲಗಳಿಂದ ಹಣ ಹೂಡಲಾಗಿರುವ ವಿವರ 1971 ಮಾರ್ಚ್ 31ಕ್ಕೆ ಅನ್ವಯಿಸಿದಂತೆ ಹೀಗಿದೆ.

| | |
|---|---|
| ಸಾಮಾನ್ಯ ತೆರಿಗೆಗಳಿಂದ ನೀಡಲಾದ ಸಾಲ ಬಂಡವಾಳ | 3,330.78 ಕೋಟಿ |
| ಉಳಿತಾಯ ನಿಧಿಗಳಿಂದ ನೀಡಲಾದ ಸಾಲ ಬಂಡವಾಳ | 223.22 ಕೋಟಿ. |
| ಅಭಿವೃದ್ಧಿ ನಿಧಿಗಳಿಂದ ನೀಡಲಾದ ಸಾಲ ಬಂಡವಾಳ | 365.14 ಕೋಟಿ |
| ಕಂದಾಯ ನಿಧಿಗಳಿಂದ *ನೀಡಲಾದ ಸಾಲ ಬಂಡವಾಳ* | 176.22 ಕೋಟಿ |
| ಉಚಿತವಾಗಿ ಪಡೆದ ಯಂತ್ರೋಪಕರಣಗಳು | 4.43 ಕೋಟಿ. |

ಒಟ್ಟು 4,099.79 ಅಥವಾ ಸ್ಥೂಲವಾಗಿ 4,100.00 ಕೋಟಿ ರೂಪಾಯಿಗಳು. ಅತಿ ಬಂಡವಾಳ ಹೂಡಿಕೆ ಮತ್ತು ಅದರ ಮೇಲೆ ಡಿವಿಡೆಂಡ್ ನೀಡಿಕೆಗಳಿಗೆ ಸಂಬಂಧಿಸಿದಂತೆ ಪಾರ್ಲಿಮೆಂಟು ಅದನ್ನು ರೈಲ್ವೇ ಕನ್ವೆನ್‌ಷನ್ ಕಮಿಟಿಯ ಮೂಲಕವಾಗಿ ಕಾಲ ಕಾಲಕ್ಕೆ ಪರೀಕ್ಷಿಸುತ್ತದೆ. ಈ ಪ್ರಶ್ನೆಯನ್ನು ಆ ಸಮಿತಿಯಲ್ಲಿ ಚರ್ಚಿಸಲಾಗಿದೆ. ಅದರ ಶಿಫಾರಸ್ಸುಗಳನ್ನು ಸದನವು ಅಂಗೀಕರಿಸಿದೆ. ಅವುಗಳ ಪ್ರಕಾರ ಈ ರೀತಿಯ ಹೆಚ್ಚುವರಿ ಬಂಡವಾಳ ಹೂಡಿಕೆಯ ಕಾರಣದಿಂದ ಡಿವಿಡೆಂಡ್ ಕೊಡುವುದನ್ನು ರೈಲ್ವೆಗೆ ಮನ್ನಮಾಡಲಾಗಿದೆ. ಇದನ್ನು ಆಗಲೆ ನನ್ನ ಬಡ್ಜೆಟ್ ಭಾಷಣದ 5ನೇಯ ಪ್ಯಾರಾದಲ್ಲಿ ವಿವರಿಸಿದ್ದೇನೆ.

ಡಿ.ಎಂ.ಕೆ. ಪಕ್ಷದ ಮಾನ್ಯ ಸದಸ್ಯರಾದ ಶ್ರೀ ತಾ. ಕಿರುತ್ತಿನನ್ ಹಲವು ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ನನಗಿರುವ ಮಿತವಾದ ಕಾಲಾವಕಾಶದಲ್ಲಿ ಅವೆಲ್ಲಕ್ಕೂ ಉತ್ತರ ಕೊಡಲಾರೆ. ಆದರೆ ಒಂದೆರಡು ಅಂಶಗಳಿಗೆ ಉತ್ತರಿಸುತ್ತೇನೆ. ಶ್ರೀ ತಾ. ಕಿರುತ್ತಿನನ್ ಅವರಿಗೆ ಲೆಕ್ಕಾಚಾರದಲ್ಲಿ ಯಾವುದೇ ಕೈವಾಡ ನಡೆದಿಲ್ಲ ಎಂದು ಭರವಸೆ ಕೊಡುತ್ತೇನೆ. ಒಂದು ಗೌರವಾನ್ವಿತ ಮಟ್ಟದಲ್ಲಿ ನಡೆಯುತ್ತಿರುವ ಚರ್ಚೆಯಲ್ಲಿ ಅಂತಹ ಪದವನ್ನು ಬಳಸಬಾರದು ಎಂದು ನನಗನ್ನಿಸುತ್ತೆ. ಏಕೆಂದರೆ, ಭಾರತ ಸರ್ಕಾರವು ಕೈವಾಡದ ಆಧಾರದಿಂದ ನಡೆಯುತ್ತಿಲ್ಲ. ನಿಯಂತ್ರಕರು ಆಡಿಟರ್-ಜನರಲ್ ಹಾಗೂ ಫೈನಾನ್ಸಿಯಲ್ ಕಮೀಶನರ್ ಇಂತಹ ಸಾಂವಿಧಾನಿಕ ಅಧಿಕಾರಿಗಳು ಅಂತಹ ಯಾವ ಕೆಲಸ ನಡೆಯಲೂ ಆಸ್ಪದ ಕೊಡುವುದಿಲ್ಲ. ಈ ಬಗೆಯ ಆರೋಪ ಹೊರಿಸುವುದು ಕೇವಲ ಭಾಷಣ ಮಾಡುವ ಅತ್ಯುತ್ಸಾಹವನ್ನು ತೋರಿಸುತ್ತದೆ ಅಷ್ಟೆ.

*(ಲೋಕಸಭೆ ಕಲಾಪ ದಿನಾಂಕ : 20-3-1972)*

## (6) ರೈಲ್ವೆ ಮುಂಗಡ ಪತ್ರ 1975-76

**ಶ್ರೀ ಕೆ. ಹನುಮಂತಯ್ಯ** : ಇನ್ನು ಸಮಯ ಪಾಲನೆಯ ವಿಚಾರ. ಒಮ್ಮೆ ನಾನು ಪಕ್ಷದ ಸಭೆಯಲ್ಲಿ ಪಂಡಿತ್ ಜವಾಹರಲಾಲ್ ನೆಹರು ಅವರೊಂದಿಗೆ ಮಾತನಾಡುತ್ತಾ ಹೇಳಿದೆ: ಒಂದು ದೇಶವು ಸಾರ್ವಜನಿಕ ವಲಯದ ಉದ್ಯಮವಾದ ರೈಲ್ವೆಗಳನ್ನು ಸಾರಿಗೆಯನ್ನು ಓಡಿಸುವ ವಿಷಯದಲ್ಲಿ ಸಮಯ ಪಾಲನೆ ಮಾಡದೆ ಹೋದರೆ ಅದು ಇಡೀ ಸೌಧದ ಅದಕ್ಷತೆಯ ಕುರುಹಾಗುತ್ತದೆ. ರೈಲ್ವೆ ವೇಳಾಪಟ್ಟಿಯನ್ನು ಬಿಗಿಪಡಿಸಿ ಸಮಯವನ್ನು ಪಾಲಿಸದೆ ಹೋದರೆ ನಾವು ಹೆಚ್ಚಿನದನ್ನು ಸಾಧಿಸಲು ಸಾಧ್ಯವಿಲ್ಲ. ನೀವು ವೈಜ್ಞಾನಿಕ ಮನೋಧರ್ಮದ ವ್ಯಕ್ತಿ. ಇಡೀ ವಿಶ್ವವೇ ಕಾಲಾನುಸಾರ ಭ್ರಮಿಸುತ್ತಿದೆ. ಸೂರ್ಯೋದಯವಾಗಲಿ ಸೂರ್ಯಾಸ್ತವಾಗಲಿ ಋತುಗಳು ಬಂದು ಹೋಗುವುದಾಗಲಿ ಕಾಲಕ್ಕೆ ಅನುಗುಣವಾಗಿಯೇ. ನಿಜವಾದ ಶ್ರದ್ಧೆಯು ನಿಸರ್ಗ ನಿಯಮಗಳಿಗೆ ಹೊಂದಿಕೊಂಡಿರಬೇಕು. ಆದ್ದರಿಂದ ಸಮಯ ಪಾಲನೆ ಒಂದು ಬಗ್ಗೆಯ ಪೂಜೆ. ಈ ದೃಷ್ಟಿಯಿಂದ ಪರಿಭಾವಿಸಿ ಪ್ಯಾಸೆಂಜರ್ ಹಾಗೂ ಸರಕು ಸಾಗಣಿಕೆ ರೈಲುಗಳು ಸಮಯವನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಮಾಡಬೇಕು.

ಪಂಚಶೀಲದ ಎರಡನೆಯ ಅಂಶ, ರೈಲುಗಳನ್ನು ತರ್ಕಯುತವಾಗಿ ಹೊಂದಾಣಿಕೆಗೊಳಿಸುವುದು. ಮೀಟರ್‌ಗೇಜ್ ನಿರ್ಮಾಣವನ್ನು ನಿಲ್ಲಿಸಿ ಪ್ರತಿಯೊಂದು ಹೊಸಮಾರ್ಗವನ್ನು ಬ್ರಾಡ್‌ಗೇಜ್‌ನಲ್ಲಿ ನಿರ್ಮಿಸುವುದನ್ನು ಈ ಪಾರ್ಲಿಮೆಂಟ್ ಅನುಮೋದಿಸಿತು. ಆದರೆ ಅದನ್ನು ಬದಿಗೆ ಸರಿಸಲಾಗಿದೆ. ಆ ವಿಷಯವಾಗಿ ನಾನು ವಾದ ಮಾಡಬೇಕಾಗಿಲ್ಲ. ಸಮಸ್ಯೆಯನ್ನು ಅಧ್ಯಯನ ಮಾಡಿರುವ ಪ್ರತಿಯೊಬ್ಬ ವ್ಯಕ್ತಿಗೂ ಮೀಟರ್‌ಗೇಜಿಗಿಂತ ಬ್ರಾಡ್‌ಗೇಜ್ ಹಾಕುವುದು ಅಂತಿಮವಾಗಿ ಹೆಚ್ಚು ಉಳಿತಾಯವಾಗುತ್ತದೆ. ಎಂದು ಅರ್ಥವಾಗುತ್ತದೆ. ಆಗ ನಾನು ಇನ್ನೊಂದು ನೀತಿಯನ್ನು ರೂಪಿಸಿದೆ ಇಲ್ಲಿರುವ ಅನೇಕ ಸದಸ್ಯರು ನೂತನ ಮಾರ್ಗಗಳನ್ನು ಬಯಸಿದರು. ಅದನ್ನು ಇನ್ನೊಂದು ವಿಧವಾಗಿ ಮಾಡಬಹುದು. ಮದರಾಸಿನಿಂದ ದೆಹಲಿಗೆ ಎರಡು, ಮೂರು ಮಾರ್ಗಗಳನ್ನು ಜೋಡಿಸಲಾಗಿದೆ. ನಾನು ಕೇಳಿದೆ, ಈ ಸುತ್ತು ಬಳಸಿದ ಮದರಾಸ್ - ದೆಹಲಿ ಮಾರ್ಗವನ್ನು ಎರಡು, ಮೂರು ಮಾರ್ಗಗಳಾಗಿ ಹೆಚ್ಚಿಸಬೇಕು ಏಕೆ? ಅದಕ್ಕೆ ಬದಲು ಹೈದರಾಬಾದ್ ಮೊದಲಾದ ಸ್ಥಳಗಳ ಮೂಲಕ ಹಾದು ಹೋಗುವ ಹೊಸ ಮಾರ್ಗಗಳನ್ನು ಹಾಕಬಹುದು. ಆದರಿಂದ ವೆಚ್ಚ ಸ್ವಲ್ಪ ಅಧಿಕವಾಗಬಹುದು. ಆದರೆ ಅದರಿಂದ ನೂತನ ರೈಲು ಮಾರ್ಗಗಳನ್ನು

ಒದಗಿಸಿದಂತಾಗುವುದಲ್ಲದೆ ಪ್ರತಿಯೊಂದು ರಾಜ್ಯಕ್ಕೂ ನ್ಯಾಯುವನ್ನು ದೊರಕಿಸಿದಂತಾಗುತ್ತದೆ. ಆದರೆ ಕುರುಡು ಕುರುಡಾಗಿ, ಮಾಮೂಲು ವಿಧಾನದಲ್ಲಿ ನಮ್ಮ ದೇಶದಲ್ಲಿ ಮಹತ್ವದ ಹಾಗೂ ವಿಶಾಲವಾದ ಪ್ರದೇಶಗಳನ್ನು ಅಲಕ್ಷಿಸಿ ಇರುವ ಮಾರ್ಗವನ್ನೇ ಎರಡಾಗಿ, ಮೂರಾಗಿ ಹೆಚ್ಚಿಸುತ್ತಾ ಹೋಗುತ್ತಿದ್ದಾರೆ.

**ಶ್ರೀ ಆರ್. ಎಸ್. ಪಾಂಡೆ** : ವಿಶೇಷವಾಗಿ ಹಿಂದುಳಿದ ಪ್ರದೇಶಗಳು.

**ಶ್ರೀ ಕೆ. ಹನುಮಂತಯ್ಯ** : ಹೌದು, ಇಲ್ಲಿ ನಾನು ನಿಮಗೆ ಹೇಳುತ್ತಿದ್ದೇನೆ. ರೈಲ್ವೆ ಮಂಡಳಿಯು ಅದನ್ನು ಒಪ್ಪುತ್ತಿಲ್ಲ. ಅವರು ತಮ್ಮ ಬೇರೆಯೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ನೀವು ದೃಢವಾದ ನಿರ್ಣಯವನ್ನು ಕೈಗೊಂಡು, ಇದು ಸರಕಾರದ ನೀತಿ ಎಂದು ಖಚಿತವಾಗಿ ಹೇಳಿದರೆ ಅವರು ಅದನ್ನು ಹೇಗೆ ವಿರೋದಿಸಿಯಾರು? ಕಾರ್ಯಗತಗೊಳಿಸದೆ ಇದ್ದಾರು? ಈಗ ನಿರ್ಣಯ ಕೈಗೊಳ್ಳಬೇಕಾದವರು ನೀವು. ದಕ್ಷಿಣದಲ್ಲಿ ನಿರ್ಮಾಣದಲ್ಲಿರುವ ಮಾರ್ಗಗಳಿಗೆ ಸಂಬಂಧಿಸಿದಂತೆ ಅವು ಕೇರಳದಲ್ಲಿರಲಿ, ಆಂಧ್ರದಲ್ಲಿರಲಿ, ಕರ್ನಾಟಕದಲ್ಲಿರಲಿ, ಸಿಬ್ಬಂದಿಯ ವೇತನವನ್ನು ಮಾತ್ರ ಅವರು ಕೊಡುತ್ತಿದ್ದಾರೆ. ಯಾವ ಕೆಲಸವನ್ನು ಮಾಡಲೂ ಅವರು ಸಮರ್ಥವಾಗಿಲ್ಲ. ನನ್ನ ಒಂದು ಪ್ರಶ್ನೆಗೆ ನೀವು ಸ್ಪಷ್ಟವಾಗಿ ಉತ್ತರ ನೀಡಬೇಕು. ಈ 6 ಕೋಟಿ ರೂಪಾಯಿಗಳನ್ನು ಬಿಹಾರದಲ್ಲಿನ ಮಾರ್ಗಗಳಿಗೆ ತಿರುಗಿಸಿರುವುದು ಸರಿಯೇ? ಇದನ್ನು ನಿಮ್ಮನ್ನು ಅನುಸರಿಸುವ ಒಬ್ಬನಾಗಿ ಹೇಳುತ್ತಿಲ್ಲ. ಇದು ದಕ್ಷಿಣ ಭಾರತದಲ್ಲಿ ಚುನಾವಣೆಯ ಒಂದು ವಿಷಯವಾಗಲಿದೆ. ದಯವಿಟ್ಟು ಇದನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು. ವ್ಯಕ್ತಿಯು ತಾನು ಉದಾರಿಯೆಂದು ತೋರಿಸಿಕೊಳ್ಳುವುದಕ್ಕಿಂತ ಮೊದಲು ನ್ಯಾಯಯುತವಾಗಿರಬೇಕು. ಮಂಜೂರಾಗಿರುವ ಹಣವನ್ನು ಹೀಗೆ ಒಂದು ಕಡೆಗೆ ತಿರುಗಿಸಿ, ಈ ಎಲ್ಲಾ ಸ್ಥಳಗಳಲ್ಲೂ ಕೆಲಸವು ನಿಲ್ಲುವಂತೆ ಮಾಡುವುದು ತುಂಬಾ ಅನ್ಯಾಯ, ಇದು ದೇಶಪ್ರೇಮ ವಿರೋಧವಾದದ್ದು. ವಾಸ್ತವವಾಗಿ ತನ್ನನ್ನು ಸಮರ್ಥಿಸಿಕೊಳ್ಳಲು ವ್ಯಕ್ತಿಯೂ ಇಲ್ಲದಾಗ ಆತನನ್ನು ನಿಂದಿಸುವುದರಿಂದ ಪ್ರಯೋಜನವಿಲ್ಲ. ಅನೇಕ ಅಕ್ರಮಗಳು ನಡೆದುಹೋದವು. ನಾನು ಸುಮ್ಮನಿದ್ದುಬಿಟ್ಟೆ. ಏಕೆಂದರೆ, ಈ ಮಾನವ ಯತ್ನಗಳಲ್ಲೆಲ್ಲಾ ವಿಧಿಯ ಹಸ್ತವೆನ್ನುವುದೂ ಇದೆ. ಭಾರತಾದ್ಯಂತ ಗೌರವಕ್ಕೆ ಪಾತ್ರವಾಗಿರುವ ಕಾಳಿಯಿಂದ ಬಂದ ವ್ಯಕ್ತಿ ಒಂದು ಪ್ರಾಂತೀಯ ರೈಲು ಮಾರ್ಗವನ್ನು ಹಿಡಿಯದೆ ತನ್ನ ರಾಜ್ಯ ಮತ್ತು ತನ್ನ ಮತಕ್ಷೇತ್ರವನ್ನು ಕುರಿತು ಯೋಚಿಸಿದೆ. ಇಡೀ ಭಾರತವನ್ನು ಕುರಿತು ಅವನು ಆಲೋಚಿಸಬೇಕು. ನಾನು ಪ್ರಾರಂಬಮಾಡಿದ ರೈಲು ಮಾರ್ಗವನ್ನು ರಾಮೇಶ್ವರಂದಿಂದ ದೆಹಲಿಗೆ ನೇರ ಮಾರ್ಗವನ್ನು

ಪಟ್ಟು ಹಿಡಿದು ನೀವು ಮುಗಿಸಬೇಕು. ಉತ್ತರ ಪ್ರದೇಶ ಮತ್ತು ಬಿಹಾರಗಳಲ್ಲಿ ವಾಣಿಜ್ಯೋದ್ದೇಶಗಳಿಗಾಗಿ ಕೆಲವು ಮಾರ್ಗಗಳನ್ನು ಪೂರೈಸಬೇಕಾಗಿದ್ದರೆ, ಆಗಬಹುದು, ನನ್ನದೇನೂ ಅಭ್ಯಂತರವಿಲ್ಲ. ಅವುಗಳನ್ನು ಕೈಗೆತ್ತಿಕೊಳ್ಳುವುದಿದ್ದರೆ ಸರಿ, ಕೈಗೆತ್ತಿಕೊಂಡು ನಿರ್ವಹಿಸಲಿ.

**ಶ್ರೀ ನರಸಿಂಗ ನಾರಾಯಣ ಪಾಂಡೇ** : ಶ್ರೀ ಹನುಮಂತಯ್ಯನವರು ರೈಲ್ವೆ ಸಚಿವರಾಗಿದ್ದಾಗ ಕೆಲವು ಮಾರ್ಗಗಳು ತಾಂತ್ರಿಕ ಸರ್ವೇಕ್ಷಣಾ ವರದಿಗಳು ಸಂಪೂರ್ಣವಾದವು, ರೈಲ್ವೆ ಮಂಡಳಿಯಿಂದ ಸ್ವೀಕೃತವಾದವು. ಉತ್ತರ ಭಾರತದ ಎಷ್ಟೋ ಮಾರ್ಗಗಳಿಗೆ ಸಂಬಂಧಿಸಿದ ಅಂತಹ ತಾಂತ್ರಿಕ ಸಮೀಕ್ಷಾ ವರದಿಗಳು ರೈಲ್ವೆ ಮಂಡಳಿಯನ್ನು ಸೇರಿ ಅಲ್ಲಿ ಕುಳಿತಿವೆ, ಕಾರ್ಯಗತಗೊಂಡಿಲ್ಲ ಎಂಬುದನ್ನು ನಾನು ಹಲವು ಸಂದರ್ಭಗಳಲ್ಲಿ ಅವರ ಗಮನಕ್ಕೆ ತಂದಿದ್ದೇನೆ. ಅವುಗಳ ಬಗೆಗೆ ಅವರು ಏನು ಮಾಡಿದರು? ಅವರು ಹೇಳುತ್ತಿರುವ ಮಾತುಗಳಿಗೆ ಉತ್ತರ ಕೊಡಲು ಶ್ರೀ ಎಲ್.ಎಸ್. ಮಿಶ್ರಾ ಅವರು ಇಲ್ಲಿ ಇಲ್ಲದಾಗ? ಶ್ರೀ ಹನುಮಂತಯ್ಯ ನವರಂತಹ ಹಿರಿಯ ಸದಸ್ಯರು ಹೀಗೆ ಆರೋಪದ ಮಾತುಗಳನ್ನು ಆಡುವುದು ಖಂಡಿತವಾಗಿಯೂ ಉಚಿತವಲ್ಲ.

ಮಾರ್ಗವನ್ನು ಕುರಿತ ತಾಂತ್ರಿಕ ಸರ್ವೇ ವರದಿಯು ಮುಂದೂಡಲ್ಪಟ್ಟದ್ದು ನಿಜವೇ ಅಲ್ಲವೆ ಎಂದು ನಾನು ತಿಳಿದುಕೊಳ್ಳಬಯಸುತ್ತೇನೆ. ಅದನ್ನೇಕೆ ಪ್ರಾರಂಭಿಸಲಿಲ್ಲ. ಅದಕ್ಕೆ ಬದಲಾಗಿ ತಾಂತ್ರಿಕ ಸಮೀಕ್ಷೆಯನ್ನೇ ಪ್ರಾರಂಭ ಮಾಡಿರದ ಒಂದು ಮಾರ್ಗವನ್ನು ಅವರ ಕಾಲದಲ್ಲಿ ಏಕೆ ಕೈಗೆತ್ತಿಕೊಳ್ಳಲಾಯಿತು? ಅವರು ಆಡಿರುವ ಮಾತುಗಳನ್ನು ಅತ್ಯಂತ ಕಟುವಾಗಿ ಪ್ರತಿಭಟಿಸುತ್ತೇನೆ.

**ಶ್ರೀ ಕೆ. ಹನುಮಂತಯ್ಯ** : ನನ್ನ ಸನ್ಮಿತ್ರರು ಹಿಂದಿನ ಸಚಿವರನ್ನು ಸಮರ್ಥಿಸಿಕೊಂಡದ್ದರಿಂದ ನನಗೆ ತುಂಬಾ ಸಂತೋಷವಾಗಿದೆ. ಇದು ಅವರಿಗೆ ಸಂದ ಗೌರವ. ನಾನು ಒಂದು ಅಭಿಪ್ರಾಯವನ್ನು ವ್ಯಕ್ತಪಡಿಸಿ, ಅದರಿಂದ ಹಿಂದಿನ ರೈಲ್ವೆ ಸಚಿವರನ್ನು ನಿಂದಿಸಲಾಗುತ್ತಿದೆ ಎಂದು ಅವರು ಭಾವಿಸಿದರೆ, ಅವರು ಹೇಳುವುದು ಸರಿಯಾಗಿದ್ದರೆ, ಅದನ್ನು ಅಷ್ಟಕ್ಕೆ ಬಿಡೋಣ.

ಅವರು ಉಲ್ಲೇಖಿಸಿರುವ ರೈಲ್ವೆ ಮಾರ್ಗಗಳಿಗೆ ಸಂಬಂಧಿಸಿದಂತೆ ಹಿರಿಯ ಸಚಿವರು, ರಾಜ್ಯ ಸಚಿವರು, ಆ ಕಡತಗಳನ್ನು ತರಿಸುವಂತೆ ಕೋರುತ್ತೇನೆ. ನಾನು ಅವರೊಂದಿಗೆ ಕುಳಿತುಕೊಳ್ಳುತ್ತೇನೆ. ನಾನೇನಾದರೂ ತಪ್ಪು ಮಾಡಿದ್ದೇನೆಂದರೆ ಅವರು ಆ ಕಡತಗಳಲ್ಲಿ ಕಂಡರೆ ನಾನು ಅವರ ಕ್ಷಮೆಯಾಚಿಸುತ್ತೇನೆ. ನನಗೆ ಪಕ್ಷ ಪಾತದ ಆಧಾರದಿಂದ ಕೆಲಸ ಮಾಡುವ ಶಕ್ತಿಯಿಲ್ಲ. ನಾನು ಯಾವುದೇ ನಿರ್ಣಯಗಳನ್ನು ಕೈಗೊಂಡಿದ್ದರೂ ಅವು ಅನಂತರದ ಆಲೋಚನೆಗಳಲ್ಲ ಅವು ಫೈಲುಗಳಲ್ಲಿ ದಾಖಲಾಗಿವೆ. ಅವರಿಗೆ ನಾನು ಅದನ್ನು ತೋರಿಸುತ್ತೇನೆ. ಸಚಿವರು ಅಪೇಕ್ಷಿಪಟ್ಟರೆ, ಉತ್ತರ ಭಾರತದಲ್ಲಿ ಮಂಜೂರು ಮಾಡುತ್ತಿರುವ ಹೊಸ ಮಾರ್ಗಗಳನ್ನೂ ನೋಡಲಿ. ಪ್ರತಿಯೊಂದು ಕಡತವನ್ನು ವಿವರವಾಗಿ ಪರೀಕ್ಷಿಸಲಿ. ಸನ್ಮಾನ್ಯೆಯರಾದ ಸಿ.ಪಿ.ಐ. ಸದಸ್ಯೆ ರೈಲುಗಳನ್ನು ವಾಣಿಜ್ಯ ದೃಷ್ಟಿಯಿಂದ ಓಡಿಸತಕ್ಕದ್ದು ಎಂದು ಹೇಳಿದರು. ಶಿಫಾರಸ್ಸನ್ನು ಮಾಡಿದ್ದು ಕುಂಜ್ರ ಅಧ್ಯಯನ ತಂಡ, ರೈಲ್ವೆ ಮಂಡಳಿಯು ನಿರ್ಣಯ ಕೈಗೊಂಡದ್ದು ಆಧಾರದ ಮೇಲೆ. ರೈಲ್ವೆ ಲಾಭದಾಯಕವಾಗಿರಬೇಕು ಎಂದು ಶ್ರೀ ಪಾಂಡೆ ಅವರು ತಾವು ಸೂಚಿಸಿರುವ ರೈಲುಮಾರ್ಗ ಎಷ್ಟು ಮಟ್ಟಿಗೆ ವಾಣಿಜ್ಯ ದೃಷ್ಟಿಯಿಂದ ಸೂಕ್ತವಾಗಿದೆ ಎಂಬುದನ್ನು ಪರಿಶೀಲಿಸಬೇಕೆಂದು ಬಯಸುತ್ತೇನೆ.

*(ಲೋಕ ಸಭೆ ಕಲಾಪ ದಿನಾಂಕ : 05-03-1975)*

# (I) ತುಣುಕು-ಮಿಣುಕು

## ಸಮಯ ನಿಗದಿ

ಸ್ವಾಮಿ ಈ ದಿನ ಮಾತನಾಡುವವರಿಗೆ 15 ನಿಮಿಷ, ನಾಳೆ ಮಾತನಾಡುವವರಿಗೆ 10 ನಿಮಿಷ ಎಂದರೆ ಈ ದಿನ ಮಾತನಾಡುವವರೆಲ್ಲರೂ ಮುಖ್ಯವಾದವರೆಂತಲೂ ನಾಳೆ ಮಾತನಾಡುವವರೆಲ್ಲರ ಅಷ್ಟು ಪ್ರಾಮುಖ್ಯರಲ್ಲವೆಂತಲೂ ಅರ್ಥವಾಗುತ್ತದೆ.

*(ಪ್ರಜಾಪ್ರತಿನಿಧಿ ಸಭೆ ನಡೆವಳಿಕೆಗಳು ಜೂನ್, 1942)*

## ಕನ್ನಡಕದ ಪ್ರಸ್ತಾಪ

ಈ ದಿನ ಅಧ್ಯಕ್ಷತೆಯನ್ನು ವಹಿಸಿರುವ ವಿದ್ಯಾ ಮಂತ್ರಿಗಳು ನಾನು ಬೇರೊಂದು ಸಂಸ್ಥೆಯ ಗದ್ದುಗೆಯ ಮೇಲೆ ಇದ್ದಾಗ ನನಗೆ ಬಹಳ ಸಹಕಾರವನ್ನು ನೀಡಿದ್ದಾರೆ. ಈ ದಿನ ಅವರು ಗುದ್ದುಗೆಯ ಮೇಲೆ ಇರುವ ಸಂದರ್ಭದಲ್ಲಿ ಅವರಿಗೆ ಸಹಕಾರ ನೀಡಬೇಕೆಂಬ ಕುತೂಹಲವಿದೆ. ಯಾವಾಗಲೂ ಹಾಸ್ಯದ ಬುಗ್ಗೆಯಾಗಿದ್ದ ವಿದ್ಯಾ ಮಂತ್ರಿಗಳ ಮುಖವು ಈ ಸಭೆಯು ಪ್ರಾರಂಭವಾದ ದಿನದಿಂದಲೂ ನೋಡುತ್ತಿದ್ದೇನೆ, ಕೋಪದಿಂದ ಕುದಿಯುತ್ತಿದೆ.

**ಉಪಾಧ್ಯಕ್ಷರು** : (ಡಾ. ಟಿ. ಸಿ. ಎಂ. ರಾಮನ್‌ರವರು) ತಾವು ದಯವಿಟ್ಟು ಕನ್ನಡಕವನ್ನು ಬದಲಾಯಿಸಬೇಕು.

**ಶ್ರೀ ಕೆ. ಹನುಮಂತಯ್ಯನವರು** : ನೀವೂ ಕನ್ನಡಕವನ್ನು ಬದಲಾಯಿಸಬೇಕು ಏಕೆಂದರೆ ನಾನು ಯಾವಾಗಲೂ ಕನ್ನಡಕವನ್ನು ಉಪಯೋಗಿಸುವುದಿಲ್ಲ.

**ಉಪಾಧ್ಯಕ್ಷರು** : (ಡಾ. ಟಿ. ಸಿ. ಎಂ. ರಾಮನ್‌ರವರು) ಹಾಗಾದರೆ ನೀವು ಕಣ್ಣು ಆಸ್ಪತ್ರೆಗೆ ಹೋಗಬೇಕು.

**ಶ್ರೀ ಕೆ. ಹನುಮಂತಯ್ಯನವರು** : 'ಲಾ' ಮಂತ್ರಿಗಳೂ ಕೂಡ (ಇಷ್ಟು ಹೊತ್ತಿಗೆ ಲಾ ಮಂತ್ರಿಗಳು ಸಭೆಯಿಂದ ಹೊರಗೆ ಹೋದರು). ಸಭೆಯಲ್ಲಿ ನಗು..

*(ಪ್ರಜಾ ಪ್ರತಿನಿಧಿ ಸಭೆ ನಡೆವಳಿಕೆಗಳು : 6-6-1946)*

## ಲಂಚಕೋರತನ ಕುರಿತು

ನೆನ್ನೆಯ ದಿನ ಲಂಚಕೋರತನದ ವಿಷಯವಾಗಿ ಚರ್ಚೆಯಾಯಿತು. ಅದಕ್ಕೆ ರೆವಿನ್ಯೂ ಸಚಿವರು, ಜನರು ಏಕೆ ಲಂಚ ಕೊಡಬೇಕು, ಎಂದು ಹೇಳಿದರು. ಈ ಪ್ರಶ್ನೆ ಈ ದೇಶದಲ್ಲೇ ಅಲ್ಲ ನಾನಾ ದೇಶಗಳಲ್ಲಿ ಚರ್ಚೆಯಾಗಿದೆ. ಇದಕ್ಕೆ ಅಪಟನ್ ಸಿಂಕ್ಲೇರ್‌ರವರು ಈ ರೀತಿ ಹೇಳಿದ್ದಾರೆ : ``Who is to blame? He who offers bribe out of need or he who takes it out of greed?`` ಇದರ ಅರ್ಥವನ್ನು ತಮ್ಮ ಮನಸ್ಸಿನಲ್ಲಿಟ್ಟುಕೊಂಡಿಲ್ಲವೆಂದು ಕಾಣುತ್ತದೆ. ಏನೋ ಸಂಕಟದಿಂದ ಲಂಚವನ್ನು ಕೊಡತಕ್ಕವನದು ತಪ್ಪೋ ಅಥವಾ ಜೇಬು ತುಂಬಿಸಿಕೊಳ್ಳಲು ದುರಾಶೆಯಿಂದ ಲಂಚ ತೆಗೆದುಕೊಳ್ಳುವವನು ತಪ್ಪೋ. ತಾವು ಲಂಚದ ವಿಷಯದಲ್ಲಿ ಈ ರೀತಿ ತಾತ್ಸಾರದಿಂದ ಜನರದೇ ತಪ್ಪೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾದರೆ ಲಂಚಕೋರ ನೌಕರರಲ್ಲಿರುವ ಮನೋಭಾವಕ್ಕೆ ಉತ್ತೇಜನಕೊಟ್ಟಂತಾಗುತ್ತದೆ. ಮೊದಲೇ ತೂಕಡಿಸುವವನಿಗೆ ಹಾಸಿಗೆ ಹಾಕಿಕೊಟ್ಟ ಹಾಗಾಗುತ್ತದೆ. ಲಂಚಕೋರತನ ಬೆಳೆಯುವುದಕ್ಕೆ ಅವಕಾಶವಾಗುತ್ತದೆ. ಲಂಚವನ್ನು ನಿರ್ಮೂಲ ಮಾಡುವುದಕ್ಕಾಗುವುದಿಲ್ಲವೆಂಬ ನಿರಾಸೆ ಹುಟ್ಟುವುದಕ್ಕೆ ಕಾರಣವಾಗುತ್ತದೆ. ಅದನ್ನು ನಿರ್ಮೂಲ ಮಾಡಬೇಕೆಂಬ ಶ್ರದ್ಧೆ ನಿಮ್ಮಲ್ಲಿ ಉತ್ಪತ್ತಿಯಾಗಬೇಕು. ಉದಾಸೀನ ಭಾವ ತೋರಿಸಕೂಡದು. ಇದಕ್ಕೆ ಏನು ಕಾರ್ಯ ಕ್ರಮ ತೆಗೆದುಕೊಳ್ಳಬೇಕೋ ಅದನ್ನು ಜಾಗ್ರತೆ ತೆಗೆದುಕೊಳ್ಳಬೇಕು. ಮನುಷ್ಯನ ಬುದ್ಧಿ ಬಹಳ ಚುರುಕು. ಎಂಥಾ ನಿಯಮ ನಿಬಂಧನೆಗಳನ್ನು ಮಾಡಿದರೂ ಆತನು ಅದರಲ್ಲಿ ತೂತು ಹುಡುಕುವುದಕ್ಕೆ ಪ್ರಯತ್ನ ಮಾಡುತ್ತಾನೆ. ಇದು ಬರಿಯ ನಿಯಮಗಳಿಂದ ಅಥವಾ ಉನ್ನತ ಅಧಿಕಾರಿಯೊಬ್ಬನಿಂದ ಆಗತಕ್ಕ ಕೆಲಸವಲ್ಲ. ಯಾರು ಸರ್ಕಾರದ ಜವಾಬ್ದಾರಿಯನ್ನು ವಹಿಸಿ ಮಂತ್ರಿ ಮಂಡಲದಲ್ಲಿ ಸ್ಥಾನವನ್ನು ವಹಿಸಿದ್ದಾರೋ ಅವರಿಗೆ ನೌಕರರಿಗೆ ನಿಷ್ಠವಾದ ಭಕ್ತಿ ಶ್ರದ್ಧೆಗಳು ಹುಟ್ಟಬೇಕು. ಮಂತ್ರಿಗಳು ಪ್ರಜಾ ನಾಯಕರಾದರೆ, ಅವರ ಮಾತು ಮನ್ನಣೆಗರ್ಹವಾಗುತ್ತದೆ. ದೇಶ ದೇಶವೇ ಅಂಥ ಮಂತ್ರಿಮಂಡಲದ ಮಾತುಗಳನ್ನು ಕೇಳಿ ಅದರ ಕಾರ್ಯಕ್ರಮಗಳಲ್ಲಿ ಭಾಗಿಯಾಗಿ ಇಂಥ ಲೋಪಗಳನ್ನು ತೊಡೆದು ಹಾಕುತ್ತದೆ. ಅದುವರೆಗೆ ಈ ಲಂಚಕೋರತನ ನಿರ್ಮೂಲವಾಗುವುದಿಲ್ಲ. ಈಗ ಅಧಿಕಾರಿಗಳೂ ನನಗೇಕೆ ಈ ಜವಾಬ್ದಾರಿ, ನನಗೆ ತೊಂದರೆ ಬಾರದೆ ಇದ್ದರೆ ಸಾಕು. ನಾನು ಇಕ್ಕಟ್ಟಿಗೆ ಸಿಕ್ಕದಿದ್ದರೆ ಸಾಕು ಎಂಬ ಮನೋಭಾವದಿಂದ ಕೆಲಸ ಮಾಡುತ್ತಾರೆ. ನನಗೆ ತೊಂದರೆಯಾದರೂ ಚಿಂತೆಯಿಲ್ಲ, ಜನರಿಗೆ ಉಪಕಾರವಾಗಬೇಕು ಎಂಬ ಮನೋಭಾವ ಅವರಲ್ಲಿಲ್ಲ.

(ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು ದಿನಾಂಕ : 6-6-1946)

## ಅಲ್ಪಸಂಖ್ಯಾತ ಪಂಗಡ

ಇತ್ತೀಚೆಗೆ ರಾಜಕೀಯದಲ್ಲಿ ಅಲ್ಪಸಂಖ್ಯಾತ ಪಂಗಡದವರನ್ನು ಬಹುಸಂಖ್ಯಾತ ಪಂಗಡದವರು ತುಳಿಯುತ್ತಿದ್ದಾರೆಂದು ವಾದ ಹೂಡುತ್ತಿದ್ದಾರೆ. ಇದು ನಿಜವಲ್ಲ. ಈ ವಾದದಲ್ಲಿ ತಿರುಳೂ ಇಲ್ಲ. ಕೆಲವು ವ್ಯಕ್ತಿಗಳು ತಮ್ಮ ಸ್ವಂತಕ್ಕಾಗಿ ಇಂತಹ ವಾದಗಳನ್ನು ತಂದೊಡ್ಡಿ ತಮ್ಮ ಸ್ವಂತ ಹಿತವನ್ನು ಸಾಧನೆ ಮಾಡಿಕೊಳ್ಳುತ್ತಿದ್ದಾರೆ. ಆದುದರಿಂದ ಈ ಸಭೆಯವರು ಉನ್ನತ ದೃಷ್ಟಿಯಿಂದ ಕ್ಯುಮುಲೇಟಿವ್ ಓಟಿನ ಸಾಧಕಬಾಧಕವನ್ನು ನೋಡಬೇಕಾಗಿದೆ. ಕೋಮುವಾರು ಭಾವನೆಯಿಂದ ನಿಜವಾಗಿಯೂ ಪುರೋಭಿವೃದ್ಧಿಯಾಗುವುದಿಲ್ಲ. ಅನೇಕ ಸದಸ್ಯರಿಗೆ ಕಾಂಗ್ರೆಸ್ಸಿನವರನ್ನು ಎದುರಿಸಿ ಜಯಶಾಲಿಗಳಾಗಿ ಬರುತ್ತೇವೆಂಬ ಧೈರ್ಯವಿರುವಾಗ ಕ್ಯುಮುಲೇಟಿವ್ ಇಲ್ಲದಿದ್ದರೂ ಚುನಾಯಿತರಾಗಿ ಬರುತ್ತೇವೆಂಬ ಧೈರ್ಯವಿರಬೇಡವೇ? ಈ ಓಟಿನ ಪದ್ಧತಿಯ ಊರುಗೋಲನ್ನು ನಿಮ್ಮಂಥ ಪ್ರಜಾನುರಾಗಿಗಳು ಬಯಸಬಾರದು. ಈ ಪದ್ಧತಿಯಿಂದ ಮೊದಲೇ ಛಿದ್ರವಾಗಿರುವ ಹಿಂದೂ ಸಮಾಜವನ್ನು ಇನ್ನೂ ಛಿದ್ರ ಮಾಡುವುದು ಬೇಡ.

ಈ ಸಂದರ್ಭದಲ್ಲಿ ಸರ್ಕಾರದವರಲ್ಲಿ ಒಂದು ಪ್ರಾರ್ಥನೆ. ನಮ್ಮ ಶ್ರೀಮಾನ್ ಮಹಾರಾಜರವರು ಉದಾರ ಹೃದಯದಿಂದ ಜವಾಬ್ದಾರಿ ಸರ್ಕಾರವನ್ನು ಸ್ಥಾಪನೆ ಮಾಡಲಿಕ್ಕೆ ಯುಳ್ಳವಾರಾಗಿದ್ದಾರೆ. ಆ ಜವಾಬ್ದಾರಿ ಸರ್ಕಾರವು ನಡೆಯಲು ಸರಿಯಾದ ಸನ್ನಿವೇಶಬೇಕು. ಕೋಮುವಾರು ಭಾವನೆ ಓಟಿನ ಪದ್ಧತಿಯಲ್ಲಿ ಮನೆಮಾಡಿಕೊಂಡರೆ ವಾತಾವರಣವು ವಿಷಮಯವಾಗುತ್ತದೆ. ಆದ್ದರಿಂದ ಜವಾಬ್ದಾರಿ ಸರ್ಕಾರವು ಯಶಸ್ವಿಯಾಗುವುದಿಲ್ಲ. ಕ್ಯುಮ್ಯುಲೇಟಿವ್ ಪದ್ಧತಿ ಪ್ರತ್ಯೇಕ ಚುನಾವಣಾ ಪದ್ಧತಿ ಇವುಗಳು ಹೋದ ಹೊರತು ದೇಶಕ್ಕೆ ಕ್ಷೇಮವಿಲ್ಲ. ಅದರಲ್ಲಿಯೂ ಜವಾಬ್ದಾರಿ ಸರ್ಕಾರದಲ್ಲಿ ಇಂತಹವು ಇದುದ್ದೇ ಆದರೆ ಆ ಸರ್ಕಾರ ಯಶಸ್ವಿಯಾಗುವುದೇ ಇಲ್ಲ. ಅದು ವಿಫಲವಾಗುತ್ತದೆ.

ಪ್ರಜಾಪ್ರಭುತ್ವದ ಅಧಿಕಾರದಲ್ಲಿ ಪ್ರಜೆಗಳಿಗೆ ಒಳ್ಳೆಯದು ಆಗಬೇಕು. ಆ ಪರಿಸ್ಥಿತಿ ನಮಗೆ ಬರಲಿ. ದೇಶವನ್ನು ಒಗ್ಗಟ್ಟು ಮಾಡಬೇಕೆಂದು ಹೊರಟಿರುವ ಈ ಸಮಯದಲ್ಲಿ ಈ ರೀತಿಯ ಭೇದವನ್ನು ಕಲ್ಪಿಸಬೇಡಿ. ಈಗ ನಮಗೆ ಬೇಕಿರುವ ಚುನಾವಣಾ ಪದ್ಧತಿ ಇಂಗ್ಲೆಂಡ್ ದೇಶದಲ್ಲಿರುವ ಪದ್ಧತಿ. ಈ ನಿರ್ಣಯದಲ್ಲಿರುವ ನೀತಿ ಅದಕ್ಕೆ ವಿರುದ್ಧವಾದುದರಿಂದ ಈ ಸಭಾ ಸದಸ್ಯರು ಅದನ್ನು ವಿರೋಧಿಸುತ್ತಾರೆಂದು ನಂಬಿದ್ದೇನೆ.

*(ಪ್ರಜಾ ಪ್ರತಿನಿಧಿ ಸಭೆಯ ನಡೆವಳಿಕೆಗಳು ದಿನಾಂಕ : 10-6-1946)*

ದಿವಾನರನ್ನು ಕುರಿತು

Thank you. ದೇಶದಲ್ಲಿ ಈ ರೀತಿ ಹೊರಗಿನವರನ್ನು ದಿವಾನ್ ಪದವಿಗೆ ತರುವ ವಿಚಾರದಲ್ಲಿ ಯಾವ ರೀತಿ ಅಭಿಪ್ರಾಯವಿದೆ ಎಂಬುದನ್ನು ನೋಡಬೇಕು. ಪ್ರಜಾಭಿಪ್ರಾಯವು ಜವಾಬ್ದಾರಿ ಸರ್ಕಾರ ಸ್ಥಾಪನೆಯ ಕಡೆಗಿರುವಾಗ ಅದನ್ನು ಸರ್ಕಾರದವರು ಅಳೆದು ನೋಡಬೇಕಾದದ್ದು ಅವರ ಸಹಜವಾದ ಕರ್ತವ್ಯವಾಗಿದೆ. ನಮಗೆ ನಿಮ್ಮ ಮೇಲೆ ವೈಯಕ್ತಿಕವಾದ ದ್ವೇಷವಿಲ್ಲ. ನಿಮ್ಮ ಮೇಲೆ ಹಠ ಸಾಧಿಸಬೇಕೆಂಬ ಉದ್ದೇಶವಿಲ್ಲ. ಈ ದೇಶದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಗಬೇಕು ಇದು ಆಗಬೇಕೆಂದು ಈ ಸಭೆಯ 260 ಮಂದಿ ಸದಸ್ಯರು ಶ್ರೀಮನ್ ಮಹಾರಾಜರವರಿಗೆ ಒಂದು ಪ್ರಾರ್ಥನಾ ಪತ್ರಿಕೆಯನ್ನು ಸಲ್ಲಿಸಿದ್ದಾರೆ. ಆದರೆ ಅದಕ್ಕೆ ಮನ್ನಣೆ ಸಿಕ್ಕುವುದಕ್ಕೆ ಬದಲಾಗಿ ನೀವು ದಿವಾನ್ ಪದವಿಗೆ ಬಂದಿರಿ. ಅಲ್ಲದೆ ಮಂತ್ರಿಮಂಡಲದಲ್ಲಿ ಖಾಲಿ ಬಿದ್ದಿದ್ದ ಎರಡು ಸ್ಥಾನಗಳಿಗೆ ಇಬ್ಬರು ನೌಕರ ಮಂತ್ರಿಗಳು ನೇಮಕವಾಗಿದ್ದಾರೆ. ಈ ನೀತಿಯು ಈ ಸಭೆಯ ಗೌರವಕ್ಕೆ ಚ್ಯುತಿ ತಂದಿದೆ. ಈ ನೀತಿಯನ್ನು ಪ್ರತಿಭಟಿಸುವುದು ನಮ್ಮ ಕರ್ತವ್ಯವಾಗಿದೆ. ಈ ಕರ್ತವ್ಯ ಪರಿಪಾಲನೆ ಮಾಡುವ ಸಲುವಾಗಿ ನಾವು ಸಭಾ ಪರಿತ್ಯಾಗ ಮಾಡುತ್ತೇವೆ.

*(ಕಾಂಗ್ರೆಸ್ ಪಕ್ಷದ ಸದಸ್ಯರೆಲ್ಲರೂ ಸಭಾ ಪರಿತ್ಯಾಗ ಮಾಡಿದರು)*

*(ಪ್ರಜಾ ಪ್ರತಿನಿಧಿ ಸಭೆಯ ನಡೆವಳಿಕೆಗಳು ದಿನಾಂಕ : 30-9-1946)*

**ಅಧ್ಯಕ್ಷರು** : ದಿವಾನರು ತಾವೇ ತಮ್ಮ ಅಭಿಪ್ರಾಯಗಳ ಉತ್ತಮ ನ್ಯಾಯ ನಿರ್ಣಾಯಕರು.

**ಶ್ರೀ ಕೆ. ಹನುಮಂತಯ್ಯ** : ದಿವಾನರು ಸಾರ್ವಭೌಮರಲ್ಲ; ನಮಗೆ ಅವರ ಭಾಷಣದ ಮೇಲೆ ತೀರ್ಪು ನೀಡುವ ಹಕ್ಕಿದೆ.

**ಅಧ್ಯಕ್ಷರು** : ಮಾನ್ಯ ಸದಸ್ಯರು ಭಾಷಣದ ಮೇಲೆ ನ್ಯಾಯ ನಿರ್ಣಯ ಮಾಡಬಹುದು. ಆದರೆ ಅವರು ಆ ಹಕ್ಕನ್ನು ಈ ಸಭೆಯಲ್ಲಿ ಚಲಾಯಿಸುವಂತಿಲ್ಲ.

**ಶ್ರೀ ಕೆ. ಹನುಮಂತಯ್ಯ** : ನಮಗೆ ಆ ಹಕ್ಕು ಇದ್ದೇ ಇದೆ. ಅದನ್ನು ನಾವು ಪ್ರತಿಪಾದಿಸುತ್ತೇವೆ.

*(ಪ್ರಜಾಪ್ರತನಿಧಿ ಸಭೆಯ ನಡೆವಳಿಕೆಗಳು ದಿನಾಂಕ : 9-10-1946)*

## ಶ್ರೀ ಮನ್ಮಹಾರಾಜರವರಿಗೆ ಪುತ್ರಿ ರತ್ನ ಜನನವಾದ ಸಂದರ್ಭ

Mr. president : I have to announce that a princess has been born to the Royal House of Mysore. (loud cheers)

**ಶ್ರೀ ಕೆ. ಹನುಮಂತಯ್ಯ** : ಅಧ್ಯಕ್ಷರೇ, ಈ ದಿವಸ ತಾವು ನಮ್ಮನ್ನಾಳುವ ಶ್ರೀ ಮನ್ಮಹಾರಾಜರವರಿಗೆ ಒಂದು ಪುತ್ರಿ ಸಂತಾನ ಲಭಿಸಿತೆಂದು ಹೇಳಿ ನಮಗೆಲ್ಲರಿಗೂ ಅಪರಿಮಿತ ಆನಂದದಾಯಕವಾದ ಸುವಾರ್ತೆಯನ್ನು ತಂದಿದ್ದೀರಿ. ನಾವುಗಳೆಲ್ಲರು ಯದುವಂಶ ಆಚಂದ್ರಾರ್ಕವಾಗಿ ಬೆಳೆದು ಮೈಸೂರು ಸಂಸ್ಥಾನವನ್ನು ಚಿರಕಾಲ ಆಳಬೇಕೆಂಬ ಮಹದಾಸೆಯಿಂದ ಕೂಡಿದ್ದೇವೆ. ಆ ಆಸೆಯನ್ನು ಈಡೇರಿಸಿ ನಮಗೆ ದೇವರು ಕರುಣಿಸಿದ ಒಂದು ಪುಷ್ಪ ಇದು. ಇದಕ್ಕಾಗಿ ನಾವೆಲ್ಲರೂ ಸಂತೋಷಪಡುತ್ತೇವೆ. ಆ ಸಂತೋಷವನ್ನು ತನ್ಮೂಲಕ ಶ್ರೀಮನ್ಮಹಾರಾಜರವರಿಗೆ ತಿಳಿಸಬೇಕೆಂದು ನಾನು ನಮ್ಮ ಪಕ್ಷದ ಪರವಾಗಿ ಪ್ರಾರ್ಥಿಸುತ್ತೇನೆ. ಸಭೆಯವರೆಲ್ಲರೂ ಇದನ್ನು ಅನುಮೋದಿಸುತ್ತಾರೆಂದು ನಂಬಿದ್ದೇನೆ.

*(ಪ್ರಜಾಪ್ರತಿನಿಧಿ ಸಭೆಯ ನಡೆವಳಿಕೆಗಳು, ದಿನಾಂಕ : 10-10-1946)*

**ಕಾಲಾವಕಾಶ**

ಸ್ವಾಮಿ, ನಾವೆಲ್ಲ ಐದು ನಿಮಿಷಗಳ ಕಾಲ ಮಾತನಾಡಬೇಕು ಇಲ್ಲವೇ ಎರಡು ನಿಮಿಷಗಳ ಕಾಲ ಮಾತನಾಡಬೇಕು ಎಂಬುದು ಮುಖ್ಯವಲ್ಲ. ನಾವು ಹೇಗೆ ವಾದ ಮಾಡುತ್ತೇವೆಂಬುದೇ ಮುಖ್ಯ . ಆದ್ದರಿಂದ ವಾದಗಳ ಚರ್ಚೆಯಲ್ಲಿ ಭಾಗವಹಿಸಿದ ಸದಸ್ಯರ ಸಂಖ್ಯೆಯನ್ನು ಅವಲಂಬಿಸುವುದಿಲ್ಲ. ಆದ್ದರಿಂದ ಮಾಮೂಲ ವಿಧಾನವನ್ನೇ ಅನುಸರಿಸಬೇಕು. ನಮ್ಮಲ್ಲಿ ಕೆಲವರು ಚರ್ಚೆಯಲ್ಲಿ ಭಾಗವಹಿಸದಿದ್ದ ಮಾತ್ರಕ್ಕೆ ನಾವು ಅದನ್ನು ಅನುಮೋದಿಸುವುದಿಲ್ಲವೆಂದು ಅರ್ಥವಲ್ಲ.

*(ಪ್ರಜಾ ಪ್ರತಿನಿಧಿ ಸಭೆಯ ನಡೆವಳಿಕೆಗಳು ದಿನಾಂಕ : 10-10-1946)*

## ಕರ್ತವ್ಯ ಪಾಲನೆ

ಒಂದು ದೃಷ್ಟಿಯಿಂದ ಈ ವಿಚಾರವನ್ನು ನೋಡುವುದಾದರೆ ಎದುರು ಪಕ್ಷದವರು ಏನೇನು ಸೌಲಭ್ಯಗಳು ಬೇಕೆಂದು ಒಂದು ವಾದವನ್ನು ಎತ್ತಲು ಅವರಿಗೆ ಎಷ್ಟು ಕಾತರವಿದೆಯೋ ಅಷ್ಟೇ ಕಾತರತೆಯನ್ನು ಅವರು ತಮ್ಮ ಕರ್ತವ್ಯಪಾಲನೆಯಲ್ಲೂ ತೋರಿಸಬೇಕು.

*(ವಿಧಾನ ಸಭೆ ಕಲಾಪ ದಿನಾಂಕ : 26-6-1952)*

## ಪುಸ್ತಕದ ಪಾಡು

ಇನ್ನು ಈ ಚರ್ಚೆಯಲ್ಲಿ ಬಂದ ಕೆಲವು ವಿಷಯಗಳನ್ನು ಪ್ರಸ್ತಾಪ ಮಾಡುತ್ತೇನೆ. ಶ್ರೀಮಾನ್ ಶಂಕರಲಿಂಗೇಗೌಡರು ಒಂದು ಪುಸ್ತಕವನ್ನೇಕೆ ಬರೆದು ನನ್ನ ಕೈಯಲ್ಲಿಟ್ಟಿದ್ದಾರೆ. ಅನೇಕರು ಶಂಕರಲಿಂಗೇಗೌಡರು ಬರೆದಿರುವ ಪುಸ್ತಕಗಳನ್ನು ಅಷ್ಟು ನಿಗಾ ಇಟ್ಟು ಓದಬೇಕಾಗಿಲ್ಲವೆಂದು ಭಾವಿಸಿದ್ದಾರೆ. ಆದರೆ ಸ್ವಲ್ಪ ನಿಗಾ ಇಟ್ಟು ಓದಿ ನೋಡಿ. ಎಷ್ಟು ಶ್ರಮಪಟ್ಟು ಅಂಕಿಅಂಶಗಳನ್ನು ಅವರು ಸಂಗ್ರಹಿಸಿದ್ದಾರೆಂಬುದನ್ನು ತಾವೇ ಕಾಣುತ್ತೀರಿ. ಅಷ್ಟು ಅಧ್ಯಯನ ಮಾಡಿ ಅಂಕಿ ಅಂಶಗಳನ್ನು ಹುಡುಕಿ ತಮ್ಮ ಸ್ವಂತ ಖರ್ಚಿನಿಂದ ದೇಶಕ್ಕೇನಾದರೂ ಒಳ್ಳೆಯದಾಗಲಿ ಎಂಬ ಆಕಾಂಕ್ಷೆಯಿಂದ ಒಂದು ಪುಸ್ತಕವನ್ನು ಪ್ರಿಂಟ್ ಮಾಡಿಸತಕ್ಕ ಜನರು ನಮ್ಮಲ್ಲಿ ಎಷ್ಟು ಜನರಿದ್ದಾರೆಂಬುದನ್ನು ಕೈಬೆರಳಿಟ್ಟು ತೋರಿಸಲಿ. ನೋಡೋಣ. ನಾನಾದರೋ ಸರ್ಕಾರದ ಪರವಾಗಿ ಹೇಳುತ್ತೇನೆ. ಅವರು ಕೊಟ್ಟಿರತಕ್ಕ ಅಂಕಿಅಂಶಗಳನ್ನು ಕೂಲಂಕಷವಾಗಿ ಪರಿಶೀಲನೆ ಮಾಡಿ ಅದರಿಂದ ಪಡೆಯಬಹುದಾದ ಸಹಾಯವನ್ನು ಪಡೆಯಬೇಕೆಂಬುದೇ ನನ್ನ ಆಸೆ.

**ಶ್ರೀ ಎಂ. ಶಂಕರಲಿಂಗೇಗೌಡರು** : ಆ ಪುಸ್ತಕದ ಹೆಸರನ್ನಾದರೂ ಹೇಳಿ.

**ಶ್ರೀ ಕೆ. ಹನುಮಂತಯ್ಯನವರು** : ಆಗಬಹುದು. ಆ ಪುಸ್ತಕದ ಹೆಸರು Note on the village administration in Mysore State. ಅಲ್ಲಿರತಕ್ಕ ವಿಷಯ ಸಂಸ್ಥಾನವನ್ನು ರೆವಿನ್ಯೂ ಆಡಳಿತಕ್ಕಾಗಿ ಈಗೇನು ಹಂಚಿಕೆ ಮಾಡಿದೆಯೋ ಅದನ್ನು ಪುನರ್ವ್ಯವಸ್ಥೆ ಮಾಡಬೇಕು ಎಂಬುದು

*(ಬಡ್ಜೆಟ್ ಮೇಲಿನ ಸಾಮಾನ್ಯ ಚರ್ಚೆ ದಿನಾಂಕ : 30-6-1952)*

## ದಕ್ಷ ಆಡಳಿತ

ಆದ್ದರಿಂದ ನಾನು ಈ ಸೆಕ್ರೆಟರಿ ಆ ಸೆಕ್ರೆಟರಿ ಎಂದು ಹೇಳಿ ಪ್ರಸ್ತಾಪ ಮಾಡುತ್ತಿಲ್ಲ. ದಕ್ಷ ಆಡಳಿತದ ಸ್ವರೂಪ ಯಾವ ರೀತಿಯಿದೆಯೆಂದು ಹೇಳಿ ನಾನು ಪ್ರಸ್ತಾಪ ಮಾಡುತ್ತಿದ್ದೇನೆ. ಇದು ಮೈಸೂರು ಸರ್ಕಾರಕ್ಕೆ ಮಾತ್ರ ಅನ್ವಯಿಸುವುದಿಲ್ಲ. ಇಂಡಿಯಾ ಸರ್ಕಾರಕ್ಕೂ ಅನ್ವಯಿಸುತ್ತದೆ, ಪ್ರಪಂಚದ ಎಲ್ಲಾ ಸರ್ಕಾರಕ್ಕೂ ಅನ್ವಯಿಸುತ್ತದೆ. ಈಗ ಇಂಡಿಯಾ ಸರ್ಕಾರದಲ್ಲಿ ಎಲ್ಲಿಯೇ ಕೇಳಿದರೂ ಯಾರಿಗೂ ಸರ್ಕಾರ ಇಂತ ಸೆಕ್ರೆಟರಿಯಿಂದ ನಡೆಯುತ್ತಿದೆಯೆಂದು ಮನಸ್ಸಿಗೆ ಬರುವುದಿಲ್ಲ. Why should that talk arise only in Mysore State now for the first time? ಇಲ್ಲಿ ಪರಿಷತ್ತಿನಲ್ಲಿ ನೋಡಲಿ, ಅಸೆಂಬ್ಲಿಯಲ್ಲಿ ನೋಡಲಿ, ಅನೇಕ ಸದಸ್ಯರು ಇದನ್ನೇ ಪ್ರಸ್ತಾಪ ಮಾಡುತ್ತಿದ್ದಾರೆ. ಅನೇಕ ಸದಸ್ಯರು ಇದು ಸರಿಯಿಲ್ಲವೆಂದು ಪದೇ ಪದೇ ಹೇಳುತ್ತಿದ್ದಾರೆ. The Ministry which allows its prestige to be dominated by a Secretary in sheer self-respect either ought to quit or restore it self to its own prestige.

*(ವಿಧಾನಸಭೆ ಬಡ್ಜೆಟ್ ಮೇಲಿನ ಚರ್ಚೆ ದಿನಾಂಕ : 28-3-1959)*

## ಸಮಾಜವಾದ

ಕಾಂಗ್ರೆಸ್ಸಿನವರಾದ ನಾವು ಮತ್ತು ವಿರೋಧ ಪಕ್ಷದಲ್ಲಿರುವ ನಮ್ಮ ಕೆಲವು ಸ್ನೇಹಿತರು ಸಮಾಜವಾದವನ್ನು ಒಂದು ನಿಷ್ಠೆಯ ವಿಷಯವಾಗಿ ಮತ್ತು ನಮ್ಮ ಕೆಲಸಗಳ ಸರ್ವಾಧಾರವೆಂದು ಭಾವಿಸಿದ್ದೇವೆ. ಆದರೆ ಈ ಬೃಹತ್ ಉದ್ಯಮವನ್ನು ನೀವು ಯಶಸ್ವಿಯಾಗಿ ನಡೆಸದಿದ್ದರೆ ಈ ದೇಶದಲ್ಲಿ ಸಮಾಜವಾದ ಸಫಲವಾಗುವುದು ಹೇಗೆ? ನನ್ನ ಮಗ ಎಸ್.ಎಸ್.ಎಲ್.ಸಿ. ಯಲ್ಲಿ ಪಾಸಾಗದಿದ್ದರೆ ಅವನು ಐ.ಎ.ಎಸ್. ಪರೀಕ್ಷೆ ತೆಗೆದುಕೊಳ್ಳುವುದು ಹೇಗೆ ಮತ್ತು ಐ.ಎ.ಎಸ್ ಅಧಿಕಾರಿಯಾಗುವುದೆಂತು ? ಕಡುಬಿನ ರುಚಿಗೆ ತಿಂದದ್ದೇ ಪ್ರಮಾಣ ಪ್ರಯಾಣಿಕರಿಗೆ ಮತ್ತು ಸಂಬಂಧಪಟ್ಟ ಎಲ್ಲರಿಗೂ ತೃಪ್ತಿಯಾಗುವಂತೆ ದಕ್ಷತೆಯಿಂದ ಮತ್ತು ಲಾಭಕರವಾಗಿ ಈ ಬೃಹತ್ ಉದ್ಯಮವನ್ನು ನಡೆಯುವಂತೆ ನೋಡಿಕೊಳ್ಳುವ ನಿರ್ಧಾರ ಮತ್ತು ಧೈರ್ಯವನ್ನು ಕಾರ್ಮಿಕರು, ವ್ಯವಸ್ಥಾಪಕರು ಮತ್ತು ಸರ್ಕಾರದ ಸಚಿವರು ತೋರಿಸಬೇಕಾದ ಅಗತ್ಯವಿದೆ. ಆಗ ಮಾತ್ರ ನಾವು ಬೋಧಿಸುವ ಸಮಾಜವಾದ ಕಾರ್ಯರೂಪದಲ್ಲಿ ಕಂಡುಬರುತ್ತದೆ. ವ್ಯವಸ್ಥಾಪಕರಾಗಲಿ ಕಾರ್ಮಿಕರಾಗಲಿ ತೋರಿಸಬಹುದಾದ ಯಾವುದೇ

ಘೋಷಣೆಪ್ರಿಯತೆಯಾಗಲಿ ಅಥವಾ ಒಮ್ಮುಖದ ಪ್ರಯತ್ನವಾಗಲಿ ನೆರವಿಗೆ ಬರಲಾರದು.

*(ಲೋಕಸಭೆ ಕಲಾಪ ರೈಲ್ವೆ ಬಜೆಟ್ 1975-76 ದಿನಾಂಕ : 5-3-1975)*

## ಹಕ್ಕುಚ್ಯುತಿ ನಿಲುವಳಿ ಸೂಚನೆಯ ಬಗ್ಗೆ

ಈ ಸೂಚನೆಗೆ ಸಂಬಂಧಿಸಿದಂತೆ ನೀವು ಹಕ್ಕುಚ್ಯುತಿ ಸಮಿತಿಯ ಅಧ್ಯಕ್ಷರನ್ನು ನೇಮಿಸಿದ್ದೀರಿ. ಅವರು ಕೈಗೊಳ್ಳಬಹುದಾದ ನಿರ್ಣಯದ ಬಗ್ಗೆ ನಮಗೆ ಎಲ್ಲಾ ಗೌರವವಿದೆ. ನಮಗೆ ಯಾವುದೇ ಸದಸ್ಯರ ಬಗ್ಗೆ ಯಾಗಲಿ ಯಾವುದೇ ಭಿನ್ನಮತದ ಟಿಪ್ಪಣಿಯ ಬಗ್ಗೆಯಾಗಲಿ ಅಗೌರವವಿಲ್ಲ. ವಿಷಯವೆಂದರೆ, ಸದನವು ತಾನು ಸೂಕ್ತವೆಂದು ಭಾವಿಸಿದ ಶಿಕ್ಷೆ ನೀಡಬಹುದೆಂದು ಸಮಿತಿಯು ಶಿಫಾರಸ್ಸು ಮಾಡಿದೆ. ಆದ್ದರಿಂದ ಶಿಕ್ಷೆಯ ಬಗ್ಗೆ ಅವರು ಯಾವುದೇ ನಿರ್ಣಯವನ್ನು ತೆಗೆದುಕೊಂಡಿಲ್ಲ. ಪ್ರಕರಣದ ವಸ್ತುಸಂಗತಿಗಳನ್ನು ಗಮನಿಸಿದಾಗ ಶಿಕ್ಷೆಯ ಬಗ್ಗೆ ತೀರ್ಮಾನ ತೆಗೆದುಕೊಳ್ಳುವಾಗ ಸಂಸತ್ತಿನಂತಹ ಘನತೆವೆತ್ತ ಸಂಸ್ಥೆಯು ತನ್ನ ವಿವೇಚನೆಯನ್ನು ಬಳಸಬೇಕೆಂದು ನಾನಾದರೂ ಭಾವಿಸುತ್ತೇನೆ. ಏಕೆಂದರೆ ಸಂಬಂಧಪಟ್ಟ ವ್ಯಕ್ತಿಯು ತುಂಬಾ ಅಮುಖ್ಯನಾಗಿರುವುದರಿಂದ ಅಂತಹ ವ್ಯಕ್ತಿಯನ್ನು ಶಿಕ್ಷಿಸುವಾಗ ಸದನದ ಘನತೆಯನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕಾಗುತ್ತದೆ. ಇದು ಆನೆಯು ಇರುವೆಯನ್ನು ತುಳಿದಂತಾಗುತ್ತದೆ. ಆದ್ದರಿಂದ ನಾನು ಸಲಹೆ ಮಾಡುವುದೇನೆಂದರೆ ಸಮಿತಿಯೇ ತಾನು ಶಿಕ್ಷೆಯನ್ನು ನಿರ್ಧರಿಸುವುದು ಸೂಕ್ತವಲ್ಲವೆಂದು ಭಾವಿಸಿ ಸದನದ ವಿವೇಚನೆಗೆ ಬಿಟ್ಟಿರುವಾಗ ನಾವು ಆ ವಿವೇಚನೆಯನ್ನು ನ್ಯಾಯಯುತವಾದ ಮತ್ತು ಅಮೋಘವಾದ ರೀತಿಯಲ್ಲಿ ಚಲಾಯಿಸಿ ಕಾನೂನು ಕ್ರಮಗಳನ್ನು ಕೈಬಿಡುವುದು ಸೂಕ್ತ. ನಿಮಗೆ ತಿಳಿದಿರುವಂತೆ ಈ ಪೋಲೀಸ್ ಅಧಿಕಾರಿಗಳು ಇಲಾಖೆಯ ವಿರುದ್ಧ ಹೋಗಿದ್ದಾರೆ ಹಾಗೂ ದತ್ತ ಎಂಬವನು ಪೋಲೀಸ್ ದೂರಿನ ಮೇಲೆ ಈ ನಿರ್ದಿಷ್ಟ ಆಪಾದನೆಗಾಗಿ ಕ್ರಿಮಿನಲ್ ನ್ಯಾಯಾಲಯದಿಂದ ಶಿಕ್ಷೆಗೊಳಗಾಗಿಲ್ಲ. ಈ ಎರಡು ಸಂದರ್ಭಗಳು ಈ ಸದನಕ್ಕೆ ಈ ಪ್ರಕರಣವನ್ನು ಯಾವುದೇ ಶಿಕ್ಷೆವಿಧಿಸದೆ ಮುಕ್ತಾಯಗೊಳಿಸಲು ಪೂರಕವಾಗಿದೆ.

*(ಲೋಕ ಸಭೆ ಕಲಾಪ ದಿನಾಂಕ : 2-9-1976)*

# (II) ಗಣ್ಯರ ದೃಷ್ಟಿಯಲ್ಲಿ ಕೆಂಗಲ್ಲರು

## (‘ರಾಷ್ಟ್ರರತ್ನ’ ಕೃತಿಯಿಂದ ಆಯ್ದ ಉಲ್ಲೇಖಗಳು)

ಕೇವಲ ಚಿಕ್ಕವಯಸ್ಸಿನಲ್ಲೇ ಸ್ವಾತಂತ್ರ್ಯ ಸಮರಕ್ಕೆ ಧುಮುಕಿ, ಸ್ವಾತಂತ್ರ್ಯ ಲಭಿಸುವ ಪೂರ್ವವೇ ಮೈಸೂರು ರಾಜ್ಯದಲ್ಲಿ ಒಬ್ಬ ಪ್ರಭಾವಶಾಲಿಯಾದ ನಾಯಕರಾಗಿದ್ದರು. ದಿಟ್ಟತನ, ಬಿಚ್ಚುನುಡಿ, ರಾಷ್ಟ್ರಭಕ್ತಿ ಮುಂತಾದ ಗುಣಗಳನ್ನೇ ಹೊಂದಿದ್ದ ಅವರು ಅಂದು ಬಹುಜನರ ಮೆಚ್ಚುಗೆಗೆ ಪಾತ್ರರಾಗಿದ್ದರು.

**ಶ್ರೀ ಕಡಿದಾಳ್ ಮಂಜಪ್ಪ**

ಹನುಮಂತಯ್ಯನವರು ಏಕೀಕರಣಕ್ಕೆ ನಾಂದಿ ಹಾಡಿದ ರೀತಿ ಅವರ ರಾಜಕೀಯ ಕೌಶಲ್ಯಕ್ಕೆ ಕಲಶಪ್ರಾಯವಾಗಿದೆ. ಎರಡೂ ಕಡೆಯ ಜನ ಭಾವೋದ್ರಿಕ್ತರಾಗಿದ್ದ ಸಮಯದಲ್ಲಿ ಕ್ಷೋಭೆಯೊದಗಿ ಹಾಲಾಹಲ ಉದಿಸದಂತೆ ಶಾಂತಿಯನ್ನು ಕಾಪಾಡಿಕೊಂಡು, ಧ್ಯೇಯಕ್ಕೆ ಭಂಗವಾದಂತೆ ಕ್ರಿಯಾಶೀಲರಾಗಿ ಸುವರ್ಣ ಮಾಧ್ಯಮವನ್ನು ಅನುಸರಿಸುವ ಜಾಣ್ಮೆ ಮುತ್ಸದ್ದಿತನದ ಹೆಗ್ಗುರುತಾಗುತ್ತದೆ. ‘ಯಾರು ಬೇಕಾದರೂ ವಿಶಾಲ ಮೈಸೂರಿನಲ್ಲಿ ಸೇರಿಕೊಳ್ಳಲಿ, ತಾವಾಗಿಯೇ ಬರುವವರಿಗೆ ಬಾಗಿಲು ತೆರೆದಿದೆ’ ಎಂದು ಹೇಳಿದಾಗ ಒಂದೇ ಕಲ್ಲಿನಿಂದ ಎರಡು ಮೂರು ಹಣ್ಣು ಕೆಡವಿದ ಯಶಸ್ಸು ಅವರಿಗೆ ಲಭಿಸಿತು.

**ಪ್ರೊ॥ ದೇ. ಜವರೇಗೌಡ**

(ಕರ್ನಾಟಕ ಏಕೀಕರಣದ ಸಂದಿಗ್ಧದಲ್ಲಿ) ಇಂಥ ಸಂದರ್ಭದಲ್ಲಿ ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಕೆಂಗಲ್ಲರ ಸಹಾಯಕ್ಕಾಗಿ ಜಿಲ್ಲಾ ಕರ್ನಾಟಕ ಕ್ರಿಯಾ ಸಮಿತಿ ನಿಯೋಗವೊಂದು ಬಂತು. ಶ್ರೀ ಕೆಂಗಲ್ಲರು 1946ರಲ್ಲಿ ದಾವಣಗೆರೆಯಲ್ಲಿ ಸೇರಿದ್ದ ಅಖಿಲ ಕರ್ನಾಟಕ ಸರ್ವಪಕ್ಷ ಸಮ್ಮೇಳನದಲ್ಲಿ ಮೈಸೂರನ್ನು ಒಳಗೊಂಡ ಅಖಂಡ ಕರ್ನಾಟಕ ರಚನೆಯಾಗಬೇಕೆಂದು ಒತ್ತಾಯಿಸಿದ್ದರು, ಈಗ ಅವರೇ ಮುಖ್ಯಮಂತ್ರಿ ಆಗಿರುವಾಗ ಬಳ್ಳಾರಿಯ ಸೇರ್ಪಡೆಗೆ ಅವರು ಸಮ್ಮತಿಸುವರೆಂಬ ಭರವಸೆ ನಮಗೆ.

**ಶ್ರೀ ಕೊ. ಚನ್ನಬಸಪ್ಪ**

ಹನುಮಂತಯ್ಯನವರು ಶ್ರದ್ಧಾವಂತರು, ದೈವಭಕ್ತರು ಆಶಾವಾದಿಗಳು. ಸರ್ಕಾರದಲ್ಲಿಯೂ ಜನತೆಯಲ್ಲಿಯೂ ಶುದ್ಧತೆಯನ್ನು ಪ್ರಾಮಾಣಿಕ ನಡತೆಯನ್ನು ಬಯಸುವವರು. ಜಾತೀಯತೆಯಿಂದ ದೂರವಿದ್ದು ಗುಣಕ್ಕೂ ಯೋಗ್ಯತೆಗೂ ಪುರಸ್ಕಾರ ಕೊಡುವವರು.

**ಡಾ. ಗೊರೂರು ರಾಮಸ್ವಾಮಿ ಅಯ್ಯಂಗಾರ್**

ಕೆಂಗಲ್ ಹನುಮಂತಯ್ಯನವರು ರಾಷ್ಟ್ರದ ನಾಯಕರಾದದ್ದು ತಮ್ಮ ಸ್ವಂತ ಸ್ವಶಕ್ತಿಯಿಂದ ಯಾರ ಕೃಪಾ ಪ್ರಸಾದದಿಂದಲ್ಲ. ಅದಕ್ಕಾಗಿ ಅವರು ಅವಿರತ ಹೋರಾಟವನ್ನೇ ನಡೆಸಬೇಕಾಯಿತು.

ರಾಷ್ಟ್ರಭಕ್ತಿಯಲ್ಲಿ ಹನುಮಂತಯ್ಯನವರು ಯಾರಿಗೂ ಕಡಿಮೆಯಿಲ್ಲ. ಒಳ್ಳೆಯ ವಾಗ್ಮಿಗಳು, ಸಂಘಟನಾ ಚತುರರು, ಕಾರ್ಯಸಾಧಕರು.

**ಶ್ರೀ ಎಚ್. ಎಸ್. ದೊರೆಸ್ವಾಮಿ.**

ಗರಿಗರಿಯಾಗಿ ಇಸ್ತ್ರಿ ಮಾಡಿದ ಕೋಟು-ಪ್ಯಾಂಟು ಧರಿಸಿ, ಮೈಸೂರು ಪೇಟಾ ಇಟ್ಟುಕೊಂಡು ಹನುಮಂತಯ್ಯನವರು ನಡೆದು ಬರುತ್ತಿದ್ದರೆ ಈಗಲೂ (1980) ಎಲ್ಲರೂ ಆಕರ್ಷಿತರಾಗುತ್ತಾರೆ. ಅವರು ರಾಜ್ಯದ ಮುಖ್ಯ ಮಂತ್ರಿಯಾಗಿದ್ದದ್ದು ಇಪ್ಪತ್ತನಾಲ್ಕು ವರ್ಷಗಳ ಹಿಂದೆ. ಅನಂತರ ಲೋಕಸಭಾ ಸದಸ್ಯರಾದರು. ಕೇಂದ್ರಮಂತ್ರಿಯೂ ಆದರು. ಆದರೆ ಈಗಲೂ ಸಹ ಕನ್ನಡಿಗರನೇಕರಿಗೆ ಅವರು ಆದರ್ಶ ಮುಖ್ಯಮಂತ್ರಿ.

**ಶ್ರೀ ಬಸವರಾಜ ಕಟ್ಟೀಮನಿ**

ಹಮ್ಮು ಬಿಮ್ಮುಗಳನ್ನು ತೋರುವವರು ಬಂದರೆ ಅವರಿಗಿಂತಲೂ ಬಿಗುಮಾನ ತೋರುವುದು. ಸರಳಸಜ್ಜನಿಕೆ ಎಲ್ಲಿಯೇ ಇರಲಿ ಅದನ್ನು ಪುರಸ್ಕರಿಸುವುದು, ಅಸಾಮಾನ್ಯರೊಡನೆ ಅಸಾಮಾನ್ಯರಂತೆ, ಸಾಮಾನ್ಯರೊಡನೆ ಸಾಮಾನ್ಯರಂತೆ, ನಡೆದುಕೊಳ್ಳುವುದು, ಒಳ್ಳೆಯದು ಏನಿದ್ದರೂ ಎಲ್ಲಿದ್ದರೂ ಅದನ್ನು ಎತ್ತಿ ಹಿಡಿಯುವುದು ಇವು ನನಗೆ ತೋಚಿದಂತೆ ಹನುಮಂತಯ್ಯನವರ ಹಿರಿಮೆಗರಿಮೆಗಳ ಗುಟ್ಟುಗಳು.

**ಡಾ. ಸಿದ್ದಯ್ಯ ಪುರಾಣಿಕ**

ಇಂದಿನ ರಾಜಕೀಯ ಜೀವನದಲ್ಲಿ ಬುದ್ಧಿಜೀವಿಗಳಾದಂಥ ಇಂತಹ ಧೀಮಂತ ನಾಯಕರು ಅತಿವಿರಳವೆಂದರೆ ತಪ್ಪಾಗಲಾರದು. ಶ್ರೀಯುತರ ಅಧ್ಯಕ್ಷತೆಯಲ್ಲಿ ಬಂದ 'ಅಡ್ಮಿನಿಸ್ಟ್ರೇಟೀವ್ ರಿಫಾರ್ಮ್ಸ್ ರಿಪೋರ್ಟ್‌ಗಳನ್ನು ಓದಿದರೆ ಅವರು ಎಷ್ಟು ಮೇಧಾವಿಗಳೆಂಬುದು ಎಂತಹ ರಾಜಕೀಯಶಾಸ್ತ್ರದ ಪಂಡಿತನಿಗೂ ವೇದ್ಯವಾಗುತ್ತದೆ.

**ಪ್ರೊ. ಎಚ್.ಎಚ್. ಅಣ್ಣಯ್ಯಗೌಡ**

ತನ್ನ ಮುಖ್ಯಮಂತ್ರಿ ಪದವಿಗಿಂತ ಹರಿದು ಹಂಚಿಹೋಗಿರುವ ಕನ್ನಡಿಗರನ್ನು ಒಟ್ಟುಗೂಡಿಸುವುದು ಮುಖ್ಯವೆಂಬುದು ಅವರ ಅಂದಿನ ನೀತಿಯಾಗಿತ್ತು, ಅವರು ಅದಕ್ಕೆ ಬದ್ಧವಾಗಿ ಕರ್ನಾಟಕ ಏಕೀಕರಣವನ್ನು ಸಾಧಿಸಿದರು. ಮುಖ್ಯಮಂತ್ರಿ ಪದವಿಯನ್ನು ಕಳೆದುಕೊಂಡರು. ಅವರು ನತದೃಷ್ಟ ಕರ್ನಾಟಕದಲ್ಲಲ್ಲದೆ ಬೇರೆ ಕಡೆ ಜನಿಸಿದ್ದರೆ ಅವರಿಂದು ಏನಾಗುತ್ತಿದ್ದರೋ ಹೇಳುವುದಕ್ಕಾಗುತ್ತಿರಲಿಲ್ಲ.

**ಶ್ರೀ ಎ. ರಾಮಣ್ಣ**

ಸರ್ಕಾರದಲ್ಲಿ ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ಇಲಾಖೆಯನ್ನು 1954ರಲ್ಲಿ ಸ್ಥಾಪಿಸಿದರು. ಕುಮಾರವ್ಯಾಸನ ಕನ್ನಡ ಭಾರತ 40,000 ಪ್ರತಿಗಳನ್ನು ಮುದ್ರಿಸಿ ಪ್ರತಿಯೊಂದಕ್ಕೆ 2 ರೂಪಾಯಿಗೆ ಒದಗಿಸಿದ ಅವರ ಸಾಹಿತ್ಯ ಪ್ರೇಮವನ್ನು ಎಲ್ಲರೂ ಮೆಚ್ಚಿಕೊಂಡಿದ್ದಾರೆ. ಕನ್ನಡ ನಿಘಂಟು ಮತ್ತು ವಿಶ್ವಕೋಶಗಳ ರಚನೆಯ ಬೃಹತ್ ಕಾರ್ಯವು ಇವರ ಕಾಲದಲ್ಲಿ ಆರಂಭವಾಯಿತು. ಇವುಗಳಲೆಲ್ಲಾ ಅವರ ವಿದ್ಯಾಭಿಮಾನ, ವಿದ್ವತ್ಪಕ್ಷಪಾತ ಮತ್ತು ಪ್ರಾಮಾಣಿಕ ಶ್ರದ್ಧೆ ಎದ್ದು ಕಾಣುತ್ತದೆ.

**ಪ್ರೋ. ಜಿ. ವೆಂಕಟಸುಬ್ಬಯ್ಯ**

## (III) ಕೆಂಗಲ್ಲರ ಜೀವನದ ಹೆಜ್ಜೆ ಗುರುತುಗಳು

1. ಕರ್ನಾಟಕ ರಾಜ್ಯದ ಬೆಂಗಳೂರು ಜಿಲ್ಲೆ ರಾಮನಗರ ತಾಲ್ಲೂಕಿನ ಲಕ್ಕಪ್ಪನ ಹಳ್ಳಿಯಲ್ಲಿ 1908ರಲ್ಲಿ ಜನಿಸಿದರು.

2. 1930ರಲ್ಲಿ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಓದಿ ಪದವೀಧರರಾದರು. 1932ರಲ್ಲಿ ಮುಂಬಯಿ ವಿಶ್ವವಿದ್ಯಾನಿಲಯದ ಪೂನಾದ ಲಾ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಎಲ್.ಎಲ್. ಬಿ. ಪದವಿ ಪಡೆದರು.

3. 1927ರಲ್ಲಿ ಮದ್ರಾಸಿನಲ್ಲಿ (ಚನ್ನೈ) ನಡೆದ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನದಲ್ಲಿ ವಿದ್ಯಾರ್ಥಿ ಪ್ರತಿನಿಧಿಯಾಗಿ ಭಾಗವಹಿಸಿದರು.

4. 1928ರಲ್ಲಿ ವಿದ್ಯಾರ್ಥಿ ನಾಯಕನಾಗಿ ಸೈಮನ್ ಆಯೋಗದ ವಿರುದ್ಧ ಪ್ರತಿಭಟನಾ ಮೆರವಣಿಗೆಯ ನೇತೃತ್ವ ವಹಿಸಿದರು.

5. 1933 ರಿಂದ ವಕೀಲಿ ವೃತ್ತಿ ಪ್ರಾರಂಭಿಸಿದರು.

6. 1933ರಲ್ಲಿ ಬೆಂಗಳೂರು ಜಿಲ್ಲೆಯ ಹರಿಜನ ಸೇವಾ ಸಂಘದ ಕಾರ್ಯದರ್ಶಿಯಾದರು. 1934ರಲ್ಲಿ ಬೆಂಗಳೂರು ನಗರದ ಹಿಂದಿ ಪ್ರಚಾರಕ ಸಭಾಧ್ಯಕ್ಷರಾದರು.

7. 1936ರಿಂದ ಕಾಂಗ್ರೆಸ್ ಪಕ್ಷದ ಪೂರ್ಣಾವಧಿ ಕಾರ್ಯಕರ್ತರಾದರು.

8. ಬೆಂಗಳೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು.

9. 1937ರಲ್ಲಿ ಸ್ಥಾಪಿತವಾದ ಮೈಸೂರು ಕಾಂಗ್ರೆಸ್‌ನ ಸ್ಥಾಪಕರಲ್ಲೊಬ್ಬರು. 1949ರವರೆಗೂ ಅದರ ಕಾರ್ಯ ಸಮಿತಿಯ ಮತ್ತು ಸಂಸದೀಯ ಮಂಡಲಿಯ ಸದಸ್ಯರು.

10. ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆ (1941) ಅದರ ಕಾಂಗ್ರೆಸ್ ಪಕ್ಷದ ನಾಯಕರು (1944-49)

11. ಮೈಸೂರಿನ ರಾಜ್ಯಾಂಗ ಸಭೆಯ ಸದಸ್ಯರು ಮತ್ತು ಕಾಂಗ್ರೆಸ್ ಪಕ್ಷದ ಉಪನಾಯಕರು.

12. ಸ್ವಾತಂತ್ರ್ಯ ಹೋರಾಟ ಕಾಲದಲ್ಲಿ ಏಳು ಬಾರಿ ಜೈಲು ಶಿಕ್ಷೆ ಅನುಭವಿಸಿದರು. 1947ರ ಅರಮನೆ ಸತ್ಯಾಗ್ರಹದಲ್ಲಿ ಪ್ರಮುಖ ಪಾತ್ರ ವಹಿಸಿದರು.

13. ಭಾರತದ ರಾಜ್ಯಾಂಗ ಸಭೆಯ ಸದಸ್ಯರು 1947 ರಿಂದ 1952ರಲ್ಲಿ ಅದು ವಿಸರ್ಜನೆ ಯಾಗುವವರೆಗು.

14. ಭಾರತೀಯ ಸಂಸ್ಥಾನಗಳ ಮಾದರಿ ಸಂವಿಧಾನ ಸಭೆಯ ಸದಸ್ಯರು

15. ಅಂತರರಾಷ್ಟ್ರೀಯ ಸಂಸದೀಯ ಅಧಿವೇಶನಗಳಲ್ಲಿ ಭಾಗವಹಿಸಿದ್ದು ಸ್ಟಾಕ್‌ಹೋಮ್ (1949) ಡಬ್ಲಿನ್ (1950) ಬ್ರೆಜಿಲಿಯ (1962)

16. ಸಂಸತ್ತಿನ ಕಾಂಗ್ರೆಸ್ ಪಕ್ಷದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಚುನಾಯಿತರಾದದ್ದು 1949, 1950, 1951, 1952, 1962 ಮತ್ತು 1963.

17. ನವ ಮೈಸೂರು ರಾಜ್ಯದ ವಿಧಾನ ಸಭೆಗೆ ಚುನಾಯಿತರಾದದ್ದು 1952. ಅದರ ನಾಯಕರಾಗಿ ಆಯ್ಕೆ.

18. ನವ ಮೈಸೂರು ರಾಜ್ಯದ ಮುಖ್ಯಮಂತ್ರಿ - 1952ರ ಮಾರ್ಚ್‌ನಿಂದ 1956ರ ಆಗಸ್ಟ್‌ವರೆಗೆ.

19. ಮುಖ್ಯಮಂತ್ರಿಗಳ ಅವಧಿಯಲ್ಲಿ ಪ್ರಮುಖ ಸಾಧನೆಗಳು

    i) ವಿಧಾನ ಸೌಧದ ನಿರ್ಮಾಣ

    ii) ಶರಾವತಿ ಕಣಿವೆ ವಿದ್ಯುತ್ ಯೋಜನೆ ಪ್ರಾರಂಭ

    iii) ಶಿಕ್ಷಣ ಸುಧಾರಣೆಗಳ ಜಾರಿ

    iv) ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಇಲಾಖೆ ಸ್ಥಾಪನೆ

    v) ಕನ್ನಡ ಭಾಷಾ ಪ್ರದೇಶಗಳ ಏಕೀಕರಣದ ಮೂಲಕ ಇಂದಿನ ಕರ್ನಾಟಕ ರಾಜ್ಯ ರಚನೆ.

20. ವಿಧಾನ ಸಭೆಗೆ ಪುನರಾಯ್ಕೆ 1957

21. 1962ರಲ್ಲಿ ಲೋಕಸಭೆಗೆ ಪ್ರವೇಶ.

22. 1966ರ ಪಂಜಾಬ್ ಆಡಳಿತ ಸುಧಾರಣೆ ಆಯೋಗದ ಅಧ್ಯಕ್ಷರು.

23. ಅಖಿಲ ಭಾರತ ವಿವೇಕಾನಂದ ಶಿಲಾಸ್ಮಾರಕ ಸಮಿತಿಯ ಮೈಸೂರು ಶಾಖೆಯ ಅಧ್ಯಕ್ಷರು.

24. ಸಂಸತ್ ಸದಸ್ಯರ ಆಡಳಿತ ಸುಧಾರಣಾ ಸಲಹಾ ಮಂಡಲಿಯ ಸದಸ್ಯರು.

25. ಅಖಿಲ ಭಾರತ ತಾಂತ್ರಿಕ ಶಿಕ್ಷಣ ಮಂಡಲಿ ಸದಸ್ಯರು 1966-1973.

26. ಕೆನಡದ ಒಟ್ಟಾವದಲ್ಲಿ ನಡೆದ ಕಾಮನ್‌ವೆಲ್ತ್ ಸಂಸದೀಯ ಸಮ್ಮೇಳನದಲ್ಲಿ ಭಾರತ ನಿಯೋಗದ ನಾಯಕರು. ಇಂಗ್ಲೆಂಡ್, ಅಮೇರಿಕ, ಕೆನಡಗಳಲ್ಲಿ ಪ್ರವಾಸ;

27. 1967ರಲ್ಲಿ ಲೋಕ ಸಭೆಗೆ ಮರು ಆಯ್ಕೆ.

28. ಭಾರತ ಸರ್ಕಾರದ ಆಡಳಿತ ಸುಧಾರಣಾ ಆಯೋಗದ ಅಧ್ಯಕ್ಷರು - 1969 ರಿಂದ 1970

29. 1969ರಲ್ಲಿ ಬಾರ್ಸಿಲೋನದಲ್ಲಿ ನಡೆದ ಆಡಳಿತ ವಿಜ್ಞಾನ ಸಮ್ಮೇಳನದಲ್ಲಿ ಭಾರತೀಯ ನಿಯೋಗದ ನಾಯಕರಾಗಿ ಭಾಗಿ.

30. 1967-68 ಸಂಸತ್‌ನ ಕಾಂಗ್ರೆಸ್ ಪಕ್ಷದ ಉಪನಾಯಕರು.

31. ಅಖಿಲಭಾರತ ಕಾಂಗ್ರೆಸ್ (ಆಡಳಿತ) ಕಾರ್ಯಕಾರಿ ಸಮಿತಿ ಸದಸ್ಯರು (1970-71);

32. ಭಾರತ ಸರ್ಕಾರದ ಕಾನೂನು ಮತ್ತು ಸಮಾಜ ಕಲ್ಯಾಣ ಖಾತೆ ಸಚಿವರು - ಜೂನ್, 1970.

33. ಹೇಗ್‌ನ ಅಂತರರಾಷ್ಟ್ರೀಯ ನ್ಯಾಯ ಮಂಡಲಿಯ ಸದಸ್ಯರಾಗಿ ಭಾರತ ಸರ್ಕಾರದಿಂದ ನಾಮಕರಣ, 1970.

34. 1971ರಲ್ಲಿ ಜನವರಿ 8ರಂದು ನವದೆಹಲಿಯಲ್ಲಿ ನಡೆದ ಕಾನೂನು ಸಚಿವರು ಮತ್ತು ಅಟಾರ್ನಿ ಜನರಲ್‌ಗಳು ಮತ್ತು ಸಾಲಿಸಿಟರ್ ಜನರಲ್‌ಗಳ ಅಂತರಾಷ್ಟ್ರೀಯ ಮಹಾಧಿವೇಶನದ ಚುನಾಯಿತ ಅಧ್ಯಕ್ಷರು.

35. 1971ರಲ್ಲಿ ಲೋಕಸಭೆಗೆ ಪುನರಾಯ್ಕೆ.

36. ಭಾರತ ಸರ್ಕಾರದ ರೈಲ್ವೆ ಸಚಿವರು 18-3-1971 ರಿಂದ ಆಗಸ್ಟ್ 1972.

37. ಬೆಂಗಳೂರು ಜಿಲ್ಲೆಯ ಚನ್ನಪಟ್ಟಣ ತಾಲ್ಲೂಕಿನಲ್ಲಿರುವ ಕೆಂಗಲ್‌ನಲ್ಲಿ ಹೊಸ ಹನುಮಂತರಾಯ ಸ್ವಾಮಿ ದೇವಾಲಯ ನಿರ್ಮಾಣ.

38. ಶೃಂಗೇರಿ ಪೀಠದ ಜಗದ್ಗುರುಗಳಿಂದ 'ರಾಷ್ಟ್ರ ರತ್ನ' ಪ್ರಶಸ್ತಿ ನೀಡಿಕೆ, 1973.

39. ಶಿವಪುರ ಧ್ವಜ ಸತ್ಯಾಗ್ರಹ ಸ್ಮಾರಕ ಭವನ ನಿರ್ಮಾಣದ ರೂವಾರಿ.

40. ಸುರಾಜ್ಯ ಪಕ್ಷ ಸ್ಥಾಪನೆ, 1978.

41. ಕಾಂಗ್ರೆಸ್ (ಐ) ಪಕ್ಷಕ್ಕೆ ಪುನರ್ ಸೇರ್ಪಡೆ. ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸದಸ್ಯರಾಗಿ ನೇಮಕ.

42. [illegible] - 1980, ಡಿಸೆಂಬರ್ 1.